ಭಾಸನ

# ಪ್ರತಿಮಾ ನಾಟಕಂ

ಸಂಪಾದಕರು

ಟಿ. ಎಸ್. ಕೃಷ್ಣಮೂರ್ತಿ





ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

ಭಾಸನ

# ಪ್ರತಿಮಾನಾಟಕಂ



ಸಂಪಾದಕ

ಟಿ. ಎಸ್. ಕೃಷ್ಣಮೂರ್ತಿ



ಪ್ರಸಾರಾಂಗ

ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

BHASANA PRATHIMANATAKAM: Edited by Dr. T.S. KrishnaMurthy Reader in Sanskrit, Govt. Arts College, Chitradurga, Published by Prasaranga, Bangalore University, Bangalore. pp. 224+xii.

Published under the Centrally Sponsored Scheme of production of books and literature in regional languages at the University level, of the Government of India in the Ministry of Education and Social Welfare, New Delhi.



ಮೊದಲ ಮುದ್ರಣ 1976
ಎರಡನೆಯ ಮುದ್ರಣ 1977
ಮೂರನೆಯ ಮುದ್ರಣ 1994

ಸಂಸ್ಕೃತ ಪಠ್ಯಪುಸ್ತಕ ಸಂಪಾದಕ ಸಮಿತಿ :
**ಪ್ರೊ. ಕೆ. ಟಿ. ಪಾಂಡುರಂಗಿ**
**ಪ್ರೊ. ಎಂ. ಪಿ. ಎಲ್. ಶಾಸ್ತ್ರಿ**
**ಶ್ರೀ ಎಂ. ಶಿವಕುಮಾರಸ್ವಾಮಿ**

ಪ್ರಕಾಶಕರು :
**ಎಸ್. ಕೆಂಡಗಣ್ಣಸ್ವಾಮಿ**
ನಿರ್ದೇಶಕರು, ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು–560 056

ಪ್ರಕಟಣ ನೆರವು :
**ಡಾ|| ಎನ್. ವಿ. ವಿಮಲ**

**ಬೆಲೆ : ರೂ. 25–00**

ಮುದ್ರಕರು :
**ಎಸ್. ಎಂ. ಹೊನ್ನಪ್ಪ**
ಕಾರ್ಯನಿರ್ವಾಹಕ ನಿರ್ದೇಶಕರು
ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ
ಬೆಂಗಳೂರು–560 056

# ಮೊದಲ ಮಾತು

ಬೆಂಗಳೂರು ವಿಶ್ವವಿದ್ಯಾಲಯವು ಕನ್ನಡದಲ್ಲಿ ಪಠ್ಯಪುಸ್ತಕಗಳನ್ನು ಪ್ರಕಟಿಸುವ ಯೋಜನೆಯ ಅಂಗವಾಗಿ ವಿವಿಧ ವಿಷಯಗಳನ್ನು ಕುರಿತ ಕೃತಿಗಳನ್ನು ಪ್ರಕಟಿಸುತ್ತಿದೆ. ಈ ಯೋಜನೆಯಡಿಯಲ್ಲಿ ಸಂಸ್ಕೃತ ಕಾವ್ಯ, ನಾಟಕ ಹಾಗೂ ಇನ್ನಿತರ ಪ್ರಕಾರಗಳಿಗೆ ಸಂಬಂಧಿಸಿದ ಪುಸ್ತಕಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ಪ್ರಕಟಿಸಲು ವಿಶ್ವವಿದ್ಯಾಲಯ ಪ್ರಾರಂಭಿಸಿದೆ. ಸಂಸ್ಕೃತ ಮೂಲ, ಕನ್ನಡ ಅನುವಾದ, ಟಿಪ್ಪಣಿ, ವಿಮರ್ಶೆಗಳನ್ನೊಳಗೊಂಡ ಈ ಪಠ್ಯ ಹಾಗೂ ಪಠ್ಯೇತರ ಪುಸ್ತಕಗಳು ವಿದ್ಯಾರ್ಥಿಗಳಿಗೆ ಉಪಯುಕ್ತವಾಗಲಿದೆ.

ಸಂಸ್ಕೃತ ಭಾಷೆ, ಸಾಹಿತ್ಯ, ತತ್ವಜ್ಞಾನ ಮುಂತಾದ ವಿಷಯಗಳಲ್ಲಿ ವಿಪುಲ ವಾಙ್ಮಯವನ್ನು ಹೊಂದಿದೆ. ಈ ವಾಙ್ಮಯದ ಅಧ್ಯಯನವು ನಮ್ಮ ದೇಶದಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿದೆ. ಇತ್ತೀಚೆಗೆ ಪಾಶ್ಚಾತ್ಯರು ವೇದ, ದರ್ಶನ, ಮತ್ತು ಕಾವ್ಯ-ನಾಟಕಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಅಧ್ಯಯನ ಮಾಡಿ ಜರ್ಮನ್, ಫ್ರೆಂಚ್, ಇಂಗ್ಲಿಷ್ ಭಾಷೆಗಳಲ್ಲಿ ಸಂಸ್ಕೃತ ಗ್ರಂಥಗಳ ಅನುವಾದ ಮಾಡಿ ಸಂಸ್ಕೃತವನ್ನು ವಿಶ್ವಭಾಷೆಯನ್ನಾಗಿ ಮಾಡಿದ್ದಾರೆ.

ಉಪನಿಷತ್ತು-ಭಗವದ್ಗೀತೆಗಳು ವಿಶ್ವದ ಎಲ್ಲ ಪ್ರಮುಖ ಭಾಷೆಗಳಲ್ಲಿ ಪ್ರಚಲಿತವಾಗಿವೆ. ಹೀಗೆ ವಿಶ್ವವ್ಯಾಪಿಯಾದ ಸಂಸ್ಕೃತ ಭಾಷೆಯ ಪ್ರಮುಖ ಗ್ರಂಥಗಳು ಆಧುನಿಕ ಭಾರತೀಯ ಭಾಷೆಗಳಲ್ಲಿಯೇ ಅಧಿಕ ಸಂಖ್ಯೆಯಲ್ಲಿ ಅನುವಾದ, ಟಿಪ್ಪಣಿ, ವಿಮರ್ಶೆಗಳೊಡನೆ ಪ್ರಕಟವಾಗದಿರುವುದು ಶೋಚನೀಯ. ನಮ್ಮ ವಿದ್ಯಾರ್ಥಿಗಳು ಇಂದಿಗೂ ಸಂಸ್ಕೃತ ಪಠ್ಯಪುಸ್ತಕಗಳನ್ನು ಇಂಗ್ಲಿಷ್ ಅನುವಾದ, ಟಿಪ್ಪಣಿಗಳ ಸಹಾಯದೊಡನೆ ಓದಲು ಕಷ್ಟಪಡುತ್ತಿರುವುದು ಆಶ್ಚರ್ಯದ ಸಂಗತಿ. ಈ ಕೊರತೆಯನ್ನು ನಿವಾರಿಸುವ ದಿಸೆಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಕಾರ್ಯನಿರತವಾಗಿದೆ. ಈ ಗ್ರಂಥಗಳ ಸಿದ್ಧತೆ ಸಂಪಾದನೆ ಹಾಗೂ ಪ್ರಕಟಣ ಕಾರ್ಯವನ್ನು ಸಂಸ್ಕೃತ ಅಧ್ಯಾಪಕರ ಸಹಕಾರದಿಂದ ನಿಯೋಜಿಸಲಾಗಿದೆ.

ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅನುಕೂಲಕ್ಕಾಗಿ ಈ ಗ್ರಂಥಗಳನ್ನು ಸಿದ್ಧಪಡಿಸಲಾಗಿದ್ದರೂ, ಸಂಸ್ಕೃತ ಕಾವ್ಯ-ನಾಟಕಗಳನ್ನು ಅನುವಾದ, ಟಿಪ್ಪಣಿಗಳ ಸಹಾಯದಿಂದ ಓದಬೇಕೆನ್ನುವ ಸಹೃದಯ ವಾಚಕರಿಗೂ ಇವು ಉಪಯೋಗಕ್ಕೆ ಬರುತ್ತವೆ. ಈ ಕೃತಿಗಳ ಪ್ರಯೋಜನ ವಿದ್ಯಾರ್ಥಿಗಳು ಹಾಗೂ ಸಾರ್ವಜನಿಕರಿಗೆ ಹೆಚ್ಚಾಗಿ ಲಭಿಸಲಿ ಎಂದು ಆಶಿಸುತ್ತೇನೆ. ಕೃತಿರಚನೆಯಲ್ಲಿ ಸಹಕಾರ ನೀಡಿದ ಸಂಪಾದಕ ಸಮಿತಿಯವರಿಗೂ, ಲೇಖಕರಿಗೂ, ಪ್ರಸಾರಾಂಗದ ನಿರ್ದೇಶಕರು ಮತ್ತು ಅವರ ಸಿಬ್ಬಂದಿ ವರ್ಗಕ್ಕೂ ಹಾಗೂ ವಿಶ್ವವಿದ್ಯಾಲಯ ಮುದ್ರಣಾಲಯದ ನಿರ್ದೇಶಕರಿಗೂ ನನ್ನ ಅನಂತ ವಂದನೆಗಳು.

ಡಾ. ಎಸ್. ಆರ್. ಶೆಟ್ಟಿ
ಕುಲಪತಿ
ಬೆಂಗಳೂರು ವಿಶ್ವವಿದ್ಯಾಲಯ

# ಮುನ್ನುಡಿ

ಸುಮಾರು 20 ವರ್ಷಗಳಿಂದ ವಿಶ್ವವಿದ್ಯಾನಿಲಯಗಳ ವಿವಿಧ ತರಗತಿಯ ವಿದ್ಯಾರ್ಥಿಗಳಿಗೆ ಭಾಸನ ಒಂದಲ್ಲ, ಒಂದು ರೂಪಕವನ್ನು ಬೋಧಿಸುವ ಮನೋಜ್ಞ ಅವಕಾಶ ನನಗೆ ಸಿಕ್ಕಿದೆ. ಅದಕ್ಕೂ ಮುನ್ನ ಭಾಸನ ರೂಪಕಗಳನ್ನು ಡಾ. ಎಚ್.ಎಲ್. ಹರಿಯಪ್ಪ, ಪ್ರೊ. ಎನ್. ಶಿವರಾಮಶಾಸ್ತ್ರಿ, ಪ್ರೊ. ಎ. ಆರ್. ಕೃಷ್ಣಶಾಸ್ತ್ರಿ ಪ್ರೊ. ಎಸ್. ರಂಗಾಚಾರ್ ಮೊದಲಾದ ಶ್ರೇಷ್ಠ ಗುರುಗಳ ಪದತಲದಲ್ಲಿ ಕುಳಿತು ಅಧ್ಯಯನ ಮಾಡುವ ಸುಯೋಗವೂ ಲಭಿಸಿತ್ತು. ಜೊತೆಗೆ ಶ್ರೀ ಸಿ. ಕೆ. ವೆಂಕಟ ರಾಮಯ್ಯನವರಂತಹ ಉದ್ದಾಮ ವಾಗ್ಮಿಗಳು ಭಾಸನನ್ನು ಕುರಿತು ಮಾಡಿದ ವಿಚಾರ ಪೂರ್ಣ ಉಪನ್ಯಾಸಗಳನ್ನೂ ಕೇಳಿ ಮೆಚ್ಚಿದ್ದೆ. ಭಾಸ ತರಗತಿಗಳು ನನಗೆ ಮಾತ್ರವಲ್ಲದೆ ನನ್ನ ವಿದ್ಯಾರ್ಥಿಗಳಿಗೂ ಪ್ರೀತಿಜನಕವಾಗಿದ್ದು ಹತ್ತಾರು ವರ್ಷಗಳು ಕಳೆದ ಮೇಲೂ ವಿದ್ಯಾರ್ಥಿಗಳು ಆ ರಸ ಸಮಯಗಳನ್ನು ನೆನೆಯುತ್ತಿದ್ದಾರೆ.

ಭಾಸ, ವಿಶ್ವದ ಶ್ರೇಷ್ಠ ಕವಿಗಳಲ್ಲಿ ಒಬ್ಬ : ಅವನ ಪ್ರತಿಮಾನಾಟಕ, ವಿಶ್ವದ ಶ್ರೇಷ್ಠ ನಾಟಕಗಳಲ್ಲಿ ಒಂದು. ಇದು ಸರ್ವವಿಧದಲ್ಲಿಯೂ 'ದೃಶ್ಯ'ಕಾವ್ಯವೇ. ಇದನ್ನು ಓದಿದರೆ ಎಷ್ಟು ಆನಂದ ಪಡೆಯಬಹುದೋ ಅದರ ಹತ್ತರಷ್ಟು ಆನಂದ ಅದನ್ನು ಉತ್ತಮವಾಗಿ ಅಭಿನಯಿಸಿದುದನ್ನು ನೋಡಿದಾಗ ಪಡೆಯಬಹುದು. ಇಂತಹ ಉತ್ಕೃಷ್ಟ ಕೃತಿಯನ್ನು ಸಂಪಾದಿಸುವ ಗೌರವವನ್ನೂ ಅದರಿಂದ ಬರುವ ಆನಂದವನ್ನೂ ಬೆಂಗಳೂರು ವಿಶ್ವವಿದ್ಯಾಲಯ ನನಗೆ ದೊರಕಿಸಿಕೊಟ್ಟಿದೆ. ಸಂಪಾದಕ ಮಂಡಲಿಯ ಸಲಹೆ ಸೂಚನೆಗಳನ್ನನುಸರಿಸಿ ಪ್ರತಿ ಶ್ಲೋಕಕ್ಕೂ ಅನ್ವಯ, ಅರ್ಥ ವಿವರಣೆಗಳನ್ನು ಕೊಟ್ಟಿದ್ದೇನೆ. ನಾಟಕದ ಸಂಭಾಷಣೆಯ ಗದ್ಯಭಾಗಗಳಿಗೂ ಹಿತ-ಮಿತವಾದ ವಿಮರ್ಶಾ ತ್ಮಕ ವಿವರಣೆಗಳಿವೆ. ಪೀಠಿಕಾ ಭಾಗದಲ್ಲಿ ಭಾಸಸಮಸ್ಯೆಯ ಗೋಜು, ಅದರ ನಾನಾ ಮುಖಗಳು, ನಾಟಕದ ವೈಶಿಷ್ಟ್ಯ, ಪಾತ್ರಗಳು, ಶೈಲಿ ಮೊದಲಾದ ವಿಷಯಗಳನ್ನು ಸ್ಪಷ್ಟವಾಗಿ ವಿಚಾರಮಾಡಿದ್ದೇನೆ. ಇದು ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಭಾಸಪ್ರಿಯ ರೆಲ್ಲರಿಗೂ ಆದರಣೀಯವೆನಿಸಿದರೆ ನಾನು ಧನ್ಯ.

ಈ ಪ್ರತಿಮಾನಾಟಕವನ್ನು ಸಂಪಾದಿಸಲು ಅವಕಾಶ ಕಲ್ಪಿಸಿಕೊಟ್ಟ ಬೆಂಗಳೂರು ವಿಶ್ವವಿದ್ಯಾಲಯಕ್ಕೂ, ಸಂಸ್ಕೃತ ವಿಭಾಗದ ಅಧ್ಯಕ್ಷರಾದ ಪ್ರೊ. ಕೆ. ಟಿ. ಪಾಂಡುರಂಗಿ ಅವರಿಗೂ, ಸಂಪಾದಕ ಮಂಡಲಿಯ ಹಿರಿಯರಾದ ವಿದ್ಯಾ ವಿಭೂಷಣ ಎಂ.ಪಿ.ಎಲ್. ಶಾಸ್ತ್ರಿಗಳವರಿಗೂ ಭಕ್ತಿಪೂರ್ಣ ವಂದನೆಗಳು. ಇದನ್ನು ಪ್ರಕಟಿಸಿದ ಪ್ರಸಾರಾಂಗದ ನಿರ್ದೇಶಕರಾದ ಮಾನ್ಯ ಎಸ್. ಕೆಂಡಗಣ್ಣಸ್ವಾಮಿ ಅವರಿಗೆ ಮತ್ತು ಮುದ್ರಣಾಲಯದ ಕಾರ್ಯನಿರ್ವಾಹಕ ನಿರ್ದೇಶಕರಾದ ಎಸ್. ಎಂ. ಹೊನ್ನಪ್ಪನವರಿಗೂ ಹಾಗೂ ಸಿಬ್ಬಂದಿ ವರ್ಗದವರಿಗೂ ನನ್ನ ಅನಂತ ಕೃತಜ್ಞತೆಗಳು.

ಪ್ರತಿಯನ್ನು ಸಿದ್ಧಗೊಳಿಸಲು ಅನುವಾಗಿ ಬಂದದ್ದಲ್ಲದೆ ವಿಮರ್ಶೆಗಳನ್ನೂ ವಿವರಣೆಗಳನ್ನೂ ಓದಿ ಕೇಳಿ ವಿಚಾರಮಾಡಿ ನನ್ನ ಬರವಣಿಗೆಗೆ ಗೌರವ ತಂದ ನನ್ನ ಕಿರಿಯ ಮಿತ್ರವೃಂದಕ್ಕೆ ನಾನು ಚಿರಋಣಿ.

ಕೊನೆಯದಾಗಿ, "ಮಣೌ ವಜ್ರಸಮುತ್ಕೀರ್ಣೆ ಸೂತ್ರಸ್ಯೇವಾಸ್ತಿ ಮೇ ಗತಿಃ" ಎಂದು ಹೇಳಿದರೆ ಹಿಂದೆ ಈ ದಿಕ್ಕಿನಲ್ಲಿ ಕೆಲಸಮಾಡಿ ಕೃತಕೃತ್ಯರೆನಿಸಿರುವ ಎಲ್ಲರಿಗೂ ನನ್ನ ಭಕ್ತಿ ಭರಿತ ಕೃತಜ್ಞತೆಗಳನ್ನರ್ಪಿಸಿದಂತಾಗಬಹುದೆಂದು ಭಾವಿಸಿದ್ದೇನೆ.

**ಟಿ. ಎಸ್. ಕೃಷ್ಣಮೂರ್ತಿ**
ರೀಡರ್
ಸಂಸ್ಕೃತ ವಿಭಾಗ
ಗೌ. ಆರ್ಟ್ಸ್ ಕಾಲೇಜ್

# ಪ್ರಕಾಶಕರ ಮಾತು

ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುವ ಉದ್ದೇಶದಿಂದ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ಪಠ್ಯ ಹಾಗೂ ಪಠ್ಯೇತರ ಹೊತ್ತಿಗೆಗಳನ್ನು ಪ್ರಕಟಿಸುವುದರ ಜೊತೆಗೆ ಇತರ ವಿಷಯದಲ್ಲಿ ಪ್ರಸಿದ್ಧರಾದ ವಿದ್ವಾಂಸರಿಂದ ಗ್ರಂಥಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಕಾರ್ಯವನ್ನು ನಿರ್ವಹಿಸುತ್ತಿದೆ. ಆಧುನಿಕ ಕನ್ನಡ ಸಾಹಿತ್ಯದ ಆವರಣಕ್ಕೆ ಅಗತ್ಯವಾದ ಹಾಗೂ ಜನಸಾಮಾನ್ಯರಿಗೆ ಜ್ಞಾನವನ್ನು ನೀಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ವಶಾಸ್ತ್ರ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ, ಜಾನಪದ, ಸಾಮಾಜಿಕ ಹಾಗೂ ಮಾನವಿಕಶಾಸ್ತ್ರ ಮುಂತಾದ ವಿಷಯಗಳ ಮೇಲೆ ಪ್ರಸಾರಾಂಗವು ಈಗಾಗಲೇ ಅನೇಕ ಹೊತ್ತಿಗೆಗಳನ್ನು ಪ್ರಕಟಿಸಬೇಕೆಂಬ ಮಹೋದ್ದೇಶವನ್ನು ಪ್ರಸಾರಾಂಗ ಹೊಂದಿದೆ.

'ಭಾಸನ ಪ್ರತಿಮಾನಾಟಕಂ' ಕೃತಿಯನ್ನು ಬೆಂಗಳೂರು ವಿಶ್ವವಿದ್ಯಾಲಯದ ಎರಡನೆ ಬಿ.ಎ., ಬಿ.ಎಸ್‌ಸಿ., ಬಿ.ಕಾಂ ತರಗತಿಗಳ ಸಂಸ್ಕೃತ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವನ್ನಾಗಿ 1994-95ನೇ ಸಾಲಿಗೆ ನಿಯಮಿಸಲಾಗಿರುವುದರಿಂದ, ಇದು ಮರು ಮುದ್ರಣವಾಗುತ್ತಿದೆ. ಈ ಕೃತಿಯ ಪ್ರಕಟಣೆಯಲ್ಲಿ ಸಹಕರಿಸಿದ ಇದರ ಸಂಪಾದಕರಾದ ಶ್ರೀ ಟಿ. ಎಸ್. ಕೃಷ್ಣಮೂರ್ತಿ ಅವರಿಗೆ, ಸಂಸ್ಕೃತ ವಿಭಾಗದ ಮುಖ್ಯಸ್ಥರಾದ ಡಾ. ವಿಹಾರ ಚಕ್ರವರ್ತಿ ಅವರಿಗೆ, ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯದ ಕಾರ್ಯನಿರ್ವಾಹಕ ನಿರ್ದೇಶಕರಾದ ಎಸ್. ಎಂ. ಹೊನ್ನಪ್ಪ ಮತ್ತು ಅವರ ಸಹೋದ್ಯೋಗಿಗಳಿಗೆ, ಸಹಕರಿಸಿದ ನನ್ನ ಸಹೋದ್ಯೋಗಿಗಳಿಗೆ ನಾನು ಆಭಾರಿ.

**ಎಸ್. ಕೆಂಡಗಣ್ಣಸ್ವಾಮಿ**
ನಿರ್ದೇಶಕರು, ಪ್ರಸಾರಾಂಗ

## ತಿದ್ದುಪಡಿ

ಪೀಠಿಕೆ ; ಪುಟ–13 'ವಿರೋಧ ಪಕ್ಷದ ಖಂಡನೆ' ಎಂಬ ಭಾಗಕ್ಕೆ ಮುಂಚೆ ಈ ಭಾಗವಿರಬೇಕು :

**(3) ಮಧ್ಯವರ್ತಿ ಪಕ್ಷ :**

ಈ ಪಕ್ಷದವರು ತುಂಬ ಜಾಗರೂಕ ಮನೋಭಾವದವರಾಗಿದ್ದು 'ಪ್ರತಿಮಾ ನಾಟಕ' ಹಾಗೂ 'ಸ್ವಪ್ನವಾಸವದತ್ತ'ಗಳು ಕಾಳಿದಾಸನಿಂದಲೇ ಸ್ತುತ್ಯನಾಗಿದ್ದ ಭಾಸನದೇ ಆಗಿರಬಹುದೆಂದೂ ಉಳಿದ ರೂಪಕಗಳ ವಿಷಯದಲ್ಲಿ ಅಷ್ಟೇ ಧೈರ್ಯದಿಂದ ಈ ಮಾತನ್ನು ಹೇಳಲಾಗದೆಂದೂ ಅಭಿಪ್ರಾಯಪಡುತ್ತಾರೆ. ಡಾ॥ ಸುಕ್ಥಂಕರ್, ಡಾ॥ ವಿಂಟರ್‌ನಿಟ್ಸ್, ಡಾ॥ ಡೇ ಮೊದಲಾದ ವಿದ್ವಾಂಸರು ಈ ಪಕ್ಷವನ್ನು ಪ್ರತಿನಿಧಿಸುತ್ತಾರೆ. ಆದರೆ ಇವರುಗಳು, ಉಳಿದ ರೂಪಕಗಳು ಹಾಗಾದರೆ ಯಾರವು ? ಇಷ್ಟೊಂದು ಸಾಮ್ಯಾಂಶಗಳು ಅವುಗಳಲ್ಲೂ ಬರಲು ಕಾರಣವೇನಿರಬಹುದೆಂಬುದನ್ನು ಸ್ಪಷ್ಟಗೊಳಿಸಿಲ್ಲ.

15ನೇ ಪುಟದಲ್ಲಿ ಕೆಳಗಿನಿಂದ ಮೇಲಕ್ಕೆ ನಾಲ್ಕನೆಯ ಸಾಲಿನಲ್ಲಿ [(2) ಪ್ಯಾರಾದಲ್ಲಿ] ನಂಬಲರ್ಹವೆನಿಸುವುದು ಎನ್ನುವುದಕ್ಕೆ ಪ್ರತಿಯಾಗಿ 'ನಂಬಲನರ್ಹವೆನಿಸುವುದು' ಎಂದು ಅಚ್ಚಾಗಿದೆ.

48ನೆಯ ಪುಟದಲ್ಲಿ ಹದಿಮೂರನೆಯ ಸಾಲಿನಲ್ಲಿ 'ಅರಿವಾಗದು' ಎಂದಿರುವುದಕ್ಕೆ ಪ್ರತಿಯಾಗಿ 'ಅರಿವಾಗದು' ಎಂದಿದೆ.




## ಪರಿವಿಡಿ

# ಪೀಠಿಕೆ

## ನಾಟಕ

ಸಂಸ್ಕೃತ ಆಲಂಕಾರಿಕರು ಕಾವ್ಯವನ್ನು 'ದೃಶ್ಯ'ವೆಂದೂ, 'ಶ್ರವ್ಯ'ವೆಂದೂ ಎರಡು ವಿಭಾಗವಮಾಡಿ ನಾಟಕಾದಿ ಪ್ರಬಂಧಗಳನ್ನು 'ದೃಶ್ಯ'ವೆಂದು ಕರೆದಿರುವರು. ದೃಶ್ಯವೆಂದರೆ ನೋಡಲು ಅರ್ಹವಾದುದು : ಆದುದರಿಂದ ಇದಕ್ಕೆ 'ರೂಪಕ' ಎಂಬ ಹೆಸರೂ ಇದೆ. ಇದಲ್ಲದೆ ಸಾಹಿತ್ಯವನ್ನು 'ಕಾವ್ಯ'ವೆಂದೂ 'ನಾಟ್ಯ'ವೆಂದೂ ವಿಭಾಗ ಮಾಡಿ 'ರೂಪಕ'ಗಳನ್ನು 'ನಾಟ್ಯ' ವಿಭಾಗದಲ್ಲಿ ಹೇಳುವುದೂ ಉಂಟು. ಜೀವನದ ನಾನಾ ಅವಸ್ಥೆಗಳನ್ನು—ಅಂದರೆ, ಲೋಕವೃತ್ತವನ್ನು ಸಂಗೀತ, ಸಾಹಿತ್ಯ ಮತ್ತು ಅಭಿನಯಗಳಿಂದ ಅನುಕರಣಮಾಡುವುದೇ ನಾಟ್ಯ.[1] ಇವರಲ್ಲಿ ದೃಶ್ಯತೆ ಇರುವುದರಿಂದ ಇದನ್ನೇ 'ರೂಪ'ವೆಂದೂ ಪಾತ್ರಗಳ ಅಭಿನಯದಿಂದ ಈ ದೃಶ್ಯತೆಯು ಬರುವುದ ರಿಂದ 'ರೂಪಕ'ವೆಂದೂ ಭಾವಿಸುವರು.[2] ಇದರಿಂದ ಕಾವ್ಯ, ನೃತ್ಯ, ಗೀತ—ಇವೆಲ್ಲವೂ ನಾಟಕದಲ್ಲಿ ಸೇರಿರುವುವೆಂಬುದು ಸ್ಪಷ್ಟವಾಗುತ್ತದೆ. ಇದನ್ನು ಪ್ರಯೋಗಿಸು ವುದಕ್ಕೆ ಚಿತ್ರ, ಶಿಲ್ಪ ಮುಂತಾದ ಇತರ ಕುಶಲ ವಿದ್ಯೆಗಳ ಸಹಾಯವೂ ಬೇಕಾಗುತ್ತದೆ. ಹೀಗೆ ನಾಟಕದಲ್ಲಿ ಹಲವು ಕಲೆಗಳು ಸಮಂಜಸವಾಗಿ ಸೇರಿ ಉತ್ತಮ ನಟರು ಅಭಿನಯಿಸಿ ದಾಗ ಒಂದು ಅಪೂರ್ವ ರಮಣೀಯತೆಯನ್ನು ತಂದು ನಾನಾ ರುಚಿಗಳುಳ್ಳ ವಿವಿಧ ಜನರಿಗೆ ಅದು ಆನಂದವನ್ನು ಉಂಟುಮಾಡುತ್ತದೆ.[3] ಆದುದರಿಂದ ಸಾಹಿತ್ಯದಲ್ಲಿ—ಅದರಲ್ಲೂ ಸಂಸ್ಕೃತ ಸಾಹಿತ್ಯದಲ್ಲಿ—ನಾಟಕಕ್ಕೆ ಶ್ರೇಷ್ಠವಾದ ಸ್ಥಾನವಿದೆ.[4] ಕಿವಿಯಂತೆ ಕಣ್ಣಿಗೂ ಹರ್ಷ ತರುವುದೇ ನಾಟಕದ ವಿಶಿಷ್ಟ ಗುಣ.

ಸಂಸ್ಕೃತ ಸಾಹಿತ್ಯದಲ್ಲಿ ಹತ್ತು ಬಗೆಯ ರೂಪಕಗಳನ್ನೊಪ್ಪಿದ್ದರೂ[5] ಇವುಗಳಲ್ಲಿ 'ನಾಟಕ'ಕ್ಕೇ ಹೆಚ್ಚಿನ ಪ್ರಾಶಸ್ತ್ಯ. ತತ್ಕಾಲದಲ್ಲಿ ನಾಟಕವು ಆನಂದವನ್ನು ತರುವ

---

[1] नानाभावोपसंपन्नं नानावस्थान्तरात्मकम् ।
लोकवृत्तानुकरणं नाट्यमेतन्मया कृतम् ।। (नाट्यशास्त्र—1–100)

[2] अवस्थानुकृतिर्नाट्यं रूपं दृश्यतयोच्यते ।
रूपकं तत्समावेशात् दशधैव रसाश्रयम् ।। (दशरूपक)

[3] नाट्यं भिन्नरुचेर्जनस्य बहुधाप्येकं समाराधनम् ।
(मालविकाग्निमित्रे कालिदासः)

[4] नाटकान्तं कवित्वम् ।

[5] ರೂಪಕಗಳು ರಸವನ್ನು ಆಶ್ರಯಿಸಿ ಹತ್ತು ವಿಧ : (1) ನಾಟಕ, (2) ಪ್ರಕರಣ, (3) ಭಾಣ, (4) ಪ್ರಹಸನ, (5) ಡಿಮ, (6) ವ್ಯಾಯೋಗ, (7) ಸಮವಕಾರ, (8) ವೀಥೀ,

ದ್ಧಾರ್ಗೆ ಜೀವನಕ್ಕೊಂದು ಸಂದೇಶವನ್ನು ಕೊಡುವುದೇ ಇದಕ್ಕೆ ಕಾರಣ. ಇದರ ನಾಯಕನು ಸಾಮಾನ್ಯನಲ್ಲ. ಧೀರೋದಾತ್ತ; ಸಾಧಾರಣ ಜೀವನೋಪಾಯನಿರತನಲ್ಲ. ಧರ್ಮಾದಿ ಚತುರ್ವಿಧ ಪುರುಷಾರ್ಥ ಸಾಧನೆಯಲ್ಲಿ ನಿರತ. ವಸ್ತು (ಕಥೆ) ಕವಿ ಕಲ್ಪಿತವಲ್ಲ, ಪ್ರಸಿದ್ಧವಾದುದು. ಎಲ್ಲ ರಸಗಳೂ ಬರುವ ಅವಕಾಶವು ಇಲ್ಲಿ ಉಂಟು. ಆದರೂ ಶೃಂಗಾರ ಅಥವಾ ವೀರರಸವೇ ಪ್ರಧಾನವಾಗಿರುತ್ತದೆ. ವಸ್ತುವಿನ್ಯಾಸದಲ್ಲಿ ಕವಿಪ್ರತಿಭೆಗೆ ಅವಕಾಶವಿರುತ್ತದೆ; ಮೂಲದಲ್ಲಿ ವಿಸಂಗತವಾದ ಘಟನೆಗಳಿದ್ದರೆ ಅವುಗಳ ವೈಷಮ್ಯವನ್ನು ತೆಗೆದು ಸಾಮಂಜಸ್ಯವನ್ನು ಕಲ್ಪಿಸಬಹುದು. ಒಂದಕ್ಕೊಂದು ಸಂಬಂಧವಿಲ್ಲದ, ಪರಸ್ಪರ ಪೋಷಕಗಳಾಗದ ಘಟನೆಗಳಿರಬಾರದು. ಹೀಗೆ ಪ್ರಸಿದ್ಧವಾದ ಕಥೆಯು ಪೂರ್ಣ ಪ್ರಯೋಜನವು ವ್ಯಕ್ತವಾಗುವಂತೆ, ಒಂದೇ ರಸಮಯತ್ವವು ಸಿದ್ಧಿಸುವಂತೆ, ಉತ್ತಮ ಧ್ಯೇಯಗಳು ಸಹೃದಯರ ಹೃದಯಂಗಮವಾಗುವಂತೆ ಇರುವ ರಚನೆಯೇ ನಾಟಕ.

ಪ್ರಸ್ತುತ ಪ್ರತಿಮಾನಾಟಕವು ಈ ಎಲ್ಲ ಅಂಶಗಳನ್ನೂ ಬಿಂಬಿಸುತ್ತದೆ. ಇಕ್ಷ್ವಾಕು ಕುಲಪ್ರದೀಪನಾದ ರಾಮನೇ ಇಲ್ಲಿನ ಧೀರೋದಾತ್ತ ನಾಯಕ; ಅವನು ಸತ್ಯಸಂಧ. ಧರ್ಮನಿರತ. ಕಥೆ ಶ್ರೀಮದ್ರಾಮಾಯಣದ ಆಧಾರದ ಮೇಲೆ ರಚಿತವಾದುದು. ಜೊತೆಗೆ ವಸ್ತುವಿನ್ಯಾಸದಲ್ಲಿ ಕವಿಪ್ರತಿಭೆಯಿಂದ ಅನೇಕ ಮಾರ್ಪಾಟುಗಳೂ ಆಗಿವೆ. ಹೊಸ ಘಟನೆಗಳೂ ಸೇರಿಸಲ್ಪಟ್ಟಿವೆ. ಎಲ್ಲಿಯೂ ಅಸಂಗತವಾದ, ಹಾಗೂ ಪರಸ್ಪರ ಪೋಷಕಗಳಾಗದ ಘಟನೆಗಳಿಲ್ಲ. ನವರಸಗಳೂ ಪ್ರತಿಪಾದಿತವಾಗಿವೆ. ಪ್ರಧಾನವಾಗಿ (ಧರ್ಮ) ವೀರ, ಶೃಂಗಾರ ಮತ್ತು ಕರುಣರಸಗಳು ಪೋಷಿತವಾಗಿ ಸಹೃದಯರಿಗೆ ಹೃದಯೋಲ್ಲಾಸಕರವೂ ವಿಕಾಸಕರವೂ ಆಗಿದೆ

## ಅಪೂರ್ವ ಸಂಶೋಧನೆ

ಕ್ರಿ.ಶ. 1910-12ರ ವರೆಗಿನ ಕಾಲವು ಸಂಸ್ಕೃತ ನಾಟಕದ ಇತಿಹಾಸದಲ್ಲಿ ಅಪೂರ್ವ ಸಂಶೋಧನೆಯ ಕಾಲ. ಕ್ರಿ.ಶ. 1910–11ರಲ್ಲಿ ಲ್ಯೂಡರ್ಸ್ ಎಂಬ ಜರ್ಮನ್ ಪಂಡಿತರು ಅಶ್ವಘೋಷನ ನಾಟಕದ ತುಂಡುಗಳನ್ನು ಮಧ್ಯ ಏಷ್ಯಾದ "ಟುರ್ಫಾನ್" ಎಂಬಲ್ಲಿ ಪಡೆದು, ಸಂಶೋಧಿಸಿ ಪ್ರಕಟಿಸಿದರು. ಸುಮಾರು ಇದೇ ಸಮಯದಲ್ಲಿ ಅನಂತಶಯನದ ಮಹಾಮಹೋಪಾಧ್ಯಾಯ ಡಾ॥ ಟಿ. ಗಣಪತಿ ಶಾಸ್ತ್ರಿಗಳು ತಿರುವಾಂಕೂರು ಸಂಸ್ಥಾನದ ದಕ್ಷಿಣ ಪ್ರಾಂತದಲ್ಲಿ ಭಾಸನದೆಂದು ಹೇಳಲಾದ

---

(9) ಅಂಕ ಮತ್ತು (10) ಈಹಾಮೃಗ—ಹೀಗೆ 'ನಾಟಕ' ಎಂಬ ಶಬ್ದವು ರೂಪಕದ ಒಂದು ವಿಧಕ್ಕೆ ಅನ್ವಯಿಸಿದರೂ ವಿಸ್ತೃತಾರ್ಥದಲ್ಲಿ ಅದನ್ನು 'ರೂಪಕ'ಕ್ಕೆ ಪರ್ಯಾಯವಾಗಿ ಸಾಮಾನ್ಯವಾಗಿ ಉಪಯೋಗಿಸುವುದುಂಟು. ನಾಟ್ಯಶಾಸ್ತ್ರದ ಮತ್ತು ನಾಟಕದ ಅಧ್ಯೇತೃಗಳು ಮುಖ್ಯವಾಗಿ ಭರತನ "ನಾಟ್ಯಶಾಸ್ತ್ರ", ಧನಂಜಯನ "ದಶರೂಪಕ" ಎಂಬ ಕೃತಿಗಳಿಗೆ ಕೃತಜ್ಞರಾಗಿರಬೇಕು.

13 ರೂಪಕಗಳನ್ನೊಳಗೊಂಡ ತಾಳೆಪತ್ರಗಳನ್ನು ಸಂಶೋಧಿಸಿದರು. ಅವು ಯಾವುವೆಂದರೆ :

(ಅ) ರಾಮಾಯಣದ ಆಧಾರದ ಮೇಲೆ ರಚಿತವಾದ

1. ಪ್ರತಿಮಾನಾಟಕಮ್
2. ಅಭಿಷೇಕನಾಟಕಮ್

(ಆ) ಮಹಾಭಾರತದ ಆಧಾರದ ಮೇಲೆ ರಚಿತವಾದ

3. ಪಂಚರಾತ್ರಮ್
4. ಮಧ್ಯಮವ್ಯಾಯೋಗಃ
5. ದೂತವಾಕ್ಯಮ್
6. ದೂತಘಟೋತ್ಕಚಮ್
7. ಕರ್ಣಭಾರಮ್
8. ಊರುಭಂಗಮ್

(ಇ) ಭಾಗವತ ಅಥವಾ ಕೃಷ್ಣಚರಿತೆಯ ಆಧಾರದ ಮೇಲೆ ರಚಿತವಾದ

9. ಬಾಲಚರಿತಮ್

(ಈ) (ಗುಣಾಢ್ಯನ) ಬೃಹತ್ಕಥೆಯ ಆಧಾರದ ಮೇಲೆ ರಚಿತವಾದ

10. ಪ್ರತಿಜ್ಞಾನಾಟಿಕಾ
11. ಸ್ವಪ್ನನಾಟಕಮ್
12. ಅವಿಮಾರಕಮ್
13. ಚಾರುದತ್ತಮ್

ಇವುಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನಮಾಡಿ ತಿರುವಾಂಕೂರು ಸಂಸ್ಕೃತ ಗ್ರಂಥಮಾಲೆಯಲ್ಲಿ 1912 ರಿಂದ 1915 ರ ಅವಧಿಯಲ್ಲಿ ಪ್ರಕಟಪಡಿಸಿದ ಡಾ॥ ಟಿ. ಗಣಪತಿಶಾಸ್ತ್ರಿಗಳು ತಮ್ಮ ಉಪೋದ್ಘಾತದಲ್ಲಿ ಈ ರೂಪಕಗಳನ್ನು ಅಲ್ಲಿಯವರೆಗೂ ಕಣ್ಮರೆಯಾಗಿದ್ದ ಭಾಸಕೃತರೂಪಕಗಳೆಂದು ಉದ್ಘೋಷಿಸಿದರು.[7] ಮೊದಮೊದಲು

---

[6] ಮಹಾಮಹೋಪಾಧ್ಯಾಯ ಪ್ರಾಕ್ತನವಿಮರ್ಶಾವಿಚಕ್ಷಣ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರು ೧೯೦೯-೧೦ ನೆಯ ಮೈಸೂರು ಆರ್ಕಿಯಾಲಜಿಕಲ್ ವರದಿಯಲ್ಲಿ 'ಸ್ವಪ್ನ-ವಾಸವದತ್ತ'ವೆಂಬ ಅಪೂರ್ವ ನಾಟಕ ಸಿಕ್ಕಿತೆಂಬ ಸಂತೋಷದ ಸಂಗತಿಯನ್ನು ಪ್ರಕಟಿಸಿದರು.

[7] ೧೯೪೧ ರಲ್ಲಿ "ಯಜ್ಞಫಲಮ್" ಎಂಬ ಏಳು ಅಂಕಗಳ ನಾಟಕ ಗೊಂಡಾಲ್‌ನಲ್ಲಿ ದೊರೆಯಿತು. ಇದರ ಕಥಾವಸ್ತು ರಾಮಾಯಣದ ಬಾಲಕಾಂಡಕ್ಕೆ ಸಂಬಂಧಿಸಿದೆ. ದಶರಥನಿಗೆ ಯಜ್ಞದ ಫಲವಾಗಿ ಪುತ್ರಪ್ರಾಪ್ತಿಯಾಗುವುದೇ ಇದರ ಮುಖ್ಯ ವಸ್ತು. ಈ ರೂಪಕದಿಂದ 'ರಾಮಾಯಣ ರೂಪಕಚಕ್ರ' ಪೂರ್ತಿಗೊಳ್ಳುತ್ತದೆ. ಇದು ಉಳಿದ ತಿರುವಾಂಕೂರು ರೂಪಕಗಳ ವಿಶಿಷ್ಟ ಲಕ್ಷಣಗಳನ್ನೇನೋ ಹೊಂದಿದೆ. ಆದರೂ ಇದು ಭಾಸಕೃತವೆಂದು ಇನ್ನೂ ಖಚಿತಗೊಂಡಿಲ್ಲ.

ಭಾರತೀಯ ಹಾಗೂ ಪಾಶ್ಚಾತ್ಯ ವಿದ್ವಾಂಸರು ಭಾಸನ ಕೃತಿಗಳು ದೊರೆತುದು ಸಂತೋಷದಲ್ಲಿ ಶ್ರೀಯುತ್ ಗಣಪತಿಶಾಸ್ತ್ರಿಗಳನ್ನು ಅಭಿನಂದಿಸಿ, ಅವರ ಸಂಶೋಧನೆಯನ್ನು ಮುಕ್ತಕಂಠದಲ್ಲಿ ಪ್ರಶಂಸಿಸಿದರು. ಆದರೆ ಈ ಪ್ರಶಂಸೆ ಬಹುಕಾಲ ಉಳಿಯಲಿಲ್ಲ. ಕಾಲಕ್ರಮದಲ್ಲಿ ಶ್ರೀ ಗಣಪತಿಶಾಸ್ತ್ರಿಗಳು ಮಾಡಿದ—ಇವು ಭಾಸನ ರೂಪಕಗಳು—ಸಿದ್ಧಾಂತಕ್ಕೆ ವಿರೋಧವು ಹುಟ್ಟಿಕೊಂಡು ಬೆಳೆಯತೊಡಗಿತು. ಇದಕ್ಕೆ ಕಾರಣವಿಷ್ಟೆ: ಈ ರೂಪಕಗಳಲ್ಲಿ ಕವಿಯ ಹೆಸರು "ಭಾಸ"ನೆಂದು ಹೇಳಲ್ಪಟ್ಟಿದ್ದರೆ ಯಾರೂ ಬದಲು ಹೇಳುವ ಹಾಗಿರಲಿಲ್ಲ. ಆದರೆ ದುರ್ದೈವದಿಂದ ಈ ರೂಪಕಗಳಲ್ಲಿ ಎಲ್ಲಿಯೂ ಮೊದಲಲ್ಲಿಯಾಗಲಿ ಕೊನೆಯಲ್ಲಿಯಾಗಲಿ ಕರ್ತೃವಿನ ಹೆಸರು ಉಲ್ಲೇಖಗೊಂಡಿಲ್ಲ. ಹೀಗಾಗಿ ಈ ಗ್ರಂಥಗಳ ಕರ್ತೃವಿನ ಮತ್ತು ಕಾಲದ ವಿಚಾರ ವಾದಗ್ರಸ್ತವಾಯಿತು. ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಒಂದು ದೊಡ್ಡ ಸಮಸ್ಯೆಯಾಯಿತು; ಪರಸ್ಪರ ವಿರುದ್ಧ ಸಿದ್ಧಾಂತಗಳಿಗೆ ಎಡೆಕೊಟ್ಟಿತು. ಈ ರೂಪಕಗಳು ತಿರುವನಂತಪುರದಲ್ಲಿ ಸಿಕ್ಕಿದುದರಿಂದ "ತಿರುವನಂತಪುರ ರೂಪಕಗಳು" (Trivandrum plays) ಎಂಬ ಹೆಸರೂ ಬಂದಿದೆ. ಒಟ್ಟಿನಲ್ಲಿ ಭಾಸನವೆಂದು ಹೇಳಲಾದ ಈ ರೂಪಕಗಳನ್ನು ಕಂಡುಹಿಡಿದ ಅಪೂರ್ವಘಟನೆ ಮತ್ತು ತಿರುವಾಂಕೂರು ಸಂಸ್ಕೃತ ಮಾಲೆಯಲ್ಲಿ ಅವುಗಳನ್ನು ಪ್ರಕಟಿಸಿದ ಸಂಗತಿ ಸಂಸ್ಕೃತ ಸಾಹಿತ್ಯದಲ್ಲಿ ಒಂದು ಯುಗಪ್ರವರ್ತಕ ಪ್ರಸಂಗವೆಂಬುದರಲ್ಲಿ ಸಂಶಯವಿಲ್ಲ.

## ಭಾಸ ಸಮಸ್ಯೆ

### 1. ಪೂರ್ವ ಪರಿಚಯ

ಈಗ ಭಾಸನ ಹೆಸರಿನಲ್ಲಿ ಮೇಲೆ ಹೇಳಿದ ಹದಿಮೂರು ರೂಪಕಗಳಿದ್ದರೂ ಈ ಶತಮಾನದ ಪ್ರಥಮ ದಶಕದವರೆಗೂ ಅವುಗಳಲ್ಲಿ ಒಂದೂ ಉಪಲಬ್ಧವಿರಲಿಲ್ಲ. ಸುಭಾಷಿತ, ಕಾವ್ಯಸಂಗ್ರಹಾದಿಗಳಲ್ಲಿ ಅವನದೆಂದು ಹೇಳಲ್ಪಟ್ಟಿರುವ ಕೆಲವು ಶ್ಲೋಕಗಳನ್ನು ಬಿಟ್ಟರೆ ಅವನ ಕೃತಿಯೆಂದು ಪಾಠಕ್ಕಾದರೂ ಮುಂದಿಡಬಹುದಾಗಿದ್ದ ಒಂದು ಸಮಗ್ರ ಗ್ರಂಥವೂ ಇರಲಿಲ್ಲ. ಆದರೂ ಭಾಸನು ಭರತವರ್ಷದ ಕವಿಪುಂಗವರಲ್ಲೊಬ್ಬನು ಎಂಬುದಕ್ಕೆ ಖಚಿತವಾದ ಸಾಕ್ಷ್ಯಗಳಿದ್ದುವು. ಅವನ ಖ್ಯಾತಿಯನ್ನು ಕಾಳಿದಾಸನೇ ಮುಂತಾದ ಶ್ರೇಷ್ಠ ಕವಿಗಳೂ ಕೊಂಡಾಡಿದ್ದಾರೆ.

(ಅ) ಕಾಳಿದಾಸನ ಮಾಲವಿಕಾಗ್ನಿಮಿತ್ರ ನಾಟಕದ ಪ್ರಸ್ತಾವನೆಯಲ್ಲಿ "ಪ್ರಥಿತಯಶಸಾಂ ಭಾಸಸೌಮಿಲ್ಲಕವಿಪುತ್ರಾದೀನಾಂ ಪ್ರಬಂಧಾನತಿಕ್ರಮ್ಯ ವರ್ತಮಾನಕವೇಃ ಕಾಲಿದಾಸಸ್ಯ ಕ್ರಿಯಾಯಾಂ ಕಥಂ ಪರಿಷದೋ ಬಹುಮಾನಃ" ಎಂದು ಹೇಳಿದೆ. ಸುಪ್ರಸಿದ್ಧರಾದ ಭಾಸ, ಸೌಮಿಲ್ಲ, ಕವಿಪುತ್ರ ಮುಂತಾದವರ ಪ್ರಬಂಧಗಳಿರುವಾಗ ಆ ರೂಪಕಗಳನ್ನು ಬಿಟ್ಟು ಈಗಿನ ಕವಿಯಾದ ಕಾಳಿದಾಸನ ನಾಟಕಕ್ಕೆ ಈ ಪ್ರೇಕ್ಷಕವೃಂದದ ಗೌರವ ಹೇಗೆ ತಾನೆ ದೊರೆಯಬಲ್ಲದು ? ಎಂಬುದು ಇದರ ಭಾವಾರ್ಥ.

ಈ ಮಾತನ್ನು ಕಾಳಿದಾಸನ ವಿನಯಕ್ಕೆ ಉದಾಹರಣೆ ಮಾತ್ರವೆಂದು ಹೇಳುವಂತಿಲ್ಲ. ಆಗಲೇ ಭಾಸನ ಹೆಸರು ಪ್ರಖ್ಯಾತವಾಗಿದ್ದುದೂ, ಅವನು ರಚಿಸಿದ್ದ ರೂಪಕಗಳು ಆಗಿನ ರಂಗಸ್ಥಳದಲ್ಲಿ ಜನಪ್ರಿಯವಾಗಿದ್ದುದೂ ಕಾಳಿದಾಸನು ತೋರಿಸಿದ ಈ ಗೌರವಕ್ಕೆ ಕಾರಣ ವಿರಬೇಕೆಂಬುದು ಸ್ಪಷ್ಟವಾಗುತ್ತದೆ.

(ಆ) ಶ್ರೀ ಹರ್ಷನ ಆಸ್ಥಾನದಲ್ಲಿದ್ದ ಶ್ರೇಷ್ಠ ಸಂಸ್ಕೃತ ಗದ್ಯಕವಿ ಬಾಣಭಟ್ಟನು (ಕಾಲ ಕ್ರಿ.ಶ. 7 ನೆಯ ಶತಮಾನ) ತನ್ನ ಹರ್ಷಚರಿತೆಯ ಪ್ರಾರಂಭದಲ್ಲಿ ಶ್ಲೇಷಪೂರ್ಣ ಶ್ಲೋಕವೊಂದರಲ್ಲಿ "ಸೂತ್ರಧಾರಕೃತಾರಂಭೈಃ ನಾಟಕೈರ್ಬಹುಭೂಮಿಕೈಃ । ಸಪತಾ-ಕೈರ್ಯಶೋ ಲೇಭೇ ಭಾಸೋ ದೇವಕುಲೈರಿವ ॥" ಎಂದು ಶ್ಲಾಘಿಸಿದ್ದಾನೆ. ಬಹು ಭೂಮಿಕೆ (ಪಾತ್ರ) ಪತಾಕೆ (ಪತಾಕಾಸ್ಥಾನ—Dramatic Irony) ಗಳಿಂದಲೂ ಕೂಡಿ ಸೂತ್ರಧಾರ (Stage-manager) ನಿಂದಲೇ ಪ್ರಾರಂಭಿಸಲ್ಪಡುವ ನಾಟಕಗಳನ್ನು ಬರೆದು ಭಾಸಕವಿಯು ಅನೇಕ ಅಂತಸ್ತುಗಳಿಂದಲೂ ಧ್ವಜಗಳಿಂದಲೂ ಶೋಭಿಸುವ ಭವ್ಯಮಂದಿರಗಳನ್ನು ನಿರ್ಮಿಸಿದ ಶಿಲ್ಪಿಯಂತೆ ಯಶಸ್ಸನ್ನು ಪಡೆದನು ಎಂಬುದು ಇದರ ತಾತ್ಪರ್ಯ

(ಇ) ಸುಮಾರು ಕ್ರಿ.ಶ. 750 ರಲ್ಲಿದ್ದ ವಾಕ್ಪತಿರಾಜನು ತನ್ನ ಗೌಡವಹೋ ಎಂಬ ಪ್ರಾಕೃತ ಗ್ರಂಥದಲ್ಲಿ "ಭಾಸಮ್ಮಿ ಜಲಣಮಿತ್ತೇ ಕನ್ತೀದೇವೇ ಅಜಪ್ಪರಹುಆರೇ । ಸೋಬನ್ಧವೇ ಅ ಬನ್ಧಮ್ಮಿ ಹರಿಯನ್ದೇ ಆ ಆಣನ್ದೋ ॥" ಎಂದು ಹೇಳಿ ಕಾಳಿದಾಸನೂ ಜಲಣಮಿತ್ತ (ಅಂದರೆ ಜ್ವಲನ = ಅಗ್ನಿಗೆ ಮಿತ್ರ = ಸಖ) ನಾದ ಭಾಸನೂ ಸುಬಂಧು ಹರಿಚಂದ್ರರೂ ತನಗೆ ಇಷ್ಟರಾದ ಕವಿಗಳು ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾನೆ.

(ಈ) ಜಯದೇವಕವಿಯು ತನ್ನ ಪ್ರಸನ್ನರಾಘವನಾಟಕದ ಪ್ರಸ್ತಾವನೆ ಯಲ್ಲಿ "ಯಸ್ಯಾಶ್ಚೋರಶ್ಚಿಕುರನಿಕರಃ ಕರ್ಣಪೂರೋ ಮಯೂರೋ ಭಾಸೋ ಹಾಸಃ ಕವಿಕುಲಗುರುಃ ಕಾಲಿದಾಸೋ ವಿಲಾಸಃ । ಹರ್ಷೋ ಹರ್ಷಃ ಹೃದಯವಸತಿಃ ಪಂಚ ಬಾಣಸ್ತು ಬಾಣಃ ಕೇಷಾಂ ನೈಷಾ ಕಥಯ ಕವಿತಾಕಾಮಿನೀ ಕೌತುಕಾಯ ॥" ಎಂದು ಬರೆದಿದ್ದಾನೆ. ಅವನು ಕವಿತೆಯನ್ನು ಕಾಮಿನಿಯನ್ನಾಗಿ ಭಾವಿಸಿ ನಾನಾ ಕವಿಗಳಿಗೂ ಆ ಕವಿತಾಕಾಮಿನಿಯ ದೇಹದಲ್ಲಿ ಸ್ಥಾನಗಳನ್ನು ತಿಳಿಸಿ ಅದರಲ್ಲಿ ಭಾಸಕವಿಯು ಕವಿತಾಕಾಮಿನಿಯ ಮುಗುಳ್ನಗೆ ಎಂದು ಕಲ್ಪಿಸಿದ್ದಾನೆ.

(ಉ) ಭಾಮಹ, ದಂಡಿ ಮತ್ತು ವಾಮನ ಮುಂತಾದ ಆಲಂಕಾರಿಕರು ಈ ರೂಪಕಗಳ ಅಂಶವನ್ನು ವಿಮರ್ಶಿಸಿದ್ದಾರೆ ಅಥವಾ ಶ್ಲೋಕಗಳನ್ನು ಅನುವಾದ ಮಾಡಿದ್ದಾರೆ. ಆಚಾರ್ಯ ಅಭಿನವಗುಪ್ತನು (ಕ್ರಿ.ಶ. 10 ನೆಯ ಶತಮಾನ) ಸ್ವಪ್ನ-ವಾಸವದತ್ತಾ ಮತ್ತು ದರಿದ್ರಚಾರುದತ್ತಗಳ ಹೆಸರನ್ನು ಹೇಳಿದ್ದಾನೆ. ಆದರೆ ಇವರಲ್ಲಿ ಯಾರೂ ಕವಿಯ ಹೆಸರನ್ನೂ ಕೃತಿಯ ಹೆಸರನ್ನೂ ಸ್ಪಷ್ಟವಾಗಿ ಸೇರಿಸಿ ಭಾಸನು ಇವುಗಳ ಕರ್ತೃ ಎಂದು ಹೇಳಿಲ್ಲ. ಆದರೆ ರಾಮಚಂದ್ರ ಮತ್ತು ಗುಣಚಂದ್ರ ಎಂಬುವರು

ತಮ್ಮ ನಾಟ್ಯದರ್ಪಣದಲ್ಲಿ ಭಾಸಕೃತ ಸ್ವಪ್ನವಾಸವದತ್ತದಿಂದ ಒಂದು ಶ್ಲೋಕವನ್ನು ಅನುವಾದ ಮಾಡಿರುವರು. ಆದರೆ ಈ ಶ್ಲೋಕ ಮಾತ್ರ ಈಗ ದೊರೆತ ಸ್ವಪ್ನವಾಸವದತ್ತದಲ್ಲಿ ದೊರೆಯುವುದಿಲ್ಲ.[೫]

(ಊ) ಸುಮಾರು 10-15 ಶ್ಲೋಕಗಳು ಸದುಕ್ತಿಕರ್ಣಾಮೃತ, ಸುಭಾಷಿತಾವಲೀ, ಸೂಕ್ತಿಮುಕ್ತಾವಲೀ, ಶಾರ್ಙ್ಗಧರಪದ್ಧತಿ ಎಂಬ ಸುಭಾಷಿತಸಂಗ್ರಹ ಗ್ರಂಥಗಳಲ್ಲಿ ಭಾಸಕೃತವೆಂದು ಪ್ರಖ್ಯಾತವಾಗಿವೆ.

(ಋ) ಭಾಸಕವಿಯು ರಚಿಸಿರುವ ರೂಪಕಗಳ ಶ್ರೇಷ್ಠತೆಯನ್ನು ಸೂಚಿಸುವ ಮನೋಹರವಾದ ಕಲ್ಪನೆಯೊಂದನ್ನು ಜಯಾನಕ, ಜೋನರಾಜ ಮತ್ತು ರಾಜಶೇಖರ ಎಂಬ ಮೂವರು ಕವಿಗಳು ಪ್ರಸ್ತಾಪಿಸಿದ್ದಾರೆ. ಭಾಸನ ಕೃತಿಗಳು ಉತ್ತಮವಾದುವೇ —ಎಂಬ ಅಂಶವನ್ನು ನಿರ್ಧರಿಸುವುದಕ್ಕಾಗಿ ಅಗ್ನಿಪರೀಕ್ಷೆ ನಡೆಯಿತೆಂಬುದೇ ಈ ಕಲ್ಪನೆ. ಜಯಾನಕ ಕವಿಯು ತನ್ನ ಪೃಥ್ವೀರಾಜಚರಿತ ಕಾವ್ಯದಲ್ಲಿ "ಸತ್ಕಾವ್ಯಸಂಹಾರವಿಧೌ ಖಲಾನಾಂ ದೀಪ್ತಾನಿ ವಹ್ನೇರಪಿ ಮಾನಸಾನಿ । ಭಾಸಸ್ಯ ಕಾವ್ಯಂ ಖಲು ವಿಷ್ಣುಧರ್ಮಾನ್ ಸೋಽಪ್ಯಾನನಾತ್ ಪಾರತವನ್ನುಮೋಚ ॥" ದೋಷಾರೋಪಣೆಯಿಂದ ಸತ್ಕಾವ್ಯವು ಶೋಭಿಸದಂತೆ ಮಾಡುವುದರಲ್ಲಿ ದುಷ್ಟರು ಅಗ್ನಿಪರೀಕ್ಷೆ ಕೂಡಾ ಮಾಡುತ್ತಾರೆಂದೂ ಕಾವ್ಯದಲ್ಲ ನೈಜ ಶ್ರೇಷ್ಠತೆಯಿದ್ದರೆ ಭಾಸನ ಕಾವ್ಯವು ಅಗ್ನಿಯಿಂದ ಪಾರಾದಂತೆ ಆಗಬೇಕೆಂದೂ ಇದರ ಭಾವ. ಪೃಥ್ವೀರಾಜಚರಿತಕ್ಕೆ ವ್ಯಾಖ್ಯಾನವನ್ನು ರಚಿಸಿದ ಜೋನರಾಜನು ಭಾಸಮುನಿ ಮತ್ತು ವ್ಯಾಸಮುನಿ ಇವರಿಬ್ಬರ ಕೃತಿಗಳು ಅಗ್ನಿಜ್ವಾಲೆಯ ಪರೀಕ್ಷೆಯಲ್ಲಿ ಸುಟ್ಟುಹೋಗದೆ ಉಳಿದವೆಂದು ಸೂಚಿಸಿದ್ದಾನೆ. ರಾಜಶೇಖರನು (ಕಾಲ ಸುಮಾರು 11–12ನೆಯ ಶತಮಾನ) ತನ್ನ ಸೂಕ್ತಿಮುಕ್ತಾವಲೀ ಎಂಬ ಗ್ರಂಥದಲ್ಲಿ ಭಾಸನನ್ನು ಕವಿಶ್ರೇಷ್ಠರಲ್ಲಿ ಪರಿಗಣಿಸಿ—"ಭಾಸನಾಟಕಚಕ್ರೇಽಪಿ ಛೇಕೈಃ ಕ್ಷಿಪ್ತೇ ಪರೀಕ್ಷಿತುಮ್ । ಸ್ವಪ್ನವಾಸವದತ್ತಸ್ಯ ದಾಹಕೋಽಭೂನ್ನ ಪಾವಕಃ ॥"—ಭಾಸನು ರಚಿಸಿದ ನಾಟಕಗಳನ್ನು ಪರೀಕ್ಷೆ ಮಾಡುವುದಕ್ಕಾಗಿ ವಿದ್ವಾಂಸರು ಬೆಂಕಿಗೆ ಒಪ್ಪಿಸಲು ಬೆಂಕಿಯು ಅವುಗಳಲ್ಲಿ ಸ್ವಪ್ನವಾಸವದತ್ತವನ್ನು ದಹಿಸಲಿಲ್ಲ ಎಂದು ಹೇಳಿದ್ದಾನೆ.[೬] ಭಾಸನ ಹೆಸರನ್ನೂ ಅವನದೆಂದು ಹೇಳಲಾದ ಸ್ವಪ್ನವಾಸವದತ್ತ

---

[೫] पादाक्रान्तानि पुष्पाणि सोष्मं चेदं शिलातलम् ।
नूनं काचिदिहासीना मां दृष्ट्वा सहसा गता ॥

[೬] ಇದನ್ನು ವಾಚ್ಯಾರ್ಥದಲ್ಲಿ ತೆಗೆದುಕೊಳ್ಳಬಾರದು. ಈ ಮಾತುಗಳಲ್ಲಿ ಅಡಗಿರುವ ಧ್ವನಿಯನ್ನು ಗಮನಿಸಿದರೆ ಭಾಸನ ಕೃತಿಗಳಿಗೆ ನಡೆದ ಪರೀಕ್ಷೆಯೆಂದರೆ ನಿರ್ದಾಕ್ಷಿಣ್ಯರಾದ ವಿಮರ್ಶಕರ ವಾದ-ಪ್ರತಿವಾದ ರೂಪದ ಅಗ್ನಿಪರೀಕ್ಷೆ ಎಂದು ಊಹಿಸಬಹುದು. ಇದರಿಂದ ಭಾಸನ ನಾಟಕಗಳಲ್ಲಿ 'ಸ್ವಪ್ನವಾಸವದತ್ತ' ಶ್ರೇಷ್ಠಕೃತಿ ಎಂಬುದು ಸ್ಪಷ್ಟವಾಗುತ್ತದೆ. ಜೊತೆಗೆ ಈ ನಾಟಕದ ಪ್ರಾರಂಭದಲ್ಲಿ ಬರುವ 'ದಾಹಕವಾಗದ ಪಾವಕ' ಲಾವಾಣಕವಹ್ನಿಯನ್ನೂ ಜ್ಞಾಪಕಕ್ಕೆ ತರುತ್ತದೆ. ಪ್ರಾಯಶಃ

ಎಂಬ ಕೃತಿಯನ್ನೂ ಸ್ಪಷ್ಟವಾಗಿ ಸೇರಿಸಿ ಹೇಳಿರುವುದು ಈ [illegible]ಗಳಲ್ಲಿಯೇ. ಆದುದರಿಂದ ರಾಜಶೇಖರನ ಈ ಪ್ರಮಾಣ ಪ್ರಾಮುಖ್ಯ ಪಡೆದಿದೆ.

ಈ ಪ್ರಮಾಣಗಳನ್ನೆಲ್ಲಾ ಪರಿಶೀಲಿಸಿದರೆ ಕಾಳಿದಾಸನಿ[illegible] ಭಾಸನೆಂಬ ಕವಿಪುಂಗವನಿದ್ದನೆಂದೂ ಅವನು ಕಾಳಿದಾಸನ ಕಾ[illegible] ಪ್ರಸಿದ್ಧಿ ಪಡೆದಿದ್ದನೆಂಬುದೂ ನಿಶ್ಚಿತವಾಗುತ್ತದೆ.

## 2. ಗಣಪತಿಶಾಸ್ತ್ರಿಗಳ ಅಭಿಪ್ರಾಯ

'ಈ ಎಲ್ಲ ರೂಪಕಗಳ ಕರ್ತೃ ಒಬ್ಬನೇ ಆಗಿರಬೇಕು.'

ತಿರುವಾಂಕೂರು ರೂಪಕಗಳಲ್ಲಿ ಪ್ರಾರಂಭದಲ್ಲಿಯಾಗಲೀ ಕೊನೆಯಲ್ಲಿಯಾಗಲೀ ಎಲ್ಲಿಯೂ ಕರ್ತೃವಿನ ಹೆಸರು ಉಲ್ಲೇಖಿತವಾಗಿಲ್ಲ. ಡಾ॥ ಗಣಪತಿಶಾಸ್ತ್ರಿ[illegible] ಈ ರೂಪಕಗಳ ಕರ್ತೃ ಒಬ್ಬನೇ ಆಗಿರಬೇಕೆಂದೂ ಅವನು ಪ್ರಸಿದ್ಧನಾದ [illegible] ಆಗಿರಬೇಕೆಂದೂ ನಿಶ್ಚಯಿಸಿದರು. ಪ್ರಸಕ್ತ ರೂಪಕಗಳಲ್ಲಿರುವ ಅನೇಕ ಪರಸ್ಪರ ಸಾಮ್ಯಾಂಶಗಳು ಇವುಗಳನ್ನು ರಚಿಸಿದ ಕವಿಯು ಒಬ್ಬನೇ ಆಗಿರಬೇಕು, ಭಾಸನೇ ಎಂಬುದನ್ನು ಸ್ಪಷ್ಟಪಡಿಸುತ್ತವೆ.

[ಅ] ನಾಟಕರಚನೆಯಲ್ಲಿ ಕಂಡುಬರುವ ಪರಸ್ಪರ ಸಾಮ್ಯಾಂಶಗಳು ;

(i) ಈ ಎಲ್ಲ ರೂಪಕಗಳೂ 'ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ' ಎಂಬ ರಂಗಸೂಚನೆಯಿಂದ ಪ್ರಾರಂಭವಾಗುತ್ತವೆ. ತರುವಾಯ ನಾಂದೀ ಅಥವಾ ಮಂಗಳ ಶ್ಲೋಕವನ್ನು ಸೂತ್ರಧಾರನೇ ಪಠಿಸುತ್ತಾನೆ. ಕಾಳಿದಾಸ, ಭವಭೂತಿ, ಹರ್ಷ ಭಟ್ಟನಾರಾಯಣ ಮುಂತಾದವರ ನಾಟಕಗಳಲ್ಲಿ ನಾಂದೀ-ಶ್ಲೋಕದ ತರುವಾಯ ಸೂತ್ರಧಾರನ ಪ್ರವೇಶವಿರುತ್ತದೆ.

(ii) ಪ್ರಸಕ್ತ ರೂಪಕಗಳಲ್ಲಿ ಇತರ ರೂಪಕಗಳಲ್ಲಿರುವ ಪ್ರಸ್ತಾವನಾ ಎಂಬುದಕ್ಕೆ ಬದಲಾಗಿ 'ಸ್ಥಾಪನಾ' ಎಂಬ ಪದವು ಪ್ರಯೋಗಿಸಲ್ಪಟ್ಟಿದೆ.

(iii) ಈ ರೂಪಕಗಳಲ್ಲಿ ಕೆಲವು—ಅಂದರೆ, ಪಂಚರಾತ್ರ, ಪ್ರತಿಜ್ಞಾಯೌಗಂಧರಾಯಣ, ಸ್ವಪ್ನವಾಸವದತ್ತ ಮತ್ತು ಪ್ರತಿಮಾನಾಟಕ—ಈ ನಾಲ್ಕರಲ್ಲೂ ಮಂಗಳ ಶ್ಲೋಕವು ಮುದ್ರಾಲಂಕಾರದಿಂದ ಕೂಡಿದೆ. ಅಂದರೆ ಮಂಗಳ ಶ್ಲೋಕದೊಳಗೆ ಆ ರೂಪಕದ ಪ್ರಧಾನ ಪಾತ್ರಗಳ ಹೆಸರುಗಳೂ ಸೇರುವಂತೆ ಮಾಡಿ ಕಥಾವಸ್ತುವನ್ನು ಸೂಚಿಸಲಾಗಿದೆ.

---

ಭಾಸನ ನಾಟಕಗಳಲ್ಲಿ ಸ್ವಪ್ನವಾಸವದತ್ತದಲ್ಲಿ ಮಾತ್ರವಲ್ಲದೆ ಪಂಚರಾತ್ರ, ಅಭಿಷೇಕನಾಟಕ, ಅವಿಮಾರಕಗಳಲ್ಲಿಯೂ ಅಗ್ನಿಯ ಪ್ರಸ್ತಾಪವಿದೆ. ಎಲ್ಲೆಡೆಯಲ್ಲಿಯೂ ಅಗ್ನಿಯು ಮಿತ್ರನೇ ಆಗುತ್ತಾನೆ. ಇದರಿಂದಲೇ ವಾಕ್ಪತಿರಾಜನು (ಮೇಲೆ 'ಇ' ನೋಡಿ) ಭಾಸನನ್ನು "ಜಲಣಮಿತ್ತ"ನೆಂದು ಕರೆದಿರಬಹುದು.

[ಉ] ಒಂದೇ ಹೆಸರಿನ ಅಪ್ರಧಾನ ಪಾತ್ರಗಳು:

ಒಂದೇ ಹೆಸರಿನ ಅಪ್ರಧಾನ ಪಾತ್ರಗಳು ಪ್ರಸ್ತುತ ರೂಪಕಗಳಲ್ಲಿ ಬರುತ್ತವೆ. ಉದಾಹರಣೆಗಾಗಿ :

ಪ್ರತಿಜ್ಞಾಯೌಗಂಧರಾಯಣ, ಸ್ವಪ್ನವಾಸವದತ್ತ, ಪ್ರತಿಮಾ ಮತ್ತು ಅಭಿಷೇಕ— ಈ ನಾಟಕಗಳಲ್ಲಿ ಬರುವ ಪ್ರತೀಹಾರಿಯ ಹೆಸರು 'ವಿಜಯಾ' ಎಂದು. ದೂತವಾಕ್ಯದಲ್ಲಿ ದುರ್ಯೋಧನನ ಕಾಂಚುಕೀಯನ ಹೆಸರೂ, ಪ್ರತಿಜ್ಞಾಯೌಗಂಧರಾಯಣದಲ್ಲಿ ಮಹಾಸೇನನ ಕಾಂಚುಕೀಯನ ಹೆಸರೂ ಬಾದರಾಯಣ.

[ಊ] ಒಂದೇ ಬಗೆಯ ಘಟನೆಗಳು:

ಪ್ರಸಕ್ತ ರೂಪಕಗಳಲ್ಲಿ ಒಂದೇ ಬಗೆಯ ಘಟನೆಗಳು ಅನೇಕ ಕಡೆ ಬರುವುದು ಆಶ್ಚರ್ಯವೆನಿಸುತ್ತದೆ. ಉದಾಹರಣೆಗಾಗಿ :

(i) ಕನ್ಯೆಯ ತಂದೆಯ ಭಾವನೆಗಳು, ಅವನ ಕರ್ತವ್ಯ—ಇವು ಪ್ರತಿಜ್ಞಾಯೌಗಂಧರಾಯಣದಲ್ಲಿ ವರ್ಣಿತವಾಗಿರುವಂತೆಯೇ ಅವಿಮಾರಕದಲ್ಲಿಯೂ ವರ್ಣಿತವಾಗಿದೆ.

(ii) ಪಂಚರಾತ್ರ ಮತ್ತು ಪ್ರತಿಮಾ ಇವುಗಳಲ್ಲಿ ವ್ಯಕ್ತಿಗಳ ಹೆಸರನ್ನು ನೆನೆಯುವ ಸಂದರ್ಭದಲ್ಲಿ ಒಂದು ಕ್ರಮವನ್ನು ಹೇಳಿದಾಗ ಅದು ಸರಿಯಲ್ಲವೆಂದೂ, ಅನಂತರ ಸರಿಯಾದ ಕ್ರಮವಾವುದೆಂದು ಕೇಳುವುದೂ ಹೇಳುವುದೂ ಒಂದರ ಪಡಿಯಚ್ಚು ಇನ್ನೊಂದರಲ್ಲಿದೆ.

(iii) ಮರಣಶಯ್ಯೆಯಲ್ಲಿದ್ದ ದಶರಥ, ವಾಲಿ ಮತ್ತು ದುರ್ಯೋಧನರಿಗೆ ಅಂತ್ಯಸಮಯದಲ್ಲಿ ಒಂದೇ ವಿಧವಾದ ದೃಶ್ಯ ದೃಗ್ಗೋಚರವಾಗುವ ವರ್ಣನೆಯಿದೆ. ಆ ವರ್ಣನೆಗಳ ಪದಸರಣಿಯೂ ಒಂದೇ ವಿಧವಾಗಿದೆ.

[ಋ] ಕೆಲವು ಪಾತ್ರಗಳಲ್ಲಿ ತೋರಿರುವ ಸಾನುಕ್ರೋಶತ್ವ:

ಪ್ರಸಕ್ತ ರೂಪಕಗಳಲ್ಲಿ ರಾಮಾಯಣ ಮತ್ತು ಮಹಾಭಾರತಗಳಲ್ಲಿ ದುರಾತ್ಮರಾಗಿ, ಘಾತಕಿಗಳಾಗಿ ವರ್ಣಿತವಾಗಿರುವ ಕೈಕೇಯಿ, ವಾಲಿ, ಹಾಗೂ ದುರ್ಯೋಧನ ಈ ಪಾತ್ರಗಳನ್ನು ಅನುಕಂಪಕ್ಕೆ ಯೋಗ್ಯವನ್ನಾಗಿಸಿ ಕ್ಷಮೆಗೆ ಅರ್ಹವಾದವುಗಳನ್ನಾಗಿ ಚಿತ್ರಿಸಲಾಗಿದೆ ಮತ್ತು ಇವಕ್ಕಾಗಿ ಮೂಲ ಕಥೆಯನ್ನು ಮಾರ್ಪಡಿಸುವುದರಲ್ಲಿ ತೋರಿರುವ ವೈಚಿತ್ರ್ಯವು ವಿಶೇಷ ಸಾಮ್ಯಾಂಶವಾಗಿದೆ.

ಇಷ್ಟೊಂದು ಸಾಮ್ಯಾಂಶಗಳನ್ನು ಪರಿಶೀಲಿಸಿದಾಗ ಅವುಗಳನ್ನು ರಚಿಸಿದ ಕವಿಯು ಒಬ್ಬನೇ ಆಗಿರಬೇಕೆಂಬುದು ನಿಸ್ಸಂದೇಹ. ಹಾಗಾದರೆ ಆ ಕರ್ತೃ ಯಾರು ? ಎಂಬುದು ಮುಂದಿನ ವಿಚಾರ.

## 3. ಪ್ರಸಕ್ತರೂಪಕಗಳ ಕರ್ತೃ, ಭಾಸ

ಮೇಲೆ ಸೂಚಿಸಿರುವಂತೆ ಈ ರೂಪಕಗಳೆಲ್ಲ ಏಕಕರ್ತೃಕಗಳಾದ ಮೇಲೆ ಇವುಗಳಲ್ಲಿ ಯಾವುದಾದರೂ ಒಂದನ್ನು ಭಾಸನು ರಚಿಸಿದ್ದೆಂದು ತೋರಿಸಿದರೂ ಎಲ್ಲವನ್ನೂ ಅವನೇ ಬರೆದವು ಎಂದು ಹೇಳಿದ ಹಾಗಾಯಿತು. ಹಿಂದೆಯೇ ವಿವರಿಸಿರುವಂತೆ ಕಾಳಿದಾಸ, ಬಾಣ ಮುಂತಾದ ಕವಿಗಳೂ ಭಾಮಹ, ಅಭಿನವಗುಪ್ತ ಮುಂತಾದ ಆಲಂಕಾರಿಕರೂ ಭಾಸನ ಹೆಸರನ್ನು ಹೇಳಿ ಅವನ ಗ್ರಂಥಗಳನ್ನು ಕೊಂಡಾಡಿದ್ದಾರಷ್ಟೆ. ಇವುಗಳಲ್ಲಿ ಜಯದೇವಕವಿಯ ಅಭಿಪ್ರಾಯದಲ್ಲಿ ಭಾಸನು ಕವಿತೆ ಎಂಬ ಸ್ತ್ರೀಯು. ಅಂದರೆ— ಸರಸ್ವತೀದೇವಿಯ 'ಹಾಸ' ಅಥವಾ ಮುಗುಳ್ನಗೆ. ಈ ಪ್ರಶಂಸೆ ಅಕ್ಷರಶಃ ನಿಜ. ಪ್ರಸಕ್ತ ರೂಪಕಗಳನ್ನು ಓದಿದಾಗ ಸಂಸಾರದ ಸಾರಾಸಾರತೆಯನ್ನು ತಿಳಿದು ಸಮದೃಷ್ಟಿಯ ಕುರುಹಾದ ಮಂದಹಾಸದಿಂದ ಕಂಗೊಳಿಸುತ್ತಿದ್ದ ಮಂಗಳಮಯ ಮೂರ್ತಿ ಭಾಸನೆಂದು ತಿಳಿಯಲು ಯಾವ ಬಾಧಕವೂ ಇರದು. ಇನ್ನು ಬಾಣನ ವಾಣಿಯನ್ನು ಪರೀಕ್ಷಿಸಿ ನೋಡಿದರೂ ಇವು ಭಾಸಕೃತವಿರಬಹುದೆಂಬ ಅಭಿಪ್ರಾಯವು ಸಿದ್ಧಿಸುತ್ತದೆ. ಏಕೆಂದರೆ ಇವೆಲ್ಲವೂ 'ಸೂತ್ರಧಾರಕೃತಾರಂಭ'ವಾಗಿವೆ. ಬಹುಭೂಮಿಕೆಗಳಿಂದಲೂ ಸುಂದರ 'ಪತಾಕಾಸ್ಥಾನ'ಗಳಿಂದಲೂ ಕೂಡಿವೆ. ಹೀಗೆಯೇ ಸ್ವಪ್ನವಾಸವದತ್ತದಲ್ಲಿ ಹೇಳಿರುವ ಲಾವಾಣಕಪಾವಕ, ಪಂಚರಾತ್ರದ ಯಜ್ಞಮಂಟಪದ ವಹ್ನಿ, ಅಭಿಷೇಕನಾಟಕದ ಸೀತಾದೇವಿಯ ಪಾತಿವ್ರತ್ಯ ಪರೀಕ್ಷೆಗಾಗಿ ಹೊತ್ತಿಸಿದ ಅಗ್ನಿ, ಅವಿಮಾರಕದಲ್ಲಿ ಕಂಡುಬರುವ ಅಗ್ನಿ—ಇವುಗಳನ್ನು ನೋಡಿದರೆ ವಾಕ್ಪತಿರಾಜ ಹೇಳಿರುವ 'ಜಲಣಮಿತ್ತ'ನಾದ ಭಾಸನವೇ ಪ್ರಸಕ್ತ ಕೃತಿಗಳು ಎಂದು ಭಾವಿಸಲಡ್ಡಿಯಿಲ್ಲ. ಇವೆಲ್ಲಕ್ಕೂ ಹೆಚ್ಚಿನ ಸಾಕ್ಷ್ಯವೆಂದರೆ ರಾಜಶೇಖರನ ಅವಿಸ್ಮರಣೀಯ ವಾಣಿ. ಅವನ ಪ್ರಕಾರ ಭಾಸನು ಒಂದಲ್ಲ, ಎರಡಲ್ಲ ಅನೇಕ ನಾಟಕಗಳನ್ನು ಬರೆದಿದ್ದನು. 'ನಾಟಕಚಕ್ರ' ಎಂದು ಹೇಳಿರುವುದರಿಂದ ರಾಮಾಯಣ, ಭಾರತ, ಬೃಹತ್ಕಥೆಗಳ ಕಥಾಭಾಗವು ಪೂರ್ತಿಗೊಳ್ಳುವಂತೆ ನಾಟಕಪಂಕ್ತಿಗಳನ್ನು ರಚಿಸಿದ್ದನೆಂಬುದೂ, ಅವುಗಳಲ್ಲಿ 'ಸ್ವಪ್ನವಾಸವದತ್ತ'ವೆಂಬುದು ಅವನ ಅತ್ಯುತ್ಕೃಷ್ಟ ಕೃತಿಯೆಂಬುದೂ ರಾಜಶೇಖರನ ಮಾತಿನಿಂದ ಸ್ಪಷ್ಟವಾಗುತ್ತದೆ. ಈಗ ಸಿಕ್ಕಿರುವ ನಾಟಕಚಕ್ರದಲ್ಲಿಯೂ 'ಸ್ವಪ್ನನಾಟಕ'ವೆಂಬ ಹೆಸರಿನ ಒಂದು ಶ್ರೇಷ್ಠ ರೂಪಕವಿದೆ. ಈ ಹೆಸರು 'ಸ್ವಪ್ನವಾಸವದತ್ತನಾಟಕ' ಎಂಬುದರ ಸಂಕ್ಷೇಪವಿರಬೇಕು. ಈ ನಾಟಕದ ಮುಖ್ಯಾಂಶವು ಉದಯನನು ವಾಸವದತ್ತೆಯನ್ನು ಸ್ವಪ್ನದಲ್ಲಿ ಕಂಡು ತನ್ನ ನಿಶ್ಚಲ ಪ್ರೇಮವನ್ನು ಮೆರೆಸುವುದು. ಜೊತೆಗೆ ಕೆಲವು ಮಾತೃಕೆಗಳಲ್ಲಿ 'ಸ್ವಪ್ನವಾಸವದತ್ತಾ ಸಮಾಪ್ತಾ' ಎಂದೂ ಮಲೆಯಾಳಿಯ ಒಂದು ಮಾತೃಕೆಯಲ್ಲಿ 'ಸ್ವಪ್ನವಾಸವದತ್ತಂ ಸಮಾಪ್ತಂ' ಎಂದೂ ಸ್ಪಷ್ಟವಾಗಿದ್ದು ಸ್ವಪ್ನನಾಟಕವೇ ಸ್ವಪ್ನವಾಸವದತ್ತನಾಟಕವೆನ್ನುವ ಊಹೆಯನ್ನು ದೃಢೀಕರಿಸುತ್ತದೆ. ರಾಜಶೇಖರನ ಮಾತಿನ ಆಧಾರದ ಮೇಲೆ 'ಸ್ವಪ್ನವಾಸವದತ್ತ' ಭಾಸನ ಕೃತಿ. ಪ್ರಸಕ್ತ ರೂಪಕಗಳು ಏಕಕರ್ತೃಕವೆಂದು ನಿಶ್ಚಯಿಸಿರುವುದರಿಂದಲೂ,

ಇವುಗಳಲ್ಲೊಂದಾದ ಸ್ವಪ್ನವಾಸವದತ್ತದ ಕರ್ತೃ ಭಾಸನೆಂದು ತೀರ್ಮಾನಿಸಿರುವುದರಿಂದಲೂ ಉಳಿದ ೧೨ ರೂಪಕಗಳ ಕರ್ತೃವೂ ಭಾಸನೇ ಎಂಬುದು ಡಾ॥ ಗಣಪತಿಶಾಸ್ತ್ರಿಗಳ ಸಿದ್ಧಾಂತ. ಸ್ಥಾಪನೆಯಲ್ಲಿ ಕವಿಕಾವ್ಯಾದಿಗಳ ಹೆಸರು ಮುಂತಾದುವು ಇಲ್ಲದಿರುವುದನ್ನು ನೋಡಿದರೆ ಈ ರೂಪಕಗಳು ಪೀಠಿಕೆಯಲ್ಲಿ ಕವಿಯ ಕಾವ್ಯದ ಹೆಸರನ್ನು ಜೋಡಿಸುವ ಸಂಪ್ರದಾಯವನ್ನು ಪಡೆದ ಕಾಳಿದಾಸನಿಗಿಂತ ಹಿಂದಿನವುಗಳಾಗಿರಬೇಕು. ಇವುಗಳು ತಮ್ಮ ಕಾವ್ಯಗುಣಗಳಿಂದಲೂ ಪ್ರಯೋಗಾರ್ಹತೆಯಿಂದಲೂ ಕವಿಸಾರ್ವಭೌಮ ಕಾಳಿದಾಸನಿಂದಲೂ ಹೊಗಳಲ್ಪಡುವ ಅರ್ಹತೆ ಗಳಿಸಿವೆಯೆಂಬುದೇನೋ ನಿಜ. ಜೊತೆಗೆ ಕಾಳಿದಾಸನ ಕೃತಿಗಳ ಭಾವ, ಭಾಷೆಗಳು ಅನೇಕ ವೇಳೆ ಪ್ರಸ್ತುತ ರೂಪಕಗಳ ಭಾವ-ಭಾಷೆಗಳನ್ನು ನೆನಪಿಗೆ ತರುವುದರಿಂದ ಉದ್ದಾಮಕವಿ ಕಾಳಿದಾಸನು ಹೆಸರಿಸಿರುವ ಪ್ರಥಿತಯಶನಾದ ಭಾಸಕವಿಯೇ ಈ ರೂಪಕಗಳ ಕರ್ತೃವೆಂದು ಹೇಳುವ ಭಾಸನಾಗಿರಬೇಕೆಂಬುದೂ ನಿಶ್ಚಿತವಾಗುತ್ತದೆ.

## 4. ಪರ, ವಿರೋಧ ಮತ್ತು ಮಧ್ಯವರ್ತಿ ಪಕ್ಷಗಳು

ಪಂಡಿತ ಗಣಪತಿಶಾಸ್ತ್ರಿಗಳು ಹೀಗೆ ತರ್ಕಬದ್ಧವಾಗಿ ವಾದಮಾಡಿ ಈ ೧೩ ನಾಟಕಗಳೂ ಏಕಕರ್ತೃಕ ಮತ್ತು ಇವುಗಳನ್ನು ಬರೆದ ಕವಿ 'ಭಾಸ' ಎಂದು ಪ್ರಕಟಿಸಿದ ಮೇಲೆ ಅನೇಕ ವಿದ್ವಾಂಸರು ತಮ್ಮ ಸಂಶೋಧನೆಯನ್ನು ಈ ಕಡೆ ಹರಿಸಿದರು, ತಮ್ಮ ಸಂಶೋಧನಾತ್ಮಕ ಅಭಿಪ್ರಾಯಗಳನ್ನೂ ಪ್ರಕಟಪಡಿಸಿದರು. ಈ ಪಂಡಿತ ಸಮೂಹವನ್ನು ಮುಖ್ಯವಾಗಿ ಎರಡು ಪಕ್ಷಗಳಾಗಿ ವಿಂಗಡಿಸಬಹುದು.

(1) ಪಂಡಿತ ಗಣಪತಿಶಾಸ್ತ್ರಿಗಳ ಅಭಿಪ್ರಾಯವನ್ನು ಸಮಗ್ರವಾಗಿ ಅಥವಾ ಸಾಮಾನ್ಯವಾಗಿ ಅನುಮೋದಿಸುವವರು : ಈ ಪಕ್ಷವನ್ನು 'ಭಾಸಪರ ಪಕ್ಷ' ಎಂದು ಹೇಳಬಹುದು

(2) ಇವು ಭಾಸಕರ್ತೃಕಗಳಲ್ಲ, ಯಾರೋ ಇತ್ತೀಚಿನವರು ರಚಿಸಿದವು ಎಂದು ಹೇಳುವವರು : ಈ ಪಕ್ಷವನ್ನು 'ಭಾಸವಿರೋಧಪಕ್ಷ' ಎಂದು ಕರೆಯಬಹುದು.

### (1) ಭಾಸಪರ ಪಕ್ಷ

ಈ ಪಕ್ಷದವರು ಪಂಡಿತ ಗಣಪತಿಶಾಸ್ತ್ರಿಗಳು ಮಂಡಿಸಿರುವ ವಾದಗಳನ್ನು ಒಪ್ಪುತ್ತಾರೆ. ಅಲ್ಲದೆ ಇವು ಏಕಕರ್ತೃಕಗಳೆಂಬುದನ್ನೂ, ಇವುಗಳ ಕರ್ತೃ ಭಾಸನೇ ಎಂಬುದನ್ನೂ ಮತ್ತೂ ದೃಢೀಕರಿಸಲು ಶ್ರೀ ಶಾಸ್ತ್ರಿಗಳು ಕೊಟ್ಟಿರುವ ಕಾರಣಗಳ ಜೊತೆಗೆ ಪ್ರಸಕ್ತ ರೂಪಕಗಳ ಪೂರ್ವಾಪರ ಸಾಮಂಜಸ್ಯ, ಮೂಲವಸ್ತುವಿನಲ್ಲಿ ಮಾಡಿಕೊಂಡಿರುವ ಬದಲಾವಣೆಗಳ ಸಾದೃಶ್ಯ, ಅವುಗಳ ಗ್ರಥನೆಯಲ್ಲಿ ತೋರಿರುವ ಕೌಶಲ, ಅವುಗಳ ದೃಶ್ಯಕಾವ್ಯತ್ವ ಮುಂತಾದುವನ್ನೂ ವಿಶದೀಕರಿಸಿದ್ದಾರೆ. ಈ ಭಾಸಪರಪಕ್ಷದವರಲ್ಲಿ ಡಾ॥ ಬ್ಯಾನರ್ಜಿ ಶಾಸ್ತ್ರಿ, ಡಾ॥ ಎಸ್. ಕೆ. ಬೆಲ್ವಾಲ್ಕರ್

ಡಾ॥ ಕೆ.ಪಿ.ಜಯಸ್ವಾಲ್ ಡಾ॥ ಹರಪ್ರಸಾದ ಶಾಸ್ತ್ರಿ, ಡಾ॥ ಲಕ್ಷ್ಮಣ್ ಸರೂಪ್, ಡಾ॥ ಪುಸಲ್ಕರ್ ಮುಂತಾದ ಸುಪ್ರಸಿದ್ಧ ಭಾರತೀಯ ವಿದ್ವಾಂಸರೂ, ಡಾ॥ ಹರ್ಮನ್ ಯಾಕೋಬಿ, ಡಾ॥ ಜಾಲಿ, ಡಾ॥ ಕೊನೋ, ಡಾ॥ ಕೀತ್, ಡಾ॥ ಲಿಂಡೆನೋ, ಡಾ॥ ಥಾಮಸ್ ಮೊದಲಾದ ಉದ್ದಾಮ ಪಾಶ್ಚಾತ್ಯ ಸಂಸ್ಕೃತ ವಿದ್ವಾಂಸರೂ ಸೇರಿದ್ದಾರೆ.

## (2) ವಿರೋಧ ಪಕ್ಷ

ಈ ಕೃತಿಗಳು ಭಾಸನವಲ್ಲ ಎಂಬ ವಿರೋಧದ ಅಭಿಪ್ರಾಯಕ್ಕೆ ನಾಂದಿ ಹೇಳಿದವರು ಪಂಡಿತ ರಾಮಾವತಾರ ಶರ್ಮ ಮತ್ತು ಭಟ್ಟನಾಥಸ್ವಾಮಿ ಎಂಬ ವಿದ್ವಾಂಸರು. ಇವರ ಜೊತೆಗೆ ಸೇರಿದ ವಿದ್ವನ್ಮಂಡಲಿಯಲ್ಲಿ ಡಾ॥ ಬಾರ್ನೆಟ್, ಡಾ॥ ಪಾರ್ಪೆಂಟರ್, ಡಾ॥ ಸಿಲ್ವೇನ ಲೆವಿ, ಡಾ॥ ವೂಲ್ನರ್ ಮುಂತಾದ ಐರೋಪ್ಯ ಸಂಸ್ಕೃತ ವಿದ್ವಾಂಸರೂ, ಡಾ॥ ಪಿ. ವಿ. ಕಾಣೆ, ಡಾ॥ ಕುಹ್ನನ್ ರಾಜ, ಡಾ॥ ಹೀರಾನಂದ ಶಾಸ್ತ್ರಿ, ಡಾ॥ ಕುಪ್ಪುಸ್ವಾಮಿಶಾಸ್ತ್ರಿ ಮತ್ತು ಕೇರಳದ ರಾಮ ಪಿಶರೋಟಿ ಕೃಷ್ಣ ಪಿಶರೋಟಿ ಸಹೋದರರೂ ಇದ್ದಾರೆ.

ಈ ಪಕ್ಷದ ಬಾರ್ನೆಟ್ ಮತ್ತು ಪಿಶರೋಟಿ ಸಹೋದರರು ಈ ರೂಪಕಗಳನ್ನು ಯಾರೋ ಕೇರಳ ಕವಿಗಳು ಏಳನೆಯ ಶತಮಾನದ ಒಳಗೆ ಬರೆದಿರಬೇಕೆಂದು ಅಭಿಪ್ರಾಯಪಡುತ್ತಾರೆ. ಅವರ ಪ್ರಕಾರ ಈ ನಾಟಕಗಳಲ್ಲಿ ಕಂಡುಬರುವ ಲಕ್ಷಣಗಳು ಕೇರಳದಲ್ಲಿ ದೊರೆತಿರುವ ಎಲ್ಲ ನಾಟಕಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಕೇರಳದಲ್ಲಿ ದೊರೆಯಿತೆಂದು ಹೇಳಲಾದ ಒಂದು ಪ್ರತಿಯಲ್ಲಿ ಶಾಕುಂತಲನಾಟಕವೂ 'ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ' ಎಂದು ಪ್ರಾರಂಭವಾಗುತ್ತದೆ. ಆದುದರಿಂದ ಈ ಲಕ್ಷಣಗಳಿಂದಲೇ ಇವು ಭಾಸನ ಕೃತಿಗಳೆಂದಾಗಲೀ ಬಹುಪ್ರಾಚೀನವೆಂದಾಗಲೀ ತೀರ್ಮಾನಿಸಿಬಿಡುವಂತಿಲ್ಲ. ಭರತನ ಶಾಸ್ತ್ರದ ಪ್ರಕಾರ, ರೂಪಕಗಳ ಪೀಠಿಕಾ ಭಾಗವನ್ನು 'ಪ್ರಸ್ತಾವನೆ' ಯೆಂದಾಗಲೀ 'ಸ್ಥಾಪನೆ' ಯೆಂದಾಗಲೀ ಕರೆಯಬಹುದು. ಆದುದರಿಂದ 'ಸ್ಥಾಪನೆ' ಎಂದು ಹೇಳಿರುವುದು ವಿಶೇಷಲಕ್ಷಣವಾಗಲಾರದು. ಈ ನಾಟಕಗಳಲ್ಲಿ ಕರ್ತೃವಿನ ಹೆಸರು ಹೇಳಲ್ಪಡದೆ ಇರಲು ಮುಖ್ಯ ಕಾರಣ 'ಚಾಕ್ಯಾರ' ರೆಂಬ ನಾಟಕಾಭಿನಯಶಾಲಿಗಳಾದ ಕೇರಳ ತಂಡದವರಿಂದ ಇವುಗಳು ಸಂಕ್ಷೇಪಗೊಳಿಸಲ್ಪಟ್ಟು ಮತ್ತು ನಾಟಕರಂಗಕ್ಕೆ ವಿಶಿಷ್ಟವಾಗಿ ಅಳವಡುವಂತೆ ಪುನರ್ರಚಿತಗೊಂಡ ಬೇರೆ ಬೇರೆ ಕವಿಗಳ ಕೃತಿಗಳು. ಈ ತಂಡದವರ ಕೈವಾಡದ ಫಲವೇ ಇವುಗಳಲ್ಲಿ ಗಣಪತಿಶಾಸ್ತ್ರಿಗಳು ತಿಳಿಸಿರುವ ಅನೇಕ ಸಾಮ್ಯಾಂಶಗಳು.

ಈಗ ಉಪಲಬ್ಧವಾಗಿರುವುದು ಬೇರಾವುದೋ 'ಸ್ವಪ್ನನಾಟಕ' ಮಾತ್ರ, ಇದು ಭಾಸಕೃತ 'ಸ್ವಪ್ನವಾಸವದತ್ತ' ವಲ್ಲ. ಏಕೆಂದರೆ ಸ್ವಪ್ನವಾಸವದತ್ತದ್ದೆಂದು ಅಭಿನವ

ಗುಪ್ತರು ಹೇಳಿರುವ ಒಂದು ಶ್ಲೋಕವು ಈ ನಾಟಕದಲ್ಲಿ ಸಿಕ್ಕುವುದಿಲ್ಲ.[10] ಹಾಗೆಯೇ ರಾಮಚಂದ್ರ ಗುಣಚಂದ್ರರು ನಾಟ್ಯದರ್ಪಣದಲ್ಲಿ ದೃಷ್ಟಾಂತವಾಗಿ ಕೊಟ್ಟಿರುವ ಒಂದು ಶ್ಲೋಕವೂ ಇದರಲ್ಲಿಲ್ಲ. ಅಷ್ಟೇ ಅಲ್ಲ, ಇದು ಭಾಸಕೃತ ಸ್ವಪ್ನವಾಸವದತ್ತ ವಲ್ಲವೆಂಬುದನ್ನು ತಿಳಿಸುವ ಉದ್ದೇಶದಿಂದಲೇ ಇದನ್ನು 'ಸ್ವಪ್ನನಾಟಕಂ' ಎಂದು ಕರೆದಿರಲು ಶಕ್ಯ. ಮೂಲ ಸ್ವಪ್ನವಾಸವದತ್ತ ಇನ್ನೂ ದೊರಕಿಲ್ಲ.

ಅದು ಸಿಕ್ಕಿದರೆ ಅಭಿನವಗುಪ್ತರು ಉದಾಹರಿಸಿರುವ ಶ್ಲೋಕವು ಅದರಲ್ಲಿ ಸಿಕ್ಕಬಹುದು. ಹೆಚ್ಚೇದರೆ ಇದು ಭಾಸನ ಮೂಲಕೃತಿಯ ಸಂಗ್ರಹ ಮತ್ತು ಸಂಸ್ಕರಣ. ಇದೇ 'ಸ್ವಪ್ನವಾಸವದತ್ತ' ವಂತೂ ಅಲ್ಲ. 'ಸ್ವಪ್ನನಾಟಕ' ಭಾಸನದಲ್ಲವೆಂದು ತೀರ್ಮಾನಿಸಿದರೆ ಈ ಚಕ್ರದಲ್ಲಿ ಉಳಿದವೂ ಭಾಸನವಲ್ಲ. ಗಣಪತಿಶಾಸ್ತ್ರಿಗಳು ಹೇಳಿರುವ ಸಾಮ್ಯಾಂಶಗಳಲ್ಲಿ ಅನೇಕ ಅಂಶಗಳು ಶಕ್ತಿಭದ್ರನಿಂದ ರಚಿತವಾಗಿರುವ 'ಆಶ್ಚರ್ಯ-ಚೂಡಾಮಣಿ' ಎಂಬ ಕೇರಳ ನಾಟಕದಲ್ಲಿ ಬರುತ್ತವೆ. ಆದರೆ ಅದರ ಕರ್ತೃ ಶಕ್ತಿಭದ್ರ ಎಂಬುದು ಕೃತಿಯಲ್ಲಿಯೇ ಸ್ಪಷ್ಟವಾಗಿದೆ.

ಇನ್ನೊಂದು ಮುಖ್ಯ ಸಂಗತಿ; ಸುಭಾಷಿತಸಂಗ್ರಹಗಳಲ್ಲಿ ಭಾಸನದೆಂದು ಹೇಳಲಾಗಿರುವ ಯಾವೊಂದು ಶ್ಲೋಕವೂ ಪ್ರಸಕ್ತ ರೂಪಕಗಳಲ್ಲಿ ಬಂದಿಲ್ಲ. ಆದುದರಿಂದ ಇವು ಭಾಸನ ರೂಪಕಗಳಲ್ಲ. ಆಗಿದ್ದಲ್ಲಿ ಅಷ್ಟೊಂದು ಶ್ಲೋಕಗಳಲ್ಲಿ ಯಾವುದಾದರೂ ಒಂದಾದರೂ ಇವುಗಳಲ್ಲಿ ಎಲ್ಲಾದರೂ ಬರಬೇಕಾಗಿತ್ತು.

ಪ್ರತಿಮಾನಾಟಕ, ಚಾರುದತ್ತ ಇವುಗಳನ್ನು ಸಾವಧಾನವಾಗಿ ಪರಿಶೀಲಿಸಿದರೆ ಇವು ಕ್ರಮವಾಗಿ ಕಾಳಿದಾಸನ ರಘುವಂಶವನ್ನೂ ಶೂದ್ರಕನ ಮೃಚ್ಛಕಟಿಕವನ್ನೂ ಆಧರಿಸಿ ಬರೆದ ಇತ್ತೀಚಿನ ಕವಿಗಳ ರೂಪಕಗಳು ಎಂಬುದನ್ನು ಊಹಿಸಬಹುದು. ಈ ರೂಪಕಗಳಲ್ಲಿರುವ ಕೆಲವು ಸಂಪ್ರದಾಯಗಳೂ ಅನೇಕ ಪದಗಳೂ ಕೇರಳ ಪ್ರಾಂತದ ಭಾಷೆಯ ಸಂಪರ್ಕವನ್ನೇ ಪ್ರತಿಬಿಂಬಿಸುತ್ತವೆ. ಆದುದರಿಂದ ಇದನ್ನು 'ಭಾಸನಾಟಕ-ಚಕ್ರ'ವೆಂದು ಹೇಳುವುದಕ್ಕಿಂತ ಕೇರಳೀಯ 'ಚಾಕ್ಯನಾಟಕಚಕ್ರ' ಎಂದು ಕರೆಯುವುದೇ ನ್ಯಾಯವಾದುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

## ವಿರೋಧಿ ಪಕ್ಷದ ಖಂಡನೆ

ಹೀಗೆ ವಿರೋಧಿ ಪಕ್ಷದವರು ಪ್ರಸ್ತುತ ರೂಪಕಗಳು ಪ್ರಖ್ಯಾತನಾದ ಭಾಸಕವಿ-ಯವಲ್ಲವೆಂದು ಡಾ॥ ಗಣಪತಿಶಾಸ್ತ್ರಿಗಳ ವಾದವನ್ನು ನಿರಾಕರಿಸಿದ್ದಾರೆಯೇ ವಿನಾ ಇವುಗಳ ಕರ್ತೃ ಯಾರು, ಅವನ ಕಾಲ ಯಾವುದು, ಎಂಬುದನ್ನು ಖಚಿತವಾಗಿ ತಿಳಿಸಲು ಶಕ್ಯರಾಗಿಲ್ಲ. ಅವರ ನಿರಾಕರಣೆಯನ್ನೂ ಅವರು ಅದಕ್ಕಾಗಿ ಕೊಟ್ಟಿರುವ

---

[10] सञ्चितपक्ष्मकपाटं नयनद्वारं स्वरूपताडनेन ।
उत्पाट्य च प्रविष्टा हृदयगृहं मे नृपतनूजा ॥

ನಕಾರಾತ್ಮಕ ಪ್ರತಿವಾದಗಳನ್ನೂ ಡಾ॥ ಗಣಪತಿಶಾಸ್ತ್ರಿಗಳು ಮತ್ತೆ ವಿಮರ್ಶೆ ಮಾಡಿ ತಮ್ಮ ವಾದವನ್ನೇ ಪುಷ್ಟೀಕರಿಸಿದ್ದಾರೆ. ಆಶ್ಚರ್ಯಚೂಡಮಣಿ ಮೊದಲಾದ ಕೇರಳ ನಾಟಕ ಸಾದೃಶ್ಯವಾದವು ಯಾವುದನ್ನೂ ಖಚಿತಗೊಳಿಸುವುದಿಲ್ಲ. ಸ್ವಪ್ನವಾಸವದತ್ತಾದಿಗಳ ಅನುಕರಣ ಅದರಲ್ಲಿಯೋ ಅಥವಾ ಸ್ವಪ್ನವಾಸವದತ್ತ ಮುಂತಾದುವೇ ಆಶ್ಚರ್ಯ ಚೂಡಾಮಣಿಯ ಅನುಕರಣಗಳೋ ಇದನ್ನು ನಿರ್ಧರಿಸಲು ಸಾಧ್ಯವಿಲ್ಲ. ಶ್ರೀಮಾನ ಗಣಪತಿಶಾಸ್ತ್ರಿಗಳು ಕ್ರಿ.ಶ. 6–7ನೇ ಶತಮಾನವು ಕೇರಳನಾಟಕಕ್ಷೇತ್ರದ ಪುನರುಜ್ಜೀವನ ಯುಗವೆಂದೂ ಆ ಕಾಲದಲ್ಲಿ ರಚಿಸಲ್ಪಟ್ಟ ನಾಟಕಗಳು ಹಿಂದೆ ಇದ್ದು ಪ್ರಖ್ಯಾತಿ ಗಳಿಸಿದ ನಾಟಕಗಳ ಸಂಪ್ರದಾಯವನ್ನೇ ಮಾದರಿಯಾಗಿಟ್ಟುಕೊಂಡು ರಚಿತವಾಗಿರಬೇಕೆಂದೂ ಆದುದರಿಂದಲೇ ಕೇರಳ ನಾಟಕಗಳಲ್ಲಿ ಭಾಸನಾಟಕಗಳ ಸಾಮ್ಯಾಂಶಗಳು ಇರಬೇಕೆಂದೂ ಹೇಳಿದ್ದಾರೆ. ಹೀಗೆಯೇ ಪ್ರತಿಮಾನಾಟಕ–ರಘುವಂಶ ಮತ್ತು ಚಾರುದತ್ತ–ಮೃಚ್ಛ ಕಟಿಕ ಇವುಗಳ ಪೌರ್ವಾಪರ್ಯಚರ್ಚೆಯೂ ಎರಡು ಕಡೆಯೂ ಅಲಗಿನಿಂದ ಕೂಡಿದ ಕತ್ತಿಯಂತೆ. ಆದರಲ್ಲಿಯೂ ಪೂರ್ವಸೂರಿಗಳಿಂದ ತಾನು ಉಪಕೃತನಾಗಿರುವುದನ್ನು ಕಾಳಿದಾಸನೇ ಕೃತಜ್ಞತೆಯಿಂದ ನೆನೆದಿದ್ದಾನೆ. ಆ ಪೂರ್ವಸೂರಿಗಳಲ್ಲಿ ವಾಲ್ಮೀಕಿಯಂತೆ ಭಾಸನೂ ಇರಬೇಕು.

ಅಭಿನವಗುಪ್ತರಿಂದ ಮತ್ತು ನಾಟ್ಯದರ್ಪಣಕಾರರಿಂದ ಉದಾಹೃತವಾದ ಶ್ಲೋಕಗಳು ತಾಳೆಪತ್ರಗಳ ಲೇಖಕರಿಂದ ಬಿಟ್ಟುಹೋಗಿರಬಹುದು. ಆದರೂ ಆ ಸನ್ನಿವೇಶಗಳು ಈಗ ದೊರಕಿರುವ ಸ್ವಪ್ನವಾಸವದತ್ತದಲ್ಲಿ ಇದ್ದೇ ಇವೆ. ನಾಟ್ಯದರ್ಪಣವು ಈಗಿರುವ ಗದ್ಯಭಾಗವನ್ನು ಪದ್ಯರೂಪವಾಗಿ ಹೇಳಿರಬಹುದು. ಕೈಬರವಣಿಗೆಯ ಕಾಲದಲ್ಲಿ ಪ್ರಸಕ್ತ ರೂಪಕವು ಕಂಠಸ್ಥವಾಗಿದ್ದು ಬರವಣಿಗೆಯ ಸಮಯದಲ್ಲಿ ಅಕಸ್ಮಾತ್ ಬಿಟ್ಟು ಹೋಗಿರಬಹುದು, ಅಥವಾ ಪಾಠಭೇದಗಳಿದ್ದುದೂ ಇದಕ್ಕೆ ಕಾರಣವಾಗಿರಬೇಕು.

ಇನ್ನೂ ಸುಭಾಷಿತಗಳಲ್ಲಿ ಭಾಸನದೆಂದು ಹೇಳಿರುವ ಶ್ಲೋಕಗಳಲ್ಲಿ ಒಂದಾದರೂ ಪ್ರಸಕ್ತ ರೂಪಕಗಳಲ್ಲಿ ಇಲ್ಲವೆಂಬುದೇನೋ ನಿಜ. ಆದರೆ ನಮಗೆ ಭಾಸಕೃತ ರೂಪಕಗಳೆಲ್ಲವೂ ದೊರಕಿವೆಯೆಂಬುದನ್ನು ಹೇಳಲು ಸಾಧ್ಯವೆ? ಕೆಲವು ಇನ್ನೂ ಅದೃಶ್ಯವಾಗಿದ್ದು ಅವುಗಳಲ್ಲಿ ಈ ಶ್ಲೋಕಗಳಿರಬಹುದು; ಅಥವಾ ಭಾಸನು ತನ್ನ ರೂಪಕಗಳಲ್ಲಿಲ್ಲದ ಸ್ವತಂತ್ರ ಶ್ಲೋಕಗಳನ್ನೂ ರಚಿಸಿದ್ದಿರಬಹುದು. ಈ ಶ್ಲೋಕಗಳು ಪ್ರಸಕ್ತ ರೂಪಕಚಕ್ರದಲ್ಲಿ ಇಲ್ಲವೆಂದ ಮಾತ್ರಕ್ಕೆ ಈ ರೂಪಕಗಳೇ ಭಾಸನವಲ್ಲ ಎಂದು ತೀರ್ಮಾನ ಮಾಡುವುದು ತಪ್ಪು.

ಗ್ರಂಥಕರ್ತನು ಭಾಸನೆಂದು ರೂಪಕಗಳಲ್ಲೇ ಎಲ್ಲೂ ಹೇಳಿಲ್ಲವಾದುದರಿಂದ, ಪರ ಹಾಗೂ ವಿರೋಧ ಪಕ್ಷಗಳು ಪ್ರಬಲ ವಾದಗಳನ್ನು ಒಡ್ಡುತ್ತಿರುವುದರಿಂದ, ಈ ಸಮಸ್ಯೆಯನ್ನು 'ಇದಮಿತ್ಥಂ' ಎಂದು ನಿಷ್ಕರ್ಷಿಸಿ ಹೇಳುವಂತಿಲ್ಲ. ಆದರೂ ಭಾಸಪರ ಪಕ್ಷದವರು ಸಕಾರಣವಾಗಿ ಭಾಸನ ಕರ್ತೃತ್ವವನ್ನು ಪ್ರತಿಪಾದಿಸಿರು

ವುದರಿಂದಲೂ, ವಿರೋಧ ಪಕ್ಷದವರು ಬೇರೆ ಯಾವ ಹೆಸರನ್ನೂ ಹೇಳಲಾಗದೇ ಇರುವುದರಿಂದಲೂ ಈ ರೂಪಕಗಳು ಭಾಸಕೃತವೆಂದೇ ಇಟ್ಟುಕೊಳ್ಳಬಹುದು. ಹೇಗೇ ಆಗಲಿ, ಈ ಹದಿಮೂರು ರೂಪಕಗಳನ್ನು ಸಂಶೋಧಿಸಿ ಪ್ರಕಟಪಡಿಸಿದ ಗಣಪತಿ ಶಾಸ್ತ್ರಿಗಳು ಸಾರಸ್ವತ ಲೋಕದ ಕೃತಜ್ಞತೆಗೆ ಸರ್ವಥಾ ಅರ್ಹರಾಗಿರುತ್ತಾರೆಂಬುವುದು ನಿರ್ವಿವಾದ.

## ಭಾಸನ ಕಾಲ, ದೇಶ ಮತ್ತು ವ್ಯಕ್ತಿತ್ವ

ಭಾರತೀಯ ಸಾಹಿತ್ಯ ಚರಿತ್ರೆಯಲ್ಲಿಯೇ ಅತ್ಯಂತ ಗೋಜಿನ ಸಮಸ್ಯೆಯೆಂದರೆ ಸಂಸ್ಕೃತ ಕವಿಗಳ ಕಾಲದ ವಿಚಾರ. ಭಾಸನ ಕಾಲದ ವಿಚಾರದಲ್ಲಂತೂ ಭಾಸಪರ ಪಕ್ಷದವರೂ ಸಹ ಪಂಡಿತ ಗಣಪತಿಶಾಸ್ತ್ರಿಗಳ ತೀರ್ಮಾನವನ್ನು ಸಾಮಾನ್ಯವಾಗಿ ಒಪ್ಪುವುದಿಲ್ಲ. ಪಾಶ್ಚಾತ್ಯ ವಿದ್ವಾಂಸರ ಪ್ರಕಾರ ಭಾಸನ ಕಾಲವು ಕ್ರಿ.ಶ. 2ನೆಯ ಶತಮಾನದಿಂದ ಕ್ರಿ.ಶ. 7ನೆಯ ಶತಮಾನದವರೆಗೂ ವಿಭಿನ್ನವಾಗಿರುತ್ತದೆ. ಭಾರತೀಯ ವಿದ್ವಾಂಸರ ಪ್ರಕಾರವಂತೂ ಒಬ್ಬರು ಕ್ರಿ.ಪೂ. 5ನೆಯ ಶತಮಾನವೆಂದರೆ, ಇನ್ನೊಬ್ಬರು ಕ್ರಿ.ಶ. 10ನೆಯ ಶತಮಾನದವರೆಗೂ ಹೋಗುತ್ತಾರೆ. ಈ ಮಧ್ಯೆ 1400 ವರ್ಷಗಳ ಅಂತರದಲ್ಲಿ ಒಬ್ಬೊಬ್ಬರೂ ಒಂದೊಂದು ಶತಮಾನವನ್ನು ನಿರ್ದೇಶಿಸುತ್ತಾರೆ. ಇದಕ್ಕೆ ಬಾಹ್ಯ ಮತ್ತು ಆಂತರಿಕ ಪ್ರಮಾಣಗಳ ಸಹಾಯದಿಂದ ಕೆಳಗಿನ ಅವಧಿ ಮತ್ತು ಮೇಲಿನ ಅವಧಿಗಳನ್ನು ಗುರುತಿಸಬಹುದು.

(1) ಮಾಲವಿಕಾಗ್ನಿಮಿತ್ರದ ಪ್ರಸ್ತಾವನೆಯ ಆಧಾರದ ಮೇಲೆ ಭಾಸನು ಕಾಳಿದಾಸನಿಗಿಂತ ಹಿಂದಿನವನೆಂಬುದು ಗೊತ್ತಾಗುತ್ತದೆ. ಆದರೆ ಕಾಳಿದಾಸನ ಕಾಲವೇ ಬಿಚ್ಚಲಾರದ ಗಂಟಾಗಿದೆ. ಕೆಲವರು ಅವನು ಕ್ರಿ.ಪೂ. 2ನೆಯ ಶತಮಾನದಲ್ಲಿದ್ದನೆಂದು ಅಭಿಪ್ರಾಯಪಟ್ಟರೆ ಮತ್ತೆ ಕೆಲವರು ಕ್ರಿ.ಶ. 5ನೆಯ ಶತಮಾನದಲ್ಲಿದ್ದನೆಂದು ಹೇಳುತ್ತಾರೆ. ಇನ್ನು ಭಾಸನ ಕಾಲ ಖಚಿತವಾಗಿ ತಿಳಿಯುವುದಾದರೂ ಹೇಗೆ?

(2) ಬಾಣಭಟ್ಟನು ಭಾಸನ ಯಶಸ್ಸನ್ನು ಹರ್ಷಚರಿತೆಯ ಪೀಠಿಕಾ ಶ್ಲೋಕದಲ್ಲಿ ಪ್ರಸ್ತಾಪಿಸಿದ್ದಾನೆ. ಇದರಿಂದ ಭಾಸನು ಬಾಣನಿಗಿಂತ ಹಿಂದಿನವನೆನ್ನುವುದು ಖಚಿತವಾಯಿತು. ಬಾಣಭಟ್ಟನ ಕಾಲ ಕ್ರಿ.ಶ. 7ನೆಯ ಶತಮಾನವೆಂಬುದು ಖಚಿತವಾಗಿದೆ. ಇದರಿಂದ ಕ್ರಿ.ಶ. 7ನೆಯ ಶತಮಾನಕ್ಕೂ ಹಿಂದೆ ಭಾಸನಿದ್ದನೆಂಬ ಅಭಿಪ್ರಾಯ ನಂಬಲನರ್ಹವೆನಿಸುವುದು.

(3) ಕ್ರಿ.ಶ. 6ನೆಯ ಶತಮಾನದಲ್ಲಿದ್ದ ದಂಡಿ ಭಾಮಹ ಮುಂತಾದವರು ಮಾಡಿರುವ ಭಾಸನ ಕೃತಿಗಳ ವಿಮರ್ಶೆ ಮುಂತಾದುವೂ ಇದನ್ನೇ ಪುಷ್ಟೀಕರಿಸುತ್ತವೆ.

ಇದು ಕೆಳಮಿತಿ.

(4) ಭಾಸನ ರೂಪಕಗಳಿಗೆ ರಾಮಾಯಣ, ಭಾರತ, ಭಾಗವತ ಮತ್ತು ಬೃಹತ್ಕಥೆಗಳು ಬಹುಮಟ್ಟಿನ ಆಧಾರವಾಗಿವೆ. ಕ್ರಿ.ಪೂ. 5 ಅಥವಾ 6ನೆಯ ಶತಮಾನದ ವೇಳೆಗೆ ಅವು ಪ್ರಚಾರದಲ್ಲಿದ್ದವು. ಉದಯನ ರೂಪಕಗಳಲ್ಲಿ ಬರುವ ಉದಯನ, ದರ್ಶಕ, ಪ್ರದ್ಯೋತ ಮೊದಲಾದವರು ಐತಿಹಾಸಿಕ ವ್ಯಕ್ತಿಗಳೂ ಹೌದು. ಅವರ ಕಾಲ ಕ್ರಿ.ಪೂ. 6 ನೆಯ ಶತಮಾನ. ಆದುದರಿಂದ ಮೇಲಿನ ಮಿತಿ ಕ್ರಿ.ಪೂ. 6ನೆಯ ಶತಮಾನಕ್ಕೆ ಹಿಂದಿನದಾಗುವುದೂ ಸಾಧ್ಯವಿಲ್ಲ.

ಅಪಾಣಿನೀಯ ಪ್ರಯೋಗಗಳೂ ಭರತನ ನಾಟ್ಯಶಾಸ್ತ್ರ ಸಂಪ್ರದಾಯವನ್ನು ಅನುಸರಿಸದೇ ಇರುವುದೂ ಭಾಸನು ಅವರಿಗಿಂತ ಹಿಂದಿನವನೆಂಬುದನ್ನು ಸೂಚಿಸುವುದೆಂದು ಕೆಲವರ ಮತ. ಪಾಣಿನಿ ಭರತನ ನಾಟ್ಯಶಾಸ್ತ್ರಕ್ಕಿಂತ ಹಿಂದಿನವನು. ಪಾಣಿನಿಯ ಕಾಲ ಕ್ರಿ.ಪೂ. 4ನೆಯ ಶತಮಾನವಾದರೆ ಇವನ ಕಾಲ ಕ್ರಿ.ಪೂ. 5ನೆಯ ಶತಮಾನವಿರಬಹುದು.

(5) ಪ್ರತಿಮಾನಾಟಕದಲ್ಲಿ ಹೇಳಲ್ಪಟ್ಟಿರುವ ಮಾನವೀಯ ಧರ್ಮಶಾಸ್ತ್ರ ಬಾರ್ಹಸ್ಪತ್ಯ, ಅರ್ಥಶಾಸ್ತ್ರ ಮುಂತಾದ ಅನೇಕ ಶಾಸ್ತ್ರಗ್ರಂಥಗಳು ಪ್ರಾಚೀನವಾದವು. ಅವುಗಳಲ್ಲಿ ಕೆಲವು ಶಾಸ್ತ್ರಗ್ರಂಥಗಳ ವಿವರ ಗೊತ್ತಾಗಿಲ್ಲ. ಪ್ರಾಚೇತಸ ಶ್ರಾದ್ಧಕಲ್ಪ ಹಾಗೂ ಮಾಹೇಶ್ವರ ಯೋಗಸೂತ್ರ ಮುಂತಾದವುಗಳನ್ನು ಇಂಥ ಗ್ರಂಥಗಳಿಗೆ ಉದಾಹರಿಸಬಹುದು. ಇವು ಕ್ರಿ.ಪೂ. 6 ನೆಯ ಶತಮಾನದಲ್ಲಿದ್ದಿರಬಹುದು. ಪ್ರತಿಮಾನಾಟಕದಲ್ಲಿ ವರ್ಣಿತವಾಗಿರುವ ಪ್ರತಿಮಾಗೃಹ ಮತ್ತು ಅದರಲ್ಲಿ ಸಣ್ಣ ಮರಳನ್ನು ಹಾಸುವುದು. ಇವು ಕ್ರಿ.ಪೂ. 5 ನೆಯ ಶತಮಾನದಲ್ಲಿ ರಚಿತವಾಗಿರಬಹುದೆಂದು ಹೇಳಲಾದ ಆಪಸ್ತಂಬಸೂತ್ರದಲ್ಲಿ ದೇವಾಲಯಗಳಿಗೆ ಸಂಬಂಧಿಸಿದಂತೆ ಉಕ್ತವಾಗಿವೆ. ಇದೊಂದು ಸಂಪ್ರದಾಯವೇ ಆಗಿದ್ದರೆ ಭಾಸನು ಆಪಸ್ತಂಬದ ಕಾಲಕ್ಕೆ ದೂರದವನಾಗಿರಲಾರ.

(6) ಅಶ್ವಘೋಷನ ಬುದ್ಧಚರಿತದಲ್ಲಿ 'ಕಾಷ್ಠಂ ಹಿ ಮಥ್ನನ್ ಲಭತೇ ಹುತಾಶಂ' ಎಂಬ ಶ್ಲೋಕವಿದೆ. ಇದರ ಭಾಷೆ, ಭಾವ ಎರಡೂ ಭಾಸನ ಪ್ರತಿಜ್ಞಾ ಯೌಗಂಧರಾಯಣದ ಪ್ರಥಮಾಂಕದ ಕೊನೆಯ ಶ್ಲೋಕ 'ಕಾಷ್ಠಾದಗ್ನಿರ್ಜಾಯತೇ ಮಥ್ಯಮಾನಾತ್' ಎಂಬ ಶ್ಲೋಕವನ್ನು ನೆನಪಿಗೆ ತರುತ್ತದೆ. ಅಶ್ವಘೋಷನ ಕಾಲ ಕ್ರಿ.ಪೂ. 1ನೆಯ ಶತಮಾನ. ಅವನು ಭಾಸನ ಶ್ಲೋಕವನ್ನು ಅನುಕರಿಸಿ ಮಾಡಿದ್ದರೆ ಭಾಸನ ಕಾಲವು ಕ್ರಿ.ಪೂ. 4 ಅಥವಾ 3 ನೆಯ ಶತಮಾನವಾಗಬಹುದು. ಆದರೆ ಚಂದ್ರಗುಪ್ತಮೌರ್ಯನ ಹಿಂದಿನ ದೊರೆ ಉಗ್ರಸೇನ ಪದ್ಮನ ಸಮಕಾಲೀನನಾಗಿರಬಹುದೆಂಬುದು ಕೆಲವರ ಊಹೆ. ಆಗ ಅರ್ಥಶಾಸ್ತ್ರದ ಪ್ರಣೇತೃ ಕೌಟಿಲ್ಯನ ಸಮಾನಾಯುಷ್ಕನೂ ಆಗುತ್ತಾನೆ.

## ಭಾಸನ ದೇಶ

ದಕ್ಷಿಣದೇಶದ ಪಿಶರೋಟಿ ಮುಂತಾದ ವಿದ್ವಾಂಸರು ಭಾಸನು ದಕ್ಷಿಣದೇಶದವನಾಗಿರಬೇಕೆಂಬ ವಾದವನ್ನು ಮಂಡಿಸಿದ್ದಾರೆ. ಅಷ್ಟೇ ಅಲ್ಲ; ಅವನು ಕೇರಳೀಯನೆಂದೂ ಹೇಳುತ್ತಾರೆ. ಅವರು ಕೊಟ್ಟಿರುವ ಕಾರಣಗಳು ಈ ರೀತಿ ಇವೆ :

1. ಭಾಸನದೆಂದು ಹೇಳಲಾದ ರೂಪಕಗಳು ಕೇರಳದಲ್ಲೇ ದೊರಕಿದವು.

2. ರಾಮನ ಪಟ್ಟಾಭಿಷೇಕದ ಸಮಯದಲ್ಲಿ ಸೀತೆ ಅವನ ಬಳಿ ಇರುವುದಿಲ್ಲ (ಪ್ರತಿಮಾನಾಟಕ-ಪ್ರಥಮಾಂಕ). ಈ ಸಂಪ್ರದಾಯ ಕೇರಳಸಂಪ್ರದಾಯ ಮಾತ್ರ.

3. ಪ್ರತಿಜ್ಞಾನಾಟಕದಲ್ಲಿ 'ಸಂಬಂಧ' ಎಂಬ ಪದವನ್ನು ವಿವಾಹವೆಂಬ ವಿಶಿಷ್ಟಾರ್ಥದಲ್ಲಿ ಬಳಸಲಾಗಿದೆ. ಇದು ಮಲಯಾಳದಲ್ಲಿ ಕಂಡುಬರುವ ಪದ ಪ್ರಯೋಗ.

4. ಸ್ವಪ್ನವಾಸವದತ್ತದ ನಾಂದೀಶ್ಲೋಕ ಬಲರಾಮನ ಸ್ತೋತ್ರವಾಗಿದೆ. ಬಲರಾಮ ತಮಿಳು ರಂಗಾಧಿದೇವತೆ. ತಮಿಳುನಾಡು ಕೇರಳಕ್ಕೆ ಅತಿಸಮೀಪದ ನಾಡು.

5. ಸತ್ತ ಹಿರಿಯರ ಪ್ರತಿಮೆಗಳ ಸ್ಥಾಪನೆಯು ದಕ್ಷಿಣದೇಶದ ಸಂಪ್ರದಾಯ

ಈ ಮೇಲಿನ ಕಾರಣಗಳನ್ನು ಆಳವಾಗಿ ಪರಿಶೀಲಿಸಿದರೆ ಕವಿ ದಕ್ಷಿಣದವನಾಗಿರಬೇಕೆಂಬ ಮೇಲೆ ಹೇಳಿದ ವಿದ್ವಾಂಸರ ಅಭಿಪ್ರಾಯ ಬಲಿಷ್ಠವೇನಲ್ಲ.

(1) ಕೌಟಿಲ್ಯನ ಅರ್ಥಶಾಸ್ತ್ರ ಮೊದಲ ಬಾರಿಗೆ ಸಿಕ್ಕಿದುದು ಮೈಸೂರಿನಲ್ಲಿ. ಅಂದಮಾತ್ರಕ್ಕೆ ಕೌಟಿಲ್ಯ ಮೈಸೂರಿನವನಾಗಬಲ್ಲನೆ ?

(2) ರಾಮನ ಪಟ್ಟಾಭಿಷೇಕ ಸಮಯದಲ್ಲಿ ನಾಟಕದಲ್ಲಿ ಸೀತೆ ಇರುವುದಿಲ್ಲ. ಮಾತ್ರವಲ್ಲ, ಅವಳಿಗೆ ಅದರ ವಿಚಾರವೂ ತಿಳಿಯದು. ಇದು ಕವಿಯು ಯಾವುದೋ ಉದ್ದೇಶಕ್ಕಾಗಿ ಕಲ್ಪಿಸಿಕೊಂಡಿರುವ ಸನ್ನಿವೇಶ (ಸೀತೆಯ ಪಾತ್ರದ ಘನತೆಯನ್ನು ಹೆಚ್ಚಿಸುವ ಸಂವಾದಸರಣಿ ಮುಂದೆ ಬರುತ್ತದೆ). ಅದನ್ನು ವಿಶಿಷ್ಟ ಸಂಪ್ರದಾಯವೆಂದೇನೂ ಭಾವಿಸಬಾರದು.

(3) 'ಸಂಬಂಧ' ವೆಂಬ ಪದ ಸಾಮಾನ್ಯವಾದ ವಿವಾಹವೆಂಬ ತನ್ನ ಮೂಲ ಅರ್ಥದಲ್ಲೇ ಆ ಸನ್ನಿವೇಶದಲ್ಲಿ ಬಂದಿದೆ. ಅದು ಮಲಯಾಳೀ ಪದವೇ ಆಗಿದೆ ಎಂಬುದು ಸಂದೇಹ. ಕನ್ನಡದಲ್ಲಿಯೂ ಅಂತಹ ಪದಪ್ರಯೋಗ ಅಪರೂಪವೇನಲ್ಲ. ಕಾಳಿದಾಸನೂ 'ಸಂಬಂಧ' ಎಂಬ ಪದವನ್ನು ಕುಮಾರಸಂಭವದಲ್ಲಿ 'ವಿವಾಹ' ವೆಂಬ ಅರ್ಥದಲ್ಲಿ ಒಂದೆರಡು ಬಾರಿ ಉಪಯೋಗಿಸಿದ್ದಾನೆ. ಅಷ್ಟರಿಂದ ಅವನೇನೂ ಕೇರಳದವನಾಗಲಿಲ್ಲ.

(4) ಸ್ವಪ್ನವಾಸವದತ್ತದ ನಾಂದೀ ಶ್ಲೋಕದಲ್ಲಿ ಬಂದಿರುವ ಬಲದೇವನ ಸ್ತುತಿಯಲ್ಲಿ 'ಮದ್ಯದ ಪ್ರಭಾವರಿಂದ ಪ್ರಬಲ ಅಥವ ದುರ್ಬಲವಾಗಿರುವ ತೋಳ ಗಳು' ಎನ್ನುವ ಮಾತು ಇಷ್ಟದೇವತೆಯ ಸ್ತುತಿಯಾಗಿರಬಲ್ಲುದೆ ? ಎಂಬ ಸಂದೇಹ ವನ್ನು ಹುಟ್ಟಿಸುತ್ತದೆ. ಈ ನಾಂದೀ ಶ್ಲೋಕವಂತೂ ಶ್ಲೇಷಾಲಂಕಾರದಿಂದ ಕೂಡಿ ರುವ ಮುದ್ರಾಲಂಕಾರವನ್ನು ಹೆಣೆಯುವ ನೀರಸ ಪ್ರಯತ್ನ. ಅದು ಕವಿಗೆ ಹೇಗೋ ಹಾಗೆಯೇ ಬಲರಾಮನಿಗೂ ಅಂಥ ಹಿರಿಮೆಯನ್ನು ತಂದುಕೊಡಲಾರದು.

ಒಟ್ಟಿನಲ್ಲಿ ಕವಿಯ ಹೆಸರು ಕಾಲಗಳಂತೆಯೇ ದೇಶವೂ ಅನಿಶ್ಚಿತ ಅವನು ಭಾರತದ ಕವಿ. ಅಷ್ಟೇ ನಿಸ್ಸಂದೇಹ.

## ಭಾಸನ ವ್ಯಕ್ತಿತ್ವ

ಭಾಸಕವಿಯ ವಿಚಾರದಲ್ಲಿ ಜೀವನಚರಿತ್ರೆಗೆ ಸಾಧನವಾಗುವ ಅಂಶಗಳೇನೂ ದೊರೆತಿಲ್ಲ. ದೊರಕಬಹುದಾದವರೂ ಕೇವಲ ಸಾರಸ್ವತ ಚಿತ್ರಕಳೆಯಿಂದ ತುಂಬಿದ ರೂಪಕಗಳನ್ನು ರಚಿಸುವುದೇ ಕವಿಯ ವ್ಯಕ್ತಿತ್ವದ ತಳಹದಿಯಾಗಿರುತ್ತದೆ. ಅವನ ಮನೋಧರ್ಮ, ಅಭಿರುಚಿ, ಪ್ರಾಪಂಚಿಕಜ್ಞಾನ, ಜೀವನಧೋರಣೆ, ಇವೆಲ್ಲವೂ ಅವನ ರೂಪಕಾದರ್ಶದಲ್ಲಿ ಸುಂದರವಾಗಿ ಪ್ರತಿಬಿಂಬಿತವಾಗಿವೆ.

ಭಾಸನನ್ನು ಆಗಲೇ ವಿಮರ್ಶಕನೊಬ್ಬನು 'ಮುನಿ' ಎಂದು ಕರೆದು ಅವನನ್ನು ವಾಲ್ಮೀಕಿ, ವ್ಯಾಸರ ಪಂಕ್ತಿಗೆ ಸೇರಿಸಿ ಗೌರವಿಸಿದ್ದಾನೆ. ಸಂಸಾರದ ಸಾರತೆಯನ್ನರಿತು ಸುಖದುಃಖಗಳಲ್ಲಿ ಸಮದೃಷ್ಟಿಯಿಂದ ಕೂಡಿ ಮಂದಹಾಸವನ್ನು ಬೀರಿದ ಅವನಿಗೆ ಇದು ಸರ್ವಥಾ ಒಪ್ಪುವ ಗೌರವ.

ಭಾಸನ ವ್ಯಕ್ತಿಸ್ವರೂಪವನ್ನು ಸ್ಥೂಲರೀತಿಯಲ್ಲಿ ಊಹಿಸುವುದಾದರೆ ಅವನು ಸಂಪ್ರದಾಯಬದ್ಧ ಬ್ರಾಹ್ಮಣ ವಂಶದಲ್ಲಿ ಹುಟ್ಟಿದವನು. ಪಾಂಚರಾತ್ರ ದರ್ಶನದಲ್ಲಿ ನಂಬಿಕೆಯಿಟ್ಟು ಭಕ್ತಿಪಂಥಕ್ಕೆ ಸೇರಿದ ವೈಷ್ಣವ, ವರ್ಣಾಶ್ರಮ ಧರ್ಮದಲ್ಲಿ ನಿಷ್ಠಾವಂತ, ಯಜ್ಞಯಾಗಾದಿಗಳಲ್ಲಿ ಶ್ರದ್ಧಾಸಕ್ತಿಗಳುಳ್ಳವನು, ದಾನದ ಹಿರಿಮೆ ಮಹಿಮೆಗಳಿಗೆ ಮನಸೋತವನು. ಅದಕ್ಕೂ ಮಿಗಿಲಾಗಿ ಸತ್ಯ–ನ್ಯಾಯಗಳಲ್ಲಿ ಅಚಲವಾದ ಗೌರವ ವುಳ್ಳವನು, ಬಹುಶಃ ಯಾವುದೋ ರಾಜನ ಆಸ್ಥಾನದಲ್ಲಿ ಮನ್ನಣೆ ಪಡೆದು ಸುಖವಾದ ಉದಾರವಾದ ಜೀವನ ಸಾಗಿಸಿದವನು ಎಂದು ಹೇಳಬಹುದು.

ವಿಕಾಸ ಹೊಂದಿದ ಹೃದಯ, ಪರಿಪಕ್ವವಾದ ಮನಸ್ಸುಗಳನ್ನು ಪಡೆದಿರುವ ಸಹೃದಯರಲ್ಲಿ ಭಾಸನು ಅಗ್ರಗಣ್ಯ. ಅವನ ಈ ಸಹೃದಯತ್ವವು ಅವನ ರೂಪಕಗಳಲ್ಲೆಲ್ಲಾ ಉದ್ದಕ್ಕೂ ಸ್ಪಷ್ಟವಾಗಿ ಪ್ರತಿಬಿಂಬಿತವಾಗಿದೆ. ಮರಣೋನ್ಮುಖನಾದ ದುರ್ಯೋಧನನು ಬಲರಾಮನನ್ನೂ ಅಶ್ವತ್ಥಾಮನನ್ನೂ ಸಾಂತ್ವನಗೊಳಿಸುವ ಬಗೆಯೂ, ತನ್ನ ಪತ್ನಿಯ ರೊಂದಿಗೆ ತನ್ನ ತಂದೆತಾಯಿಗಳೊಂದಿಗೆ ತನ್ನ ಸುತನೊಂದಿಗೆ ವೀರನಾಗಿ ಕರುಣಾಪೂರ್ಣ

ವಾಗಿ ಆಡಿರುವ ಮಾತುಗಳೂ, ಅವನ ಘನತೆಯನ್ನೂ ಉದಾತ್ತತೆಯನ್ನೂ ಮೆರೆಸಿವೆ. "ಅಹೋ ವೈರಂ ಪಶ್ಚಾತ್ತಾಪಃ ಸಂವೃತ್ತಃ" ಎಂದು ಬಲದೇವನಾಡುವ ಮಾತು ಜಗತ್ತಿನ ಅನುಕಂಪವನ್ನೇ ಸೂಚಿಸುತ್ತದೆ. ಈ ವಿಧವಾದ ಅನುಕಂಪಭಾವ ಅಥವಾ ಸಾನುಕ್ರೋಶತ್ವವನ್ನು ಭಾಸನು ಪ್ರಧಾನವಾಗಿ ಹೊಗಳಿದ್ದಾನೆ. ಅವನು ರಂಗಕ್ಕೆ ತಂದಿರುವ ಉದಾತ್ತ ನಾಯಕರೆಲ್ಲರೂ ಸಾನುಕ್ರೋಶರು. ವತ್ಸರಾಜನಾದ ಉದಯನನು ಎರಡನೆಯ ಮದುವೆಯಾಗುವನು. ಆದರೂ ಪದ್ಮಾವತಿ ಅವನನ್ನು ವರಿಸಲು ಸಿದ್ಧ;—ಕಾರಣ ಅವನು ಸಾನುಕ್ರೋಶನೆಂದು. ವಾಸವದತ್ತೆ ಮೋಹ ಗೊಂಡುದು ಅದರಿಂದಲೇ—"ಅಯಮಪಿ ಜನಃ ಏವಮುನ್ಮಾದಿತಃ". ರೂಪ ಲಾವಣ್ಯಗಳ ಪಯೋಧಿಯಾಗಿ ಕಲಾನಿಪುಣೆಯಾಗಿ ಶ್ರೀಮಂತರನ್ನು ಕಾತರಪಡಿಸುತ್ತಿದ್ದ ವೇಶ್ಯಾಂಗನೆ ವಸಂತಸೇನೆ ದರಿದ್ರ ಚಾರುದತ್ತನನ್ನು ಮೋಹಿಸಿದಳು. ಏತಕ್ಕೆ? ಚಾರುದತ್ತನು ಸಾನುಕ್ರೋಶನೆಂದು. ಮಗಳಿಗೆ ಯೋಗ್ಯ ವರನನ್ನು ಆರಿಸಿ ತರುವುದು ತಂದೆಯ ಕರ್ತವ್ಯವಷ್ಟೆ. ಆದರೆ ವರನ ಅರ್ಹತೆಗಳೇನು? ಒಳ್ಳೆಯ ವಂಶ ಮೊದಲು ಅನಂತರವೇ ಸಾನುಕ್ರೋಶತೆ. ಏಕೆಂದರೆ ಸಾನುಕ್ರೋಶತೆ ಮೃದುವಾದರೂ ಬಲವಾದ ಗುಣ. ಆದಿಕವಿ ವಾಲ್ಮೀಕಿಗಳು ಶ್ರೀರಾಮನ ಗುಣಗಣವರ್ಣನೆಯಲ್ಲಿ "ಸಾನುಕ್ರೋಶೋ ಜಿತೇಂದ್ರಿಯಃ" ಎಂಬ ಮಾತನ್ನು ಹೇಳಿರುತ್ತಾರೆ. ಭಾಸನ ಅಭಿಪ್ರಾಯದಲ್ಲಂತೂ ಈ ಮೃದುಗುಣ ಮಹಾಪುರುಷರ ಲಕ್ಷಣ. ಅವನು ಈ ಉದಾರ ದರ್ಶನವನ್ನೇ ತನ್ನ ಪಾತ್ರಗಳ ರಚನೆಯಲ್ಲಿ ಹಾಸುಹೊಕ್ಕಾಗಿ ನೆಯ್ದಿದ್ದಾನೆ.

ಪ್ರದ್ಯೋತ (ಚಂಡಮಹಾಸೇನ), ವಾಲಿ, ಕರ್ಣ, ಮುಖ್ಯವಾಗಿ ದುರ್ಯೋಧನ ಮತ್ತು ಕೈಕೇಯಿ ಎಲ್ಲರೂ ಅವನ ಸಾನುಕ್ರೋಶತ್ವದಲ್ಲಿ ಮಿಂದು ಮಿನುಗುತ್ತಾರೆ. ಅದರಲ್ಲೂ ಭಾಸನಿಗೆ ಸ್ತ್ರೀಪಾತ್ರಗಳನ್ನು ಕಂಡರೆ ಅಭಿಮಾನ, ತುಂಬು ಗೌರವ. ಹೀಗೆ ಭಾಸನು ಕರುಣಾಳು ಗುಣಪಕ್ಷಪಾತಿ. ದೋಷವನ್ನು ಮರೆಯುತ್ತಾನೆದಲ್ಲ; ಅದರೆ ಮರೆಸುತ್ತಾನೆ.

ಈ ರೂಪಕಗಳಲ್ಲಿ ಪ್ರತಿಪಾದಿತವಾಗಿರುವ ಇನ್ನೊಂದು ಅಂಶವೆಂದರೆ, ಅವನ ಪ್ರೇಮದರ್ಶನ; ನಿಷ್ಕಲ್ಮಷ ದಾಂಪತ್ಯಪ್ರೇಮ; . ಪರಸ್ಪರ ಬಿಂಬಪ್ರತಿಬಿಂಬಭಾವವೇ ದಾಂಪತ್ಯ. ಪತಿಯಾಗಲಿ ಪತ್ನಿಯಾಗಲಿ ಯಾರೂ ಇದಕ್ಕೆ ಅಪವಾದವಿಲ್ಲ. ಮಾನವ ಹೃದಯದ ಸುಂದರ ಭಾವಗಳನ್ನೆ ವೀಣೆಯನ್ನಾಗಿ ಮಾಡಿಕೊಂಡು ನುಡಿಸಿರುವ ಮಧುರರಸವೇ ಆ ವಿಶುದ್ಧ ದಾಂಪತ್ಯಪ್ರೇಮ,[11] ತಂದೆ ಮಕ್ಕಳ ಪ್ರೇಮ,[12] ಸಹೋದರಪ್ರೇಮ.[13] ಇವರಿಂದ ಕವಿ ಸಂಸಾರದಲ್ಲಿ ಆದರ್ಶ ಪತಿಯಾಗಿ, ಆದರ್ಶ

---

11 ರಾಮ–ಸೀತೆ ; ಮಹಾಸೇನ–ಅಂಗಾರವತಿ ; ಉದಯನ–ವಾಸವದತ್ತೆ ; ಭೀಮ–ಹಿಡಿಂ.

12 ದಶರಥ–ರಾಮ , ಭೀಮ–ಘಟೋತ್ಕಚ ; ಅರ್ಜುನ–ಅಭಿಮನ್ಯು ; ಮಹಾಸೇ ವಾಸವದತ್ತೆ.

13 ರಾಮ–ಭರತ ; ರಾಮ–ಲಕ್ಷ್ಮಣ ; ಭರತ–ಲಕ್ಷ್ಮಣ.

ಪಿತನಾಗಿ, ಆದರ್ಶ ಪುತ್ರನಾಗಿ, ಆದರ್ಶ ಭ್ರಾತೃವಾಗಿದ್ದಿರಬೇಕೆಂಬ ಉಪದೇಶವೂ ತಪ್ಪಲ್ಲ.

ಹಾಗೆಯೇ ಈ ರೂಪಕಗಳಲ್ಲಿ ಮಂಡಿಸಿರುವ ಕಥಾವಸ್ತುಗಳನ್ನು ಪರಿಶೀಲಿಸಿದರೆ ಕವಿಯ ವಿಷಯವಾಗಿ ಇನ್ನೊಂದು ಅಂಶವು ಹೊರಬೀಳುವುದು. ಲೋಕದಲ್ಲಿ ಸುಗುಣ–ದುರ್ಗುಣ, ಸುಖ–ದುಃಖ, ಉನ್ನತಿ–ಅವನತಿ, ಇವು ಅಪರಿಹಾರ್ಯ ಎಂದಮಾತ್ರಕ್ಕೆ ಪ್ರಪಂಚದ ನಿಸ್ಸಾರತೆಯನ್ನೇ ಪ್ರಧಾನ ಮಾಡಿಕೊಳ್ಳಬೇಕಾಗಿಲ್ಲ. ಮಂದಹಾಸದಿಂದ, ಪುರುಷಪ್ರಯತ್ನದಿಂದ, ಸತ್ಯಸಂಧತೆಯಿಂದ, ಜೀವನವು ಸಹ್ಯವಾಗುವಂತೆ, ಧರ್ಮಸಾಂತತ್ಯದಿಂದ. ಸತ್ಯಸಂಧತೆಯಿಂದ ಜೀವನವು ಧನ್ಯವೂ ಆಗುವುದು, ದಿವ್ಯವೂ ಆಗುವುದು. ಈ ದೃಷ್ಟಿಯನ್ನು "ಸ್ವರ್ಗ ಪರೋಕ್ಷವಲ್ಲ: ಅದು ಬಹುಗುಣವಾಗಿ ಇಹಲೋಕದಲ್ಲಿಯೇ ಫಲಿಸುತ್ತದೆ" ಎಂಬ ಕವಿಯ ಆಶಾವಾಣಿ ಅಮರವಾಗಿ ಮೆರೆಸಿದೆ.[14]

## ಭಾಸನ ಶೈಲಿ

ಭಾಸನು ಮುಖ್ಯವಾಗಿ ಮಾನವ ಹೃದಯದ ಸುಂದರ ಭಾವಗಳನ್ನು ಚಿತ್ರಿಸಿದ್ದಾನೆ. ಈ ಭಾವಗಳಿಗೆ ತಕ್ಕ ಶೈಲಿಯೂ ಅವನಲ್ಲಿದೆ. ಅದರಿಂದ ರತ್ನಕ್ಕೆ ಕುಂದಣದ ಕಟ್ಟಡವು ಒದಗಿದಂತಾಗಿದೆ. ಇವನ ಒಂದೊಂದು ನಾಟಕದ ವಸ್ತುವಿನ್ಯಾಸವೂ ರಸಾಭಿವ್ಯಕ್ತಿಗೂ ಕಲೆಯ ಉತ್ಕರ್ಷಕ್ಕೂ ಅನುಗುಣವಾಗಿದ್ದು ನಾಟಕಗಳ ಸ್ವಾರಸ್ಯವನ್ನು ಹೆಚ್ಚಿಸಿದೆ. ಶೂದ್ರಕ, ವಿಶಾಖದತ್ತ, ಭಟ್ಟನಾರಾಯಣ, ಭವಭೂತಿ ಮೊದಲಾದ ಅವನ ಮುಂದಿನ ಕವಿಗಳ ಶೈಲಿಯೊಡನೆ ಭಾಸನ ಶೈಲಿಯನ್ನು ಹೋಲಿಸಿ ನೋಡಿದರೆ ಇವನ ಶೈಲಿಯು ತುಂಬ ಸರಳ, ಪ್ರಸನ್ನ ಮತ್ತು ಮಧುರ. "ನ ಪರುಷಂ ಪ್ರಯೋಜ್ಯಂ"—ಬಿರುನುಡಿ ಆಡಬಾರದು[15] ಎಂಬುದು ಅವನ ರಕ್ತಗತ ಧರ್ಮವೆಂಬಂತೆ ಭಾಸವಾಗುತ್ತದೆ. ಅವನ ಅತ್ಯುತ್ಕೃಷ್ಟ ರೂಪಕಗಳಾದ ಸ್ವಪ್ನವಾಸವದತ್ತಂ, ಪ್ರತಿಮಾನಾಟಕಂ, ಊರುಭಂಗಂ ಮೊದಲಾದವು ಅಷ್ಟು ಮನೋಜ್ಞವಾಗಿರುವುದಕ್ಕೆ ಅವನ ಈ ಸುಂದರ ಶೈಲಿಯು ಒಂದು ಮುಖ್ಯ ಕಾರಣವೆನ್ನಬಹುದು. ಇವುಗಳಲ್ಲಿ ಬರುವ ಸಂಭಾಷಣೆಗಳು ತಮ್ಮ ಸರಳ ಆದರೂ ಸತ್ವಪೂರ್ಣ ಗುಣದಿಂದ ಆಕರ್ಷಣೀಯವಾಗಿವೆ. ಸಂಭಾಷಣೆಯ ಬಂಧುರತೆಯಲ್ಲಿ ಭಾಸನಷ್ಟು ಕೌಶಲ ತೋರಿರುವ ನಾಟಕಕರ್ತರು ಸಂಸ್ಕೃತ ಸಾಹಿತ್ಯದಲ್ಲೇ ವಿರಳ.[16] ಕ್ಲಿಷ್ಟವಾದ

---

[14] परोक्षो न स्वर्गो बहुगुणमिहैवैष फलति । —ಪಂಚರಾ. V. 21.

[15] ಸ್ವಪ್ನವಾಸವದತ್ತ, I. 5.

[16] ಪ್ರತಿಜ್ಞಾಯೌಗಂಧರಾಯಣದಲ್ಲಿ ಮಹಾಸೇನ-ಅಂಗಾರವತಿಯರ ಸಂಭಾಷಣೆ, ಸ್ವಪ್ನವಾಸವದತ್ತದಲ್ಲಿ, ಸ್ವಪ್ನಾಂಕದ ಸಂಭಾಷಣೆ, ಪ್ರತಿಮಾನಾಟಕದ ಪ್ರಥಮಾಂಕದಲ್ಲಿ ಬರುವ ಸಂಭಾಷಣೆ, ಮುಂತಾದುವನ್ನು ಉದಾಹರಿಸಬಹುದು.

ಪದಗಳು, ದೀರ್ಘ ಸಮಾಸಗಳೂ ಭಾಸನ ಶೈಲಿಯಲ್ಲಿ ಅಪರೂಪ. ಈ ಹೃದಯಂಗಮ ಶೈಲಿಯ ವೈಶಿಷ್ಟ್ಯವನ್ನು ಅವನ ಶ್ರೇಷ್ಠ ಕೃತಿಗಳಲ್ಲಿ ನಾವು ಹೆಚ್ಚು ಹೆಚ್ಚು ಕಾಣುತ್ತೇವೆ. ಇದರಿಂದ ಅವನ ಅನುಭವ ಮತ್ತು ನಾಟಕರಚನಾಕೌಶಲ ಪಕ್ವಗೊಂಡಂತೆ ಅವನ ಶೈಲಿಯೂ ಹೆಚ್ಚು ಪರಿಪಕ್ವವಾಗಿ ಪ್ರಸನ್ನಗೊಂಡಿರಬೇಕೆಂಬುದನ್ನು ಸಹೃದಯರು ಊಹಿಸಬಹುದು. ಭಾಷೆಯ ಸರಳತೆಯನ್ನು ಶೈಲಿಯ ಸಹಜ ಚೆಲುವನ್ನು ಜೀವಂತಿಕೆಯನ್ನು ನೋಡಿ ವಿದ್ವಾಂಸರು ಪ್ರಾಯಃ ಭಾಸನ ಕಾಲದಲ್ಲಿ ಸಂಸ್ಕೃತವೇ ಜನರಾಡುವ ಭಾಷೆಯಾಗಿದ್ದಿರಬೇಕೆಂಬ ಊಹೆಯನ್ನು ವ್ಯಕ್ತಪಡಿಸಿದ್ದಾರೆ.

ಅಂದರೆ ಭಾಸನ ಶೈಲಿಯಲ್ಲಿ ಸತ್ತ್ವ-ಓಜಸ್ಸುಗಳೂ ಬಿಗಿಯೂ ಇಲ್ಲವೆಂದು ಹೇಳುವಂತಿಲ್ಲ. ಊರುಭಂಗದಲ್ಲಿ ಬರುವ ಸುಯೋಧನ-ಭೀಮರ ಗದಾಯುದ್ಧ ವರ್ಣನೆಯೂ ಪ್ರತಿಜ್ಞಾಯೌಗಂಧರಾಯಣದಲ್ಲಿ ಮಂತ್ರಿ ಯೌಗಂಧರಾಯಣನ ಪ್ರತಿಜ್ಞೆಗಳೂ ಇದಕ್ಕೆ ಸಾಕ್ಷಿಗಳಾಗಿವೆ. ಜೊತೆಗೆ ಅನೇಕ ಸಂದರ್ಭಗಳಲ್ಲಿ ಅವನ ಸಂಕ್ಷಿಪ್ತ ಬರವಣಿಗೆಯು ಅರ್ಥವೈಶದ್ಯವನ್ನು ಸಂದೇಹಕ್ಕೀಡುಮಾಡುತ್ತದೆ. ಎಂತಹ ಪಂಡಿತರಿಗೂ ಈ ವಾಕ್ಯಗಳನ್ನು ಅರ್ಥಮಾಡುವುದು ಸಮಸ್ಯೆಯಾಗುತ್ತದೆ.[17]

ಈ ರೂಪಕಗಳ ಶೈಲಿಯಲ್ಲಿ ಕಂಡುಬರುವ ಇನ್ನೊಂದು ವಿಶಿಷ್ಟ ಲಕ್ಷಣವೆಂದರೆ ಅದೇ ಅದೇ ಪದಗಳನ್ನು, ವಾಕ್ಯಗಳನ್ನು, ಶ್ಲೋಕಾರ್ಧಗಳನ್ನು ಕೆಲವೊಮ್ಮೆ ಪೂರ್ಣ ಶ್ಲೋಕಗಳನ್ನು ಮತ್ತೆ ಮತ್ತೆ ಬಳಸಿರುವುದು. ಈ ವಿಷಯವನ್ನು ಸಾಮ್ಯಾಂಶಗಳನ್ನು ಕುರಿತು ಹೇಳುವಾಗ ಆಗಲೇ ತಿಳಿಸಿದ್ದೇವೆ. ಭಾಸನು ಕಾಳಿದಾಸನಂತೆ ಶ್ಲೋಕಗಳ ಮಾಧುರ್ಯಕ್ಕೆ ಅಷ್ಟಾಗಿ ಮನಸೋಲುವುದಿಲ್ಲ. ಅನೇಕ ಸನ್ನಿವೇಶಗಳಲ್ಲಿ ಶ್ಲೋಕರಚನೆಯಲ್ಲಿ ನುಣುಪಿನ ಲಾವಣ್ಯವಿರದೇ ಇರಬಹುದು. ಆದರೂ ಅರ್ಥದಿಂದ ಧ್ವನಿಯಿಂದ ಪ್ರಾಧಾನ್ಯವಿರುತ್ತದೆ. ಅಲಂಕಾರಗಳಲ್ಲಿ ಉಪಮಾ, ಉತ್ಪ್ರೇಕ್ಷಾಲಂಕಾರಗಳಂಥಹ ಸರಳ ಅಲಂಕಾರಗಳೇ ಹೆಚ್ಚು. ಯಾವುದನ್ನೂ ಸಂಕೀರ್ಣಗೊಳಿಸಿಲ್ಲ. ಅನುಪ್ರಾಸ, ಯಮಕಗಳು ಹಿತಮಿತವಾಗಿದ್ದು ಆನಂದದಾಯಕವಾಗಿವೆ.[18]

‘ ಭಾಸೋ ಹಾಸಃ ’ ಎಂಬ ಉಕ್ತಿಯನ್ನು ಆಗಲೇ ತಿಳಿಸಿದೆ. ಈ ‘ಮಂದಹಾಸ’ವನ್ನು ಯಾವ ವಿಧವಾದ ಅಶ್ಲೀಲವನ್ನು, ಪರರಿಗೆ ನೋವನ್ನು ತರದೇ ಬೀರುವುದು ಇಲ್ಲಿನ ಬರವಣಿಗೆಯ ಪ್ರಧಾನ ಲಕ್ಷಣ. ಮಧ್ಯಮವ್ಯಾಯೋಗದ ಭೀಮ-ಘಟೋತ್ಕಚರ ಸಂವಾದವೂ ಅದೇ ನಾಟಕದಲ್ಲಿ ಬ್ರಾಹ್ಮಣ ಕುಟುಂಬವು ಇಕ್ಕಟ್ಟಿಗೆ

---

17 ಪ್ರತಿಜ್ಞಾಯೌಗಂಧರಾಯಣ III 2; IV 19. ಪ್ರತಿಮಾನಾಟಕ III 6; ಪಂಚರಾತ್ರ I 27–37, II 57.

18 रघुकुलप्रदीपस्य सर्वलोकनयनाभिरामस्य रामस्य, सुविपुलमहाग्रीवस्य सुग्रीवस्य — ಅಭಿಷೇಕನಾಟಕ, [illegible] तनयवदनशून्ये — ಊರುಭಂಗ. ಧೃತರಾಷ್ಟ್ರ ವರ್ಣನೆ; ಪ್ರತಿಮಾನಾಟಕ, II 11, ಇತ್ಯಾದಿ ಉದಾಹರಿಸಬಹುದು.

ಚಿಕ್ಕದ ಸನ್ನಿವೇಶವೂ, ಪಂಚರಾತ್ರದಲ್ಲಿನ ಭೀಮ-ಅಭಿಮನ್ಯುವಿನ ಸಂವಾದವೂ, ಚಾರುದತ್ತದಲ್ಲಿನ ಹಾಸ್ಯಸನ್ನಿವೇಶಗಳೂ ಇದಕ್ಕೆ ನಿದರ್ಶನ.

ಅರ್ಥಗರ್ಭಿತ ಮೌನವು ಶೈಲಿಯ ಒಂದು ಸಲ್ಲಕ್ಷಣವಾದರೆ ಭಾಸನ ಶೈಲಿ ಇಂತಹ ಅರ್ಥಪೂರ್ಣ ಮೌನದಿಂದ ಅನ್ಯಾದೃಶವೆನಿಸಿದೆ. ಪ್ರತಿಮಾನಾಟಕದಲ್ಲಿ ಸುಮಂತ್ರ ನಿಂದ ಉಪವರ್ಣಿತವಾದ ರಾಮ ಲಕ್ಷ್ಮಣರ ಮೌನಸಂದೇಶವು ಕರುಣರಸದ ನಿರ್ಮಲ ನಿಷ್ಪಂದವಾಗಿದೆ.

ಕೊನೆಯದಾಗಿ ಭಾಸನು ಹೇಳಿರುವ ಅವಿಸ್ಮರಣೀಯ ಸೂಕ್ತಿಭಂಡಾರ. ಮಿತವಾದ ಮಾತುಗಳಲ್ಲಿ ನಿತ್ಯಸತ್ಯದ ಅಮಿತಾರ್ಥವನ್ನು ತುಂಬಿರುವ ಬಂಧುರ ಮಾತುಗಳು ಕಾಳಿದಾಸಾದಿಗಳನ್ನೂ ತಲೆದೂಗಿಸಿತ್ತೆಂಬುದು ಇವೇ ಭಾವಗಳನ್ನು ಬಳಸಿ–ಬೆಳಗಿಸಿರುವ ಅವರ ಮಾತುಗಳನ್ನು ಪರಿಶೀಲಿಸಿದಾಗ ಗೋಚರವಾಗುತ್ತದೆ.[19] ಒಟ್ಟಿನಲ್ಲಿ ಇಷ್ಟೊಂದು ರೂಪಕಗಳನ್ನು ಬರೆದಿರುವ ಸಂಸ್ಕೃತ ಕವಿ ಭಾಸನೊಬ್ಬನೇ. ಅವುಗಳಲ್ಲಿನ ವಸ್ತು ಮತ್ತು ಪ್ರತಿಭಾಸಂಪತ್ತಿನಂತೆಯೇ ಅವನ ಶೈಲಿ ಮತ್ತು ಶಬ್ದಸಂಪತ್ತೂ ಮುಂದಿನ ಕವಿಗಳಿಗೆ ಅನುಕರಣೀಯವೇ ಆಗಿವೆ. ಕಾಳಿದಾಸನಂತಹ ಕವಿವರೇಣ್ಯನೂ ಭಾಸನು ರೂಪಿಸಿರುವ ಸಂದರ್ಭವನ್ನೋ, ಶಬ್ದಾರ್ಥಸಂಪತ್ತಿಯನ್ನೋ ಅನುಸರಿಸಿ, ಅನುಕರಿಸಿ, ಅನುವದಿಸಿ ಸಂಖಿಪಟ್ಟಿದ್ದಾನೆ, ತೊಟ್ಟಿದ್ದಾನೆ. ಇದು ಭಾಸನಿಗೇ ಸಲ್ಲುವ ಗೌರವ.

## ಪ್ರತಿಮಾನಾಟಕ

ಭಾಸನು ಬರೆದಿರುವ ರಾಮಾಯಣ ಕಥಾನಾಟಕಗಳು ಎರಡು; ಪ್ರತಿಮಾನಾಟಕ, ಅಭಿಷೇಕನಾಟಕ. ಇವುಗಳೊಳಗೆ, ಪ್ರತಿಮಾನಾಟಕದಲ್ಲಿ ಅಯೋಧ್ಯಾ

---

[19] ಮನೋಜ್ಞವಾದ ಈ ಕೆಲವು ಸೂಕ್ತಿಗಳನ್ನು ನೋಡಿ:

1. चक्रारपङ्क्तिरिव गच्छति भाग्यपङ्क्तिः ।
2. सर्वजनमनोभिरामं खलु सौभाग्यं नाम । — ಸ್ವಪ್ನವಾಸವದತ್ತ.
3. जाग्रतोऽपि बलवत्तरः कृतान्तः ।
4. मार्गारब्धाः सर्वयत्नाः फलन्ति । — ಪ್ರತಿಜ್ಞಾಯೌಗಂಧರಾಯಣ.
5. सुखं हि दुःखान्यनुभूय शोभते ।
6. असत्पुरुषसेवेव दृष्टिर्निष्फलतां गता । — ಚಾರುದತ್ತ.
7. सर्वशोभनीयं सुरूपं नाम ।
8. बहुवृत्तान्तानि राजकुलानि नाम ।
9. अल्पं तुल्यशीलानि द्वन्द्वानि सृज्यन्ते । — ಪ್ರತಿಮಾನಾಟಕ.
10. परोक्षो न स्वर्गः बहुगुणमिहैवेष फलति । — ಪಂಚರಾತ್ರ.

ಮತ್ತು ಅರಣ್ಯ ಕಾಂಡಗಳ ಕಥೆಯೂ, ಅಭಿಷೇಕನಾಟಕದಲ್ಲಿ ಕಿಷ್ಕಿಂಧಾ, ಸುಂದರ ಮತ್ತು ಯುದ್ಧ ಕಾಂಡಗಳ ಕಥೆಯೂ ಪ್ರತಿಪಾದಿತವಾಗಿವೆ. ಮಂಗಳಾಂತವಾಗಿರಬೇಕೆಂಬ ಸಂಪ್ರದಾಯದಿಂದಲೋ ಏನೋ ಎರಡೂ ಪರಿಸಮಾಪ್ತಿಗೊಳ್ಳುವುದು ಶ್ರೀರಾಮನ ಪಟ್ಟಾಭಿಷೇಕದಿಂದಲೇ.[20] ಭಾಸನ ರಾಮಕಥಾನಾಟಕಗಳಲ್ಲಿ,[21] ಸಮಗ್ರ ಸಂಸ್ಕೃತ ರಾಮಕಥಾರೂಪಕ ಸಾಹಿತ್ಯದಲ್ಲಿಯೇ ಪ್ರತಿಮಾನಾಟಕವು ಅನ್ಯಾದೃಶ ಶ್ರೇಷ್ಠತೆಯನ್ನು ಗಳಿಸಿದೆ. ಮೂಲಕೃತಿಯಿಂದ ಪಡೆದ ಪಾತ್ರಗಳ ರೂಪರೇಖೆಗಳನ್ನು ನಯವಾಗಿ ತಿದ್ದುವುದರಲ್ಲಿಯೂ ಅದಕ್ಕೆ ಅನುಕೂಲವಾಗುವಂತೆ ಕಥೆಯನ್ನು ವ್ಯತ್ಯಾಸಪಡಿಸಿಕೊಂಡು ಸಂವಿಧಾನವನ್ನು ರಚಿಸುವುದರಲ್ಲಿಯೂ ನಾಟಕಕರ್ತನು ಅಪಾರವಾದ ಕೌಶಲವನ್ನು ವ್ಯಕ್ತಪಡಿಸಿದ್ದಾನೆ.

## ಕಥಾವಸ್ತು

### ಅಂಕ ೧

(ಸ್ಥಳ: ಅಯೋಧ್ಯೆ : ದಶರಥಮಹಾರಾಜನ ಅರಮನೆ)

ದಶರಥ ರಾಜನ ಅರಮನೆಯ ಪ್ರತಿಹಾರಿಯೊಬ್ಬಳು ಸಂತೋಷ ಸಂಭ್ರಮಗಳಿಂದ ಬಂದು ರಾಮನ ಪಟ್ಟಾಭಿಷೇಕದ ಸಾಮಗ್ರಿಯನ್ನು ಶೀಘ್ರವಾಗಿ ಅಣಿಮಾಡುವಂತೆ ರಾಜಾಜ್ಞೆಯಾಗಿದೆಯೆಂದು ಕಾಂಚುಕೀಯನಿಗೆ ತಿಳಿಸುತ್ತಾಳೆ. ಎಲ್ಲವೂ ಸಿದ್ಧವಾಗಿದೆಯೆಂದು ಆಗಲೇ ಕುಲಪುರೋಹಿತರಾದ ವಸಿಷ್ಠರೂ ವೇದಿಕೆಯ ಬಳಿ ಕಾದು ನಿಂತಿದ್ದಾರೆಂದೂ ಅವನು ತಿಳಿಸುವನು. ಆ ಬಳಿಕ ಪ್ರತಿಹಾರಿಯು ಸಾರಸಿಕೆ ಎಂಬುವಳನ್ನು ಕುರಿತು ಅರಮನೆಯ ನಾಟ್ಯಶಾಲೆಗೆ ಹೋಗಿ ಅಂತಹ ಉತ್ಸವ ಸಮಯಕ್ಕೆ

---

20 ಅಭಿಷೇಕ ನಾಟಕವು ಪ್ರಾಯಶಃ ಭಾಸನ ಮೂಲ ಯೋಜನೆಯಂತೆ ಏಕಾಂಕ ನಾಟಕವಾಗಿದ್ದು ಅದರಲ್ಲಿ ಮೊದಲನೆಯ ಅಂಕವೊಂದೇ ಇದ್ದಿರಬಹುದೋ ಏನೋ ? ಅವನ ಯೋಜನೆ ಹಾಗಿದ್ದರೆ ಮುಂದೆ ರಚಿತವಾದ ಊರುಭಂಗದಂತೆ ಇದೂ 'ವಾಲಿವಧ' ವೆಂಬ ಹೆಸರಿನಿಂದ ಖೇದಾಂತ (Tragedy) ವಾಗಿರಬಹುದಿತ್ತು. ಆಗ 'ಮಹಾಭಾರತ ರೂಪಕ ಚಕ್ರದಲ್ಲಿರುವಂತೆ' ರಾಮಾಯಣ ರೂಪಕಚಕ್ರದಲ್ಲಿಯೂ ಒಂದು ಅಪೂರ್ವ ಖೇದಾಂತ ರೂಪಕವಿರುತ್ತಿತ್ತು. ಆದರೆ ಭಾಸನು ಅಷ್ಟು ಬೇಗ ಸಂಪ್ರದಾಯವನ್ನು ಸಂಪೂರ್ಣವಾಗಿ ಎದುರುಹಾಕಿಕೊಳ್ಳಲು ಸಿದ್ಧವಾಗಿದ್ದಂತೆ ತೋರುವುದಿಲ್ಲ. ಒಟ್ಟಿನಲ್ಲಿ ಇದೂ ಊಹೆ ಮಾತ್ರ.

21 ಉಳಿದ ಬಾಲಕಾಂಡದ ಕಥೆಯನ್ನು ಅಳವಡಿಸಿಕೊಂಡು '(ರಾಮ) ಬಾಲಚರಿತ' ವೆಂಬ ಇನ್ನೊಂದು ರೂಪಕವನ್ನೂ ಭಾಸನು ಬರೆದಿರಬೇಕೆಂದೂ ಅದು ಸಿಕ್ಕಿದರೆ ಪ್ರಾಯಶಃ ಶ್ರೀಮದ್ರಾಮಾಯಣದ ಆಧಾರದ ಮೇಲೆ ರಚಿತಗೊಂಡ 'ಭಾಸನಾಟಕಚಕ್ರ' ಪೂರ್ಣಗೊಳ್ಳಬಹುದೆಂದೂ ಪಂಡಿತ ಗಣಪತಿಶಾಸ್ತ್ರಿಗಳು ಹೇಳುತ್ತಾರೆ. ಜೊತೆಗೆ "ಉತ್ಸಾಹಾತಿಶಯಂ ವತ್ಸ ತವ ಬಾಲ್ಯಂ ಚ ಪಶ್ಯತಃ । ಮಮ ಹರ್ಷವಿಷಾದಾಭ್ಯಾಮಾಕ್ರಾಂತಂ ಯುಗಪನ್ಮನಃ ॥" ಎಂಬ ಸಾಹಿತ್ಯದರ್ಪಣಕರ್ತನಿಂದ ಬಾಲಚರಿತೆಯಲ್ಲಿದೆಯೆಂದು ಹೇಳಲಾದ, ಆದರೆ ಈಗ ದೊರಕಿರುವ (ಕೃಷ್ಣ) ಬಾಲಚರಿತೆಯಲ್ಲಿಲ್ಲದಿರುವ ಶ್ಲೋಕವೂ ಆ (ರಾಮ) ಬಾಲಚರಿತೆಯಲ್ಲಿರಬಹುದೆಂದು ಊಹಿಸುತ್ತಾರೆ.

ಸಮುಚಿತವೆನಿಸಿದ ನಾಟಕವೊಂದನ್ನು ಅಭಿನಯಿಸಲು ನಟವರ್ಗಕ್ಕೆ ಸೂಚಿಸುವಂತೆ ತಿಳಿಸಿ ಅಲ್ಲಿಂದ ತೆರಳುತ್ತಾಳೆ.

ಆ ವೇಳೆಗೆ ಅವದಾತಿಕೆ ಎಂಬ ಸೀತೆಯ ಚೇಟಿಯು ವಲ್ಕಲ (ನಾರುಮಡಿ)ವನ್ನು ಕೈಯಲ್ಲಿ ಹಿಡಿದು ಪ್ರವೇಶಿಸುತ್ತಾಳೆ. ಅರಮನೆಯ ನಾಟ್ಯಶಾಲೆಯಲ್ಲಿ ನೇಪಥ್ಯಪಾಲಿನಿಯಾಗಿದ್ದ ಆರ್ಯಾ ರೇವೆಯು ರಂಗಸ್ಥಳದಲ್ಲಿ ಉಪಯೋಗಿಸಿ ಬಿಟ್ಟಿದ್ದ ಅಶೋಕದ ಚಿಗುರೊಂದನ್ನು ತಾನು ಬೇಡಿಕೊಂಡರೂ ಕೊಡಲಿಲ್ಲವೆಂಬ ಕಾರಣ ಪರಿಹಾಸಕ್ಕಾಗಿ, ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಲು, ಅವದಾತಿಕೆಯು ಆರ್ಯಾರೇವೆಯ ಆ ವಲ್ಕಲವನ್ನು ಅವಳಿಗೆ ಮರೆಮಾಚಿ ತಂದಿರುವಳು. ಅದೇ ತಾನೇ ಅಲ್ಲಿಗೆ ಪ್ರವೇಶಿಸಿದ ಸೀತೆಯು ಆ ವಿಚಾರವನ್ನು ಅವಳಿಂದ ತಿಳಿದು ಅಂತಹ ಕೆಲಸವನ್ನು ಪರಿಹಾಸಕ್ಕಾಗಿಯೂ ಮಾಡಬಾರದೆಂದು ಬುದ್ಧಿವಾದ ಹೇಳುವಳು. ಲಜ್ಜಿತಳಾದ ಅವದಾತಿಕೆಯು ಅದನ್ನು ಆರ್ಯಾರೇವೆಗೇ ಹಿಂತಿರುಗಿಸಲು ಹೊರಡುವಷ್ಟರಲ್ಲಿ ಸೀತೆಗೆ ಅದನ್ನು ತಾನು ಧರಿಸಿದರೆ ಹೇಗಿರಬಹುದೆಂಬ ಕುತೂಹಲ ಹುಟ್ಟುವುದು. ಅದನ್ನು ಧರಿಸಿದ ಸೀತೆಯು ತನಗದು ಒಪ್ಪುವುದೋ ಇಲ್ಲವೋ ನೋಡಿಕೊಳ್ಳಲು ಕನ್ನಡಿಯನ್ನು ತರಲು ಕಳಿಸುವಳು. ಕನ್ನಡಿಯೊಡನೆ ಆಗಮಿಸಿದ ಚೇಟಿಯು 'ರಾಮನಿಗೆ ಪಟ್ಟಾಭಿಷೇಕವಂತೆ' ಎಂದು ಸೀತೆಗೆ ತಿಳಿಸುವಳು. ಸೀತೆಯು ಕೂಡಲೇ 'ಮಾವನವರು ಕುಶಲಿಗಳಷ್ಟೆ!' ಎಂದು ಕೇಳುವಳು. 'ಮಹಾರಾಜರಿಂದಲೇ ಪಟ್ಟಾಭಿಷೇಕದ ಏರ್ಪಾಡು' ಎಂದು ತಿಳಿದು ತನ್ನ ಸಂತೋಷವನ್ನು ಸೂಚಿಸಿ ಮಂಗಳವಾರ್ತೆ ತಂದ ಆ ಚೇಟಿಯ ಮಡಿಲಿಗೆ ತನ್ನ ಆಭರಣಗಳನ್ನು ತೆಗೆದು ಪಾರಿತೋಷಕವಾಗಿ ನೀಡುವಳು.

ಅಷ್ಟರಲ್ಲೇ ಮಂಗಳವಾದ್ಯಗಳ ಮೊಳಗುವಿಕೆ ಹಠಾತ್ತನೆ ನಿಂತುಹೋಗುವುದು. ಹೊತ್ತ ಭಾರವನ್ನು ಇಳಿಸಿಕೊಂಡಂತೆ ರಾಮನೂ ಅಲ್ಲಿಗೆ ಪ್ರವೇಶಿಸುವನು. ಸೀತೆಯ ಆಶ್ಚರ್ಯ ಕುತೂಹಲಗಳನ್ನು ತಿಳಿದ ರಾಮನು 'ಇನ್ನೇನು ಅಭಿಷೇಕವಾಗಬೇಕು ಅನ್ನುವಷ್ಟರಲ್ಲಿ ಮಂಥರೆಯು ಮಹಾರಾಜನ ಕಿವಿಯಲ್ಲಿ ಏನನ್ನೋ ಹೇಳಿದಳೆಂದೂ 'ಆ ಕೂಡಲೇ ಪಟ್ಟಾಭಿಷೇಕ ನಿಂತುಹೋಯಿತೆಂದೂ' ರಾಜ್ಯ ತಪ್ಪಿದ ಸುದ್ದಿಯನ್ನು ಸೀತೆಗೆ ತಿಳಿಸುವನು. ಗಂಡನಿಗೆ ರಾಜ್ಯ ತಪ್ಪಿತೆಂದು ಸೀತೆಗೆ ವ್ಯಥೆಯೆನಿಸಲಿಲ್ಲ. ಸೀತೆಯು ಆಭರಣಗಳನ್ನು ತೆಗೆದು ವಲ್ಕಲವನ್ನುಟ್ಟುಕೊಂಡಿರುವುದನ್ನು ಕಂಡ ರಾಮನು ತಾನೂ ನಾರುಮಡಿಯನ್ನುಡಲು ಅಪೇಕ್ಷಿಸುವನು. ಆಗ ಕಾಂಚುಕೀಯನು ಪ್ರವೇಶಿಸಿ ಪಟ್ಟಾಭಿಷೇಕ ನಿಲ್ಲಲು ಕೈಕೇಯಿಯ ರಾಜ್ಯಲೋಭವೇ ಕಾರಣವೆಂದೂ, ರಾಮನು ವನವಾಸ ಮಾಡಬೇಕಾಗಿರುವದೆಂದೂ ಇದರಿಂದ ದಶರಥನು ಮೂರ್ಛೆಗೊಂಡು ಚಿಂತಾಜನಕ ಸ್ಥಿತಿಯಲ್ಲಿರುವನೆಂದೂ ಹೇಳಿ ಅವಳನ್ನು ನಿಂದಿಸುವನು. ರಾಮನು ಹಾಗೆ ಮಾತೃನಿಂದೆ ಮಾಡಬಾರದೆಂದು ಅವನಿಗೆ ಬುದ್ಧಿಹೇಳಿ ಅದೆಲ್ಲವೂ ಒಳ್ಳೆಯದಕ್ಕೇ ಎಂದು ತನ್ನ ಮಾತನ್ನು ಸಮರ್ಥಿಸುವನು. ಅಷ್ಟರಲ್ಲಿ ಪ್ರಕ್ಷುಬ್ಧನಾದ ಲಕ್ಷ್ಮಣನು ಕೋಪದಿಂದೆದ್ದು ಹಾವಿನಂತೆ ಬುಸುಗುಟ್ಟುತ್ತಾ ಅಲ್ಲಿಗೆ ಬಂದು ರಾಮನ ಮೃದು ಗುಣ ನಿಷ್ಪ್ರಯೋಜಕವೆಂದೂ

ತಾನು ಲೋಕವನ್ನು ಸ್ತ್ರೀರಹಿತ ಮಾಡಿಬಿಡುವೆನೆಂದೂ ಆರ್ಭಟಿಸುವನು. ಅವನನ್ನು ಸಮಾಧಾನಪಡಿಸುವ ಕೆಲಸವು ಶಾಂತಚಿತ್ತನಾದ ರಾಮನಿಗೆ ಬೀಳುವದು. ಅಷ್ಟರಲ್ಲಿ ಹಳೆಯ ವಲ್ಕಲವನ್ನೇ ಸೀತೆಯು ಧರಿಸಲಿಚ್ಛಿಸಿದ್ದ ಸುದ್ದಿಯನ್ನು ತಿಳಿದ ಅಯ್ಯರೇವೆ ಇನ್ನೊಬ್ಬ ಚೇಟಿಯೊಡನೆ ಹೊಸ ವಲ್ಕಲವನ್ನು ಬೇಗ ಅಲ್ಲಿಗೆ ಕಳಿಸುವಳು. ವನವಾಸಕ್ಕೆ ತೆರಳಬೇಕಾದ ತನಗೆ ಸಕಾಲದಲ್ಲಿ ಅದು ಬಂದಿತೆಂದು ರಾಮನು ಅದನ್ನು ತಾನೇ ಧರಿಸಿ ವನಕ್ಕೆ ತೆರಳಲು ಅನುವಾಗುವನು. ಆಗಲೇ ವಿಮುಕ್ತಾಭರಣಳೂ ಆಕಸ್ಮಿಕವಾಗಿ ವಲ್ಕಧಾರಿಣಿಯೂ ಆಗಿದ್ದ ಸೀತೆಯು ಹಾಗೆಯೇ ರಾಮನನ್ನು ಹಿಂಬಾಲಿಸುವಳು. ರಾಮನ ಕೈಯಿಂದ ತಾನೂ ವಲ್ಕಲವನ್ನು ಆಗ್ರಹದಿಂದ ಪಡೆದು ಧರಿಸಿದ ಲಕ್ಷ್ಮಣನೂ ರಾಮ ಸೀತೆಯರನ್ನು ಹಿಂಬಾಲಿಸಿ ವನವಾಸಕ್ಕೆ ತೆರಳುವನು. ದಶರಥನು ಹಿಂಬಾಲಿಸುತ್ತಿರುವನೆಂದು ಕಾಂಚುಕೀಯನು ಹೇಳುತ್ತಿದ್ದರೂ ಆ ಮೂವರೂ ವನಾಭಿಮುಖವಾಗಿ ಹಿಂತಿರುಗದೆ ತೆರಳುವರು.

**ಅಂಕ ೨**

(ಸ್ಥಳ: ದಶರಥನ ಅರಮನೆ)

'ಶಿಥಿಲದೇಹಮತಿ'ಯಾದ ದಶರಥನು ಪರಿಪರಿಯಿಂದ ರಾಮ ಲಕ್ಷ್ಮಣ ಸೀತೆಯರನ್ನೇ ಹಂಬಲಿಸುತ್ತಾ, ರಾಮ, ಸೀತೆ ಮತ್ತು ಲಕ್ಷ್ಮಣರನ್ನು ಸುಮಂತ್ರನು ಇನ್ನೂ ಹಿಂದಕ್ಕೆ ಕರೆತರಬಹುದೋ ಎಂದು ಆಶಿಸುತ್ತ. ಕಡೆಗೆ ಆಶಾಭಂಗವನ್ನು ಸಹಿಸಲಾರದೆ ಅರೆಹುಚ್ಚನಂತೆ ತನ್ನನ್ನೂ ಕೈಕೇಯಿಯನ್ನೂ ನಿಂದಿಸುತ್ತಾ, ಕೌಸಲ್ಯೆ ಸುಮಿತ್ರೆಯರನ್ನು ಗುರುತಿಸಲೂ ಅಸಮರ್ಥನಾಗಿ ರಾಮವಿರಹಾಗ್ನಿಸಂತಪ್ತನಾದ ತನ್ನನ್ನೂ ಸಂತೈಸಲು ಪಿತೃಗಳು ಬಂದರೆಂದು ಹೇಳುತ್ತಾ ಅವರನ್ನು ಉದ್ದೇಶಿಸಿ ಮಾತನಾಡುತ್ತ ಪ್ರಾಣವನ್ನು ಬಿಡುವನು.

**ಅಂಕ ೩**

(ಸ್ಥಳ: ಅಯೋಧ್ಯೆಯ ಹೊರಗೆ ಪ್ರತಿಮಾಗೃಹ ಮತ್ತು ಅದರ ಪರಿಸರ)

ವಸಿಷ್ಠ ವಾಮದೇವಾದಿಗಳು ಮತ್ತು ಸುಮಂತ್ರ—ಇವರ ಹೊರತು ಎಲ್ಲರೂ ಕೈಕೇಯಿಯನ್ನು ನಿಂದಿಸುವವರೇ. ಅತ್ತ ಭರತನನ್ನು ಕರೆತರಲು ರಥವನ್ನು ಅವರು ಕಳಿಸಿದ್ದಾರೆ. ಸೂತನು ದಶರಥನ ಮರಣವಾರ್ತೆಯ ಬಗ್ಗೆ ಭರತನಿಗೆ ಏನೂ ಸ್ಪಷ್ಟಗೊಳಿಸಬಾರದೆಂದೂ ತಿಳಿಸಿದ್ದಾನೆ. ಅವನು ಈಗ ಶೂನ್ಯವಾಗಿರುವ ಅಯೋಧ್ಯೆಯನ್ನು ಪ್ರವೇಶ ಮಾಡುವುದೂ ವಸಿಷ್ಠಾದಿಗಳಿಗೆ ಇಷ್ಟವಿಲ್ಲ. ಆದುದರಿಂದ ಅವನು ಅಯೋಧ್ಯೆಯ ಬಾಗಿಲಿಗೆ ಬಂದೊಡನೆ "ಪ್ರವೇಶಕ್ಕೆ ಮುಹೂರ್ತ ಶುಭವಾಗಿಲ್ಲ: ಶುಭ ಮುಹೂರ್ತ ಬರುವವರೆಗೆ ಅವನು ಅಲ್ಲೇ ಕಾಯಬೇಕು" ಎಂದು ಭಟನೊಡನೆ ಹೇಳಿಕಳಿಸುತ್ತಾನೆ. ಅಯೋಧ್ಯೆಯ ಪರಿಸರದಲ್ಲೇ ಭರತನು

ಕಾಯಬೇಕಾದ ದ್ವಾರದ ಸಮೀಪದಲ್ಲಿಯೇ ಇಕ್ಷ್ವಾಕು ವಂಶದ ಗತಿಸಿದ ರಾಜರ ಪ್ರತಿಮಾಗೃಹವಿತ್ತು. ಕೌಸಲ್ಯೆ ಮುಂತಾದವರು ಸುಮಂತ್ರನ ಜತೆಯಲ್ಲಿ ಪ್ರತಿಮಾ ದರ್ಶನಕ್ಕಾಗಿ ಅದೇ ಸಮಯದ ಸುಮಾರಿಗೆ ಹೋಗುವಂತೆ ಏರ್ಪಾಡು ಮಾಡಿರುತ್ತಾರೆ. ಶುಭ ಮುಹೂರ್ತ ಬರುವವರೆಗೂ ಅಲ್ಲೇ ಕಾಯಬೇಕಾಗಿದ್ದ ಭರತನು ರಥದ ಕುದುರೆಗಳಿಗೆ ದಣಿವಾರಿಸುವಂತೆ ಸೂತನಿಗೆ ತಿಳಿಸಿ ತಾನೊಬ್ಬನೇ ಕಾಲಕಳೆಯುವ ಪರಿಸ್ಥಿತಿಯಲ್ಲಿ ಸುತ್ತಲೂ ಕಣ್ಣಾಡಿಸಿ ಸುಣ್ಣ ಸಾರಣೆಗಳಿಂದ ಆಕರ್ಷಕವಾಗಿದ್ದ ಪ್ರತಿಮಾಗೃಹವನ್ನು ಯಾವುದೋ ದೇವಾಲಯವೆಂದು ಭ್ರಮಿಸಿ ಪ್ರವೇಶಿಸುವನು. ಅಲ್ಲಿ, ದೇವಕುಲಿಕನಿಂದ ಮೊದಲು ಸ್ಪಷ್ಟಾಸ್ಪಷ್ಟವಾಗಿಯೂ ಅನಂತರ ಸುಸ್ಪಷ್ಟ ವಾಗಿಯೂ, ಪಿತೃವಿಯೋಗ, ರಾಮನ ವನಗಮನಾದಿಗಳನ್ನು ತಿಳಿದು ಮೂರ್ಛೆ ಗೊಳ್ಳುವನು. ಅದೇ ತಾನೇ ಅಲ್ಲಿಗೆ ಆಗಮಿಸಿದ ತಾಯಿಯವರ ಹಸ್ತಸ್ಪರ್ಶದಿಂದ ಎಚ್ಚೆತ್ತರೂ, ಶೋಕ–ಕೋಪಗಳಿಂದ ವಿಹ್ವಲನಾಗಿ ಕೈಕೇಯಿಗೆ ವಂದನೆಯನ್ನೂ ಮಾಡದೆ ಅವಳನ್ನು ಬಿರುನುಡಿಗಳಿಂದ ಝಂಕಿಸುತ್ತಾನೆ. ವಸಿಷ್ಠಾದಿಗಳು ಅಭಿಷೇಕಕ್ಕೆ ಬರಬೇಕೆಂದು ಹೇಳಿಕಳುಹಿಸಿದ್ದನ್ನು ನಿರಾಕರಿಸಿ ಅವರು ಕಳಿಸಿದ್ದ ಕಳಸ ಪೂರ್ಣಕುಂಭ ಗಳನ್ನು ಜೊತೆಯಲ್ಲಿಯೇ ತೆಗೆಸಿಕೊಂಡು ರಾಮನಿರುವ ಅರಣ್ಯವೇ ತನ್ನ ಅಯೋಧ್ಯೆ ಯೆಂದು ಆಗ್ರಹದಿಂದ ನುಡಿದು ಸುಮಂತ್ರನೊಡನೆ ಚಿತ್ರಕೂಟಕ್ಕೆ ಆ ಕೂಡಲೇ ತೆರಳುವನು.

**ಅಂಕ ೪**

(ಸ್ಥಳ: ಚಿತ್ರಕೂಟ ; ರಾಮನ ಆಶ್ರಮ)

ಚಿತ್ರಕೂಟದಲ್ಲಿ ಭರತನು ರಾಮನನ್ನು ಕಂಡು ತನ್ನ ನಿಷ್ಕಲಂಕ ಭ್ರಾತೃ ಪ್ರೇಮದಿಂದ ರಾಮನೂ ಹರ್ಷಾಶ್ರುಗಳನ್ನು ಸುರಿಸುವಂತೆ ಮಾಡುತ್ತಾನೆ. ರಾಜ್ಯವನ್ನು ರಾಮನೇ ಒಪ್ಪಿಸಿಕೊಳ್ಳಬೇಕೆಂದು ಭರತನು ಆಗ್ರಹ ಮಾಡುತ್ತಾನೆ. ರಾಮನು ಎಷ್ಟು ಹೇಳಿದರೂ ಕೇಳದೆ ಅವನ ಪಾದುಕೆಗಳ ಹೆಸರಿನಲ್ಲಿ ಹದಿನಾಲ್ಕು ವರ್ಷಮಾತ್ರ ನ್ಯಾಸವೆಂದು ರಾಜ್ಯಭಾರ ಮಾಡಲು ಒಪ್ಪಿ, ಅವನ ಪಾದುಕೆಗಳೊಡನೆ ಅಯೋಧ್ಯೆಗೆ ಹಿಂತಿರುಗುವನು.

**ಅಂಕ ೫**

(ದೃಶ್ಯ: ಪಂಚವಟಿ)

ರಾಮನಿಗೂ ಭರತನ ಮೇಲೇ ರಾಜ್ಯದ ಸಮಸ್ತ ಭಾರವೆಲ್ಲ ಬಿದ್ದಿತೆಂಬ ಚಿಂತೆಯಿದೆ. ಭರತನಂತೂ ರಾಮನ ಕಷ್ಟವನ್ನು ನೆನೆನೆನೆದು ಕೇವಲ ಕೊರಗುವುದು ಮಾತ್ರವಲ್ಲದೆ ಸುಮಂತ್ರನನ್ನು ಮತ್ತೆ ಮತ್ತೆ ಅಯೋಧ್ಯೆಯಿಂದ ಕಳುಹಿಸಿ ರಾಮನ ಯೋಗಕ್ಷೇಮಾದಿಗಳನ್ನು ವಿಚಾರಿಸುತ್ತಲಿರುತ್ತಾನೆ. ಹೀಗಿರಲು ದಶರಥನ ಶ್ರಾದ್ಧದ

ದಿನ ಪ್ರಾಪ್ತವಾಗುತ್ತದೆ; ಅಂತಹ ತಂದೆಗೆ ಕಾಡಹಣ್ಣಿನ ಪಿಂಡವನ್ನು ಕೊಡಬೇಕಲ್ಲ; ಹಾಗೆ ಕೊಟ್ಟಾಗ ಪಿತೃಲೋಕದಲ್ಲೂ ಆ ತಂದೆಗೆ ಸಂಕಟ ಪರಿಸ್ಥಿತಿ ನೆನಪಿಗೆ ಬರ ಬಹುದಲ್ಲ; ಎಂಬ ಯೋಚನೆ ರಾಮನಿಗೆ ಉಂಟಾಗುತ್ತದೆ. ಅಷ್ಟರಲ್ಲಿ ಆಶ್ರಮದ ಬಳಿ ಪರಿವ್ರಾಜಕನ ವೇಷದಲ್ಲಿ ಮಾಯಾವಿ ರಾವಣನು ಬಂದು ತಾನು ಅನೇಕ ಶಾಸ್ತ್ರಗಳಲ್ಲಿ ಪರಿಣತನೆಂದೂ ಶ್ರಾದ್ಧಕಲ್ಪದಲ್ಲಿಯೂ ತಾನು ಪೂರ್ಣಪರಿಶ್ರಮ ಪಡೆದಿರುವುದಾಗಿಯೂ ಹೊಗಳಿಕೊಳ್ಳುತ್ತಾನೆ. ಹಾಗಾದರೆ ಪಿತೃಶ್ರಾದ್ಧಕ್ಕೆ ಸರ್ವೋತ್ಕೃಷ್ಟ ವಸ್ತುವಾವುದೆಂದು ರಾಮನು ಪ್ರಶ್ನಿಸಲು—'ಋಷಿಗಳು ಮಾತ್ರ ಪಡೆಯಲು ಶಕ್ಯವಾದ ಕಾಂಚನಪಾರ್ಶ್ವಮೃಗಗಳಿವೆಯೆಂದೂ ಅವು ಹಿಮಾಲಯದ ತುಟ್ಟ ತುದಿಯಲ್ಲಿ ಸಿಕ್ಕುವವೆಂದೂ ಅವುಗಳು ಪಿತೃಗಳಿಗೆ ಪ್ರಿಯತಮವೆಂದೂ ಆದರಿಂದ ಅವರಿಗೆ ಸದ್ಗತಿ ಸಿದ್ಧವೆಂದೂ' ಬಣ್ಣಿಸುವನು. ಪಿತೃಭಕ್ತಿಯಿಂದ ತುಂಬಿದ ರಾಮನು ಅದನ್ನು ಸಂಪಾದಿಸಲು ಸಿದ್ಧನಾಗುವನು. ಆ ಹೊತ್ತಿಗೆ ಅದೇ ಜಾತಿಯ ಮೃಗ ವೊಂದು ಅಲ್ಲಿಯೇ ಸುಳಿಯುವುದು. ರಾವಣನು ರಾಮನ ಅದೃಷ್ಟವನ್ನು ಕೊಂಡಾಡುವನು. ಲಕ್ಷ್ಮಣನು ಆಗ ಆಶ್ರಮದಲ್ಲಿಲ್ಲ. ರಾಮನ ಅಪೇಕ್ಷೆಯಂತೆ ಕುಲಪತಿಗಳನ್ನು ಕಾಣಲು ಹೋಗಿರುವನು. ಆದುದರಿಂದ ಆ ಕಾಂಚನಪಾರ್ಶ್ವ ಮೃಗವನ್ನು ತರಲು ಸೀತೆಯ ರಕ್ಷಣೆಯನ್ನು ಪರಿವ್ರಾಜಕನ ಹಾಗೂ ವನವೃಕ್ಷಗಳ ವಶಕ್ಕೆ ಒಪ್ಪಿಸಿ ರಾಮನೇ ಹೋಗುವನು. ಅವನು ದೂರ ಹೋದ ಒಡನೆಯೇ ಪರಿವ್ರಾಜಕವೇಷಧಾರಿಯಾದ ರಾವಣನು ಸೀತೆಯನ್ನು ಕದ್ದೊಯ್ಯುವನು.

**ಅಂಕ ೬**

(ಸ್ಥಳ: ಭರತನ ಅರಮನೆ)

ಆಗಾಗ್ಗೆ ಭರತನು ಸುಮಂತ್ರನನ್ನು ಅರಣ್ಯಕ್ಕೆ ಕಳುಹಿಸಿ ರಾಮ, ಸೀತೆ, ಲಕ್ಷ್ಮಣರ ವಿಷಯವನ್ನು ತಿಳಿಯುತ್ತಿರತ್ತಾನೆ. ಸುಮಂತ್ರನು ಕಡೆಯ ಸಲ ಜನಸ್ಥಾನಕ್ಕೆ ಹೋಗಿ ನೋಡಿದಾಗ ಅವನಿಗೆ ಸೀತಾಪಹರಣ ವೃತ್ತಾಂತವೂ, ರಾಮಲಕ್ಷ್ಮಣರು ಸೀತಾನ್ವೇಷಣೆಗಾಗಿ ವಾನರರಾಜ್ಯಕ್ಕೆ ಹೋಗಿರುವುದೂ ತಿಳಿಯುತ್ತದೆ. ಅತ್ಯಂತ ವಿಷಾದದಿಂದ ಸುಮಂತ್ರನು ಭರತನಿಗೆ ಬಹು ಕಷ್ಟದಿಂದ ದುಃಖ ವಾರ್ತೆಯನ್ನು ಹೇಳುತ್ತಾನೆ. ಮತ್ತೆ ಭರತನ ಕೋಪವುಕ್ಕಿ ಕೈಕೇಯಿಯನ್ನು ನಿಂದಿಸತೊಡಗಲು ಅವಳು ಸತ್ಯಾಂಶವನ್ನು ಸುಮಂತ್ರನ ಬಾಯಿನಿಂದಲೇ ಹೇಳಿಸುತ್ತಾಳೆ. ವಸಿಷ್ಠ ವಾಮ ದೇವಾದಿಗಳಿಗೂ ಈ ವಿಷಯ ತಿಳಿದಿದ್ದು ತನ್ನ ತಾಯಿ ನಿರ್ದೋಷಿಯೆಂದು ಮನಗಂಡು ಭರತನು ಕೈಕೇಯಿಯ ನಿಸ್ವಾರ್ಥವನ್ನೂ ರಾಮನಲ್ಲಿ ಅವಳಿಗಿದ್ದ ಪ್ರೇಮ ವನ್ನೂ ತಿಳಿದು ಅವಳಲ್ಲಿ ಕ್ಷಮಾಯಾಚನೆ ಮಾಡುತ್ತಾನೆ. ರಾಮನ ಸಹಾಯಕ್ಕೆಂದು ಒಂದು ದೊಡ್ಡ ಸೇನೆ ಮತ್ತು ಮಂತ್ರಿಗಳನ್ನು ಜೊತೆಮಾಡಿಕೊಂಡು ಮಾತೆಯರೊಡನೆ ಅರಣ್ಯಕ್ಕೆ ಹೊರಡುತ್ತಾನೆ.

**ಅಂಕ ೭**

(ಸ್ಥಳ: ಜನಸ್ಥಾನ; ಋಷ್ಯಾಶ್ರಮಗಳು)

ಅರ್ಧ ಮಾರ್ಗದಲ್ಲೇ ಋಷ್ಯಾಶ್ರಮದಲ್ಲಿ ರಾವಣನನ್ನು ಕೊಂದು ಸೀತಾದೇವಿಯ ಸಹಿತ ಹಿಂತಿರುಗಿ ಬಂದ ರಾಮಲಕ್ಷ್ಮಣರ ದರ್ಶನವಾಗುತ್ತದೆ. ರಾಜಕಾರ್ಯವನ್ನೊಪ್ಪಿಕೊಳ್ಳಬೇಕೆಂದು ಕೈಕೇಯಿಯೇ ರಾಮನನ್ನು ಕೇಳಿಕೊಳ್ಳುತ್ತಾಳೆ. ಅವಳ ಮತ್ತು ಭರತಾದಿ ಎಲ್ಲರ ಅಪೇಕ್ಷೆಯಂತೆ ಅರಣ್ಯದಲ್ಲಿಯೂ ಮತ್ತೆ ಅಯೋಧ್ಯೆಯಲ್ಲಿಯೂ ಮಂಗಳಾಭಿಷೇಕ ನಡೆಯಲು ರಾಮನು ಸಮ್ಮತಿಸುತ್ತಾನೆ. ಎಲ್ಲವೂ ಸಂತೋಷದಿಂದ ಮುಗಿಯುತ್ತದೆ.

## ವಾಲ್ಮೀಕಿ ರಾಮಾಯಣ ಮತ್ತು ಪ್ರತಿಮಾನಾಟಕ

ಪ್ರತಿಮಾನಾಟಕದಲ್ಲಿ ಭಾಸನು ತನ್ನ ರೂಪಕರಚನಾಕೌಶಲವನ್ನೂ ಪ್ರತಿಭಾಸಂಪತ್ತನ್ನೂ ಆಸ್ವಾದ್ಯಶವಾಗಿ ಮೆರೆಸಿದ್ದಾನೆ. ಅಭಿಷೇಕನಾಟಕದಂತೆಯೇ ಇದೂ ರಾಮಾಭಿಷೇಕದಿಂದಲೇ ಮುಕ್ತಾಯಗೊಳ್ಳುವುದಾದರೂ ಅದಕ್ಕೂ ಇದಕ್ಕೂ ಎಷ್ಟೋ ವ್ಯತ್ಯಾಸವಿದೆ. ಪಾತ್ರಪೋಷಣೆ, ರಸಪ್ರತಿಪಾದನೆ, ಭಾಷೆಯ ಪ್ರಯೋಗ ಇವೊಂದೊಂದರಲ್ಲಿಯೂ ಮಹಾಕವಿಯ ಪರಿಣತ ಕೌಶಲ ನಾಟಕದಲ್ಲಿ ಕ್ಷಣಕ್ಷಣಕ್ಕೂ ಎದ್ದು ಕಾಣುತ್ತದೆ. ಅಷ್ಟೇ ಅಲ್ಲ; ವಾಲ್ಮೀಕಿ ರಾಮಾಯಣದ ಕಥೆಯಲ್ಲಿ ವ್ಯತ್ಯಾಸಗಳನ್ನು ಮಾಡಿ ವಸ್ತುರಚನಾಸ್ವಾತಂತ್ರ್ಯದಿಂದ ಅವನು ಸಾಧಿಸಿರುವ ಕೆಲವು ಕಥಾಸಂವಿಧಾನಗಳು ಬಹು ಬಂಧುರವಾಗಿದೆ.

ರಾಮಾಯಣದಲ್ಲಿನ ರಾಮ, ಸೀತೆ, ಲಕ್ಷ್ಮಣ, ಭರತ, ದಶರಥ, ಕೈಕೇಯಿ, ವಸಿಷ್ಠಾದಿಗಳು ಮುಖ್ಯವಾಗಿ ಮಾನವರು. ಅವರಲ್ಲಿಯೂ ಗುಣದಂತೆಯೇ ದೋಷಗಳೂ ಉಂಟು. ಪ್ರಮಾಣದಲ್ಲಿ ತರ–ತಮವಿರಬಹುದು ಅಷ್ಟೆ. ಭಾಸನು ಈ ಪಾತ್ರಗಳಲ್ಲಿ ಆ ಲೋಪ–ದೋಷಗಳು ಇಲ್ಲವಾಗುವಂತೆ ನೂತನವಾಗಿ ಕಥಾಜಾಲವನ್ನು ಹೆಣೆದಿದ್ದಾನೆ.

ಭಾಸನ ನಾಟಕಕಲಾಕೌಶಲಕ್ಕೆ ಮೊದಲನೆಯ ಅಂಕದಲ್ಲಿಯೇ ಸಾಕಷ್ಟು ಸುಂದರ ನಿದರ್ಶನವಿದೆ. ಕೈಕೇಯಿಯ ಅಪವಾದವನ್ನು ತಪ್ಪಿಸುವುದಕ್ಕಾಗಿ ವಲ್ಕಲಧಾರಣದ ಆಕಸ್ಮಿಕ ಪ್ರಸಂಗವನ್ನು ಬಳಸಿದ್ದಾನೆ. ಅವದಾತಿಕೆ ಎಂಬ ಚೇಟಿಯೊಬ್ಬಳು ಹಾಸ್ಯಕ್ಕಾಗಿ ತಂದ ವಲ್ಕಲವನ್ನು ಸೀತೆ ಉಟ್ಟು ತನಗೆ ಅದು ಒಪ್ಪುವುದೋ ಇಲ್ಲವೋ ಎಂದು ಕುತೂಹಲಾವಿಷ್ಟಳಾಗುತ್ತಾಳೆ. ಮೇಲ್ನೋಟಕ್ಕೆ ಸರಳವಾದ ಈ ಸನ್ನಿವೇಶ ಸಂಕೀರ್ಣಗೊಂಡು ಅನಿರ್ವಚನೀಯವಾದ ಆತಂಕವನ್ನೂ ಕಳವಳವನ್ನೂ ಹೃದಯದಲ್ಲಿ ತುಂಬುತ್ತದೆ. ಅಂದು ರಾಮನಿಗೆ ಪಟ್ಟಾಭಿಷೇಕವಾಗಬೇಕಾದ ಶುಭದಿನ. ಪಟ್ಟೆ–ಪೀತಾಂಬರಗಳನ್ನುಟ್ಟು ಶೋಭಿಸಬೇಕಾದ ಸೀತೆಗೆ ನಾರುಸೀರೆಯಲ್ಲಿ ಕುತೂಹಲ ಹುಟ್ಟಬೇಕೆ? ಮುನಿಜನೋಚಿತವಾದ ಆ ನಾರುಮಡಿಯನ್ನು ಸೀತೆಯು ಧರಿಸಿ ತನ್ನ ರೂಪದಿಂದ

ಅದನ್ನೇ " ಸೌವರ್ಣಿಕ "ವಾಗಿ ಕಾಂತಿಗೊಳಿಸಿದ್ದರೂ ಅಮಂಗಳದ ಏನೋ ಶಂಕೆ ನಮ್ಮನ್ನು ಆವರಿಸಿಕೊಳ್ಳುತ್ತದೆ. ಚೇಟಿಯು ರಾಮನ ಪಟ್ಟಾಭಿಷೇಕ ವಾರ್ತೆಯನ್ನು ಸಡಗರದಿಂದ ಬಂದು ತಿಳಿಸಿದಾಗಲೂ ಸೀತೆಯ ಪ್ರಥಮ ಪ್ರಶ್ನೆ " ಅಪಿ ತಾತಃ ಕುಶಲೀ ?" —" ಮಾವನವರು ಕ್ಷೇಮವಷ್ಟೆ ?"—ಎಂದು. ಎಂತಹ ಪ್ರಶ್ನೆ ! ಈ ಮಾತನ್ನು ಆಡಿಸಿರುವ ಕವಿಯ ನೈಪುಣ್ಯವೆಂತಹುದು ! ತನ್ನ ಮಾವ ಅಶಕ್ತನಾಗಿ ತನ್ನ ಗಂಡ ರಾಜನಾಗಿಬಿಡಬೇಕೆಂಬ ಆತುರವಿಲ್ಲ ಅವಳಿಗೆ. ' ಮಹಾರಾಜರೇ ಒಲಿದು ಈ ಅಭಿಷೇಕವನ್ನು ಮಾಡುತ್ತಿದ್ದಾರೆ' ಎಂದು ಚೇಟಿಯು ಸ್ಪಷ್ಟಪಡಿಸಲು ಸಂತೋಷಗೊಂಡ ಸೀತೆಯು ತನ್ನ ಆಭರಣಗಳೆಲ್ಲವನ್ನೂ ತೆಗೆದು ಪಾರಿತೋಷಕವೆಂದು ಚೇಟಿಯ ಮಡಲಿಗೆ ಹಾಕುವ ಸಂದರ್ಭದಿಂದ ಸೀತೆಯ ನಿಷ್ಕಪಟ ಹಾಗೂ ಔದಾರ್ಯ ಮನೋವೃತ್ತಿಯನ್ನು ನಾವು ಮೆಚ್ಚುತ್ತೇವೆ ನಿಜ ; ಆದರೆ ಮೊದಲೇ ವನವಾಸಿಗಳಿಗೆ ಉಚಿತವಾದ ವಲ್ಕಲವನ್ನು ಧರಿಸಿರುವ ಸೀತೆ ಈಗ ಆಭರಣಗಳನ್ನೂ ಕಳಚಿಕೊಡುವುದು ಆಗಾಮಿ ಸಂಗತಿಗಳಿಗೆ ಮುನ್ಸೂಚನೆಯಾಗಿ ನಮ್ಮ ಆತಂಕವನ್ನು ಇನ್ನಷ್ಟು ಹೆಚ್ಚಿಸುತ್ತದೆ. ರಾಮನ ಮಂಗಳ ಪಟ್ಟಾಭಿಷೇಕ ನಡೆಯುತ್ತದೆಯೋ ಇಲ್ಲವೋ ಎಂಬ ಶಂಕೆ ಹುಟ್ಟುತ್ತದೆ. ಆಗಲೇ ಪಟ್ಟಾಭಿಷೇಕ ನಿಂತುಹೋದ ವಿಷಯ ಸೀತೆಯ ಅಂತಃಪುರಕ್ಕೆ ಬಂದ ರಾಮನಿಂದಲೇ ನಮಗೆ ತಿಳಿಯುತ್ತದೆ. ಸ್ವರ್ಣವರ್ಣದ ಆ ನಾರುಮಡಿ ಉಡಲು ಅವನಿಗೂ ಆಸೆ. ಸೀತೆಗೆ ಇಷ್ಟವಾದದ್ದು ರಾಮನಿಗೂ ಇಷ್ಟ. ನಮ್ಮ ಆತಂಕ-ಭಯಕ್ಕೆ ತಕ್ಕದಾಗಿ ಅವನು ವನವಾಸಕ್ಕೆ ಹೋಗಬೇಕಾದ ವಿಷಯವೂ ಕಂಚುಕಿಯಿಂದ ತಿಳಿಯುತ್ತದೆ. ಸೀತೆಯಂತೂ ವಲ್ಕಲವನ್ನೇ ಉಟ್ಟಿದ್ದಾಳೆ, ವಿಮುಕ್ತಾಭರಣಳೂ ಆಗಲೇ ಆಗಿದ್ದಾಳೆ. ಇನ್ನು ರಾಮ ಲಕ್ಷ್ಮಣರಿಗೆ ವಲ್ಕಲ ಬೇಕಷ್ಟೆ. ಆ ವೇಳೆಗೆ ಆರ್ಯೆರೇವೆ ನೂತನ ವಲ್ಕಲವನ್ನು ಹಳೆಯದನ್ನೇ ಧರಿಸಲಿಚ್ಛಿಸಿದ್ದ ಸೀತೆಗೆಂದು ಆತುರವಾಗಿ ಕಳಿಸಿಕೊಡುತ್ತಾಳೆ. ಸಕಾಲಕ್ಕೆ ಬಂದಿತೆಂದು ರಾಮನು ಅದನ್ನು ತಾನೇ ಪಡೆದು ಲಕ್ಷ್ಮಣನು ಆಗ್ರಹಮಾಡಲು ಅವನಿಗೂ ಕೊಟ್ಟು ಇಬ್ಬರೂ ಧರಿಸಿ ಸೀತೆಯೊಡನೆ ವನವಾಸಕ್ಕೆ ತೆರಳುತ್ತಾರೆ. ರಾಮಾಯಣದಲ್ಲಿ ಕೈಕೇಯಿಯೇ ವಲ್ಕಲವನ್ನು ಕೈಯ್ಯಾರ ಕೊಟ್ಟು ಅದನ್ನು ರಾಮ-ಲಕ್ಷ್ಮಣ ಸೀತೆ ಧರಿಸುವಂತೆ ಮಾಡಿ ತನ್ನ ಈ ವರ್ತನೆಯಿಂದ ಎಲ್ಲರ ಛೀಮಾರಿಗೂ ತುತ್ತಾಗುತ್ತಾಳೆ. ಭಾಸನ ಕೈಕೇಯಿ ವಲ್ಕಲಪ್ರಸಂಗವನ್ನೇ ಅರಿಯಳು. ಅವಳ ಪಾತ್ರವನ್ನು ಉದಾರಚರಿತವನ್ನಾಗಿ ಮಾಡಲು ಭಾಸನು ಮೊದಲಂಕದಿಂದಲೇ ಹೀಗೆ ಸಿದ್ಧನಾಗುತ್ತಾನೆ.

ಎರಡನೆಯ ಅಂಕದಲ್ಲಿ ಪುತ್ರವಿರಹಾಗ್ನಿದಗ್ಧನಾದ ದಶರಥನ ಪ್ರಲಾಪದ ದೃಶ್ಯವನ್ನು ಭಾಸನು ಹೃದಯವಿದ್ರಾವಕವಾಗಿ ಚಿತ್ರಿಸಿದ್ದಾನೆ. ಶೋಕವು ಮಿತಿಮೀರಿ ಅರೆಹುಚ್ಚನಂತಾದ ದಶರಥನು ಕೌಸಲ್ಯೆಯನ್ನೇ ಗುರುತಿಸಲಾರದೇ ' ನೀನು ಯಾರು ?' (ಕಾ ತ್ವಂ ಭೋಃ) ಎಂದು ಕೇಳುವನು. ಅವಳು ' ತಾನು ಕೌಸಲ್ಯೆ ' ಎಂದು ತಿಳಿಸುವಳು. ಆಗ ಅವನು ಆಶ್ಚರ್ಯದಿಂದ " ಏನು. ಏನು, ಸಮಸ್ತ ಜನರ ಹೃದಯಕ್ಕೂ ಕಣ್ಣುಗಳಿಗೂ

ಆಹ್ಲಾದದಾಯಕನಾದ ರಾಮನ ಜನನಿ ಕೌಸಲ್ಯೆಯೇ ನೀನು?" ಎಂದು ಕೇಳುವನು ಅನಂತರ ಸುಮಿತ್ರೆಯನ್ನು ನೋಡಿ—ಇಲ್ಲಿರುವ ಮತ್ತೊಬ್ಬಳು ಯಾರು (ಇಯಮಪರಾ ಕಾ ?) ಎಂದು ಕೇಳುವನು. ಈ ರೀತಿಯಾಗಿ ಹುಚ್ಚನಂತಾದ ದಶರಥನ ದುರ್ಭರ ಅವಸ್ಥೆಯು ಈ ಅಂಕದಲ್ಲಿ ಚಿತ್ರಿಸಲ್ಪಟ್ಟಿದೆ.

ಭಾಸನ .ಕಲ್ಪನಾಸಾಮರ್ಥ್ಯಕ್ಕೆ ಮೂರನೆಯ ಅಂಕ ಅಘೋಷ ದೃಷ್ಟಾಂತ. ಶ್ರೀಮದ್ರಾಮಾಯಣದಲ್ಲಿ ದಶರಥನು ಮರಣಹೊಂದಿದ ಸಂಗತಿಯನ್ನು ಭರತನಿಗೆ ತಿಳಿಸುವ ವಿಷಯದಲ್ಲಿ ಕಲಾಸೌಂದರ್ಯದೃಷ್ಟಿಯಿಂದ ಅಂತಹ ಅತಿಶಯವೇನಿಲ್ಲ. ಈ ವಿಷಯದಲ್ಲಿ ಭಾಸನ ಸಂವಿಧಾನ ಅದ್ಭುತವಾದುದು. ಅಯೋಧ್ಯೆಗೆ ಸಮೀಪವಾದ ಒಂದು ತೋಟದ ಬಳಿಯಲ್ಲಿ ಒಂದು ಪ್ರತಿಮಾಗೃಹ. ಅದರಲ್ಲಿ ಅಯೋಧ್ಯೆಯ ಗತಿಸಿದ ರಾಜರ ಪ್ರತಿಮೆಗಳು. ದಶರಥನು ಮೃತಪಟ್ಟಕೂಡಲೇ ಅವನ ಪ್ರತಿಮೆಯನ್ನೂ ಅಲ್ಲಿದ್ದ ರಘು, ದಿಲೀಪ, ಅಜ—ಈ ಮೂವರ ಪ್ರತಿಮೆಗಳ ಸಮೂಹಕ್ಕೆ ಸೇರಿಸಿರುತ್ತಾರೆ. ರಾಮಲಕ್ಷ್ಮಣರು ವನವಾಸಕ್ಕೆ ತೆರಳಿರುವುದರಿಂದ ರಾಜ್ಯಸ್ವೀಕಾರ ಮಾಡಲು ಭರತನನ್ನು ಕರೆತರಲು ವಸಿಷ್ಠವಾಮದೇವಾದಿಗಳು ರಥವನ್ನು ಕಳುಹಿಸಿದ್ದಾರೆ. ದಶರಥನ ಮರಣವೃತ್ತಾಂತವು ಭರತನಿಗೆ ತಿಳಿದಿರುವುದಿಲ್ಲ. ಆದರೆ ಸೂತನಿಗೆ "ರಾಜನು ಅಲ್ಪಸ್ವಲ್ಪ ಅಸ್ವಸ್ಥ"ನೆಂದು ಭರತನಿಗೆ ತಿಳಿಸುವಂತೆ ಹೇಳಿಕಳಿಸಿರುತ್ತಾರೆ. ಭರತನು ತಾನು ಹೋಗುವ ವೇಳೆಗೆ ತಂದೆಯ ಆರೋಗ್ಯ ಸುಧಾರಿಸಿರುತ್ತದೆಂದು ಯೋಚಿಸಿ ತನ್ನೊಡನೆ ಯಾರು ಯಾರು ಹೇಗೆ ಮಾತನಾಡುತ್ತಾರೆ, ತಾನೇ ಹೇಗೆ ವರ್ತಿಸುತ್ತೇನೆ, ಎಂಬೆಲ್ಲ ಊಹೆಗಳೊಂದಿಗೆ ಪ್ರಯಾಣಮಾಡಿ ಬರುತ್ತಾನೆ. ಅವನು ಶೂನ್ಯನಗರ ಪ್ರವೇಶ ಮಾಡುವುದು ವಸಿಷ್ಠಾದಿಗಳಿಗೆ ಇಷ್ಟವಿಲ್ಲ. ಅಲ್ಲಿಯೇ ಕೌಸಲ್ಯೆ ಮೊದಲಾದವರೂ ಸುಮಂತ್ರನೂ ದಶರಥನ ಪ್ರತಿಮಾದರ್ಶನಕ್ಕಾಗಿ ಹೋಗುವಂತೆ ಅವರು ಏರ್ಪಾಟು ಮಾಡುತ್ತಾರೆ. ಅಷ್ಟರಲ್ಲಿ ನಗರ ಪ್ರವೇಶಕ್ಕೆ ಶುಭಮುಹೂರ್ತದವರೆಗೂ ಕಾಯಲೇಬೇಕಾಗಿದ್ದ ಭರತನೂ ದೇವಸ್ಥಾನವೆಂದು ಭ್ರಮಿಸಿ ಪ್ರತಿಮಾಗೃಹವನ್ನು ಹೊಕ್ಕವನು ದೇವಕುಲಿಕನಿಂದ ಮೊದಲು ಸ್ಪಷ್ಟಾಸ್ಪಷ್ಟವಾಗಿಯೂ ಆಮೇಲೆ ಸ್ಪಷ್ಟವಾಗಿಯೂ ಪಿತೃವಿಯೋಗ, ರಾಮಲಕ್ಷ್ಮಣಸೀತೆಯರ ವನಗಮನದ ವಿಷಯಗಳನ್ನು ತಿಳಿದು ಮೂರ್ಛೆಹೋಗುತ್ತಾನೆ. ಆಗ ಅಲ್ಲಿಗೆ ಆಗಮಿಸಿದ ಮಾತೆಯರ ಹಸ್ತಸ್ಪರ್ಶದಿಂದ ಜ್ಞಾನ ತಳೆದರೂ ದುಃಖದಿಂದ ಉದ್ವಿಗ್ನನಾಗಿ ಕೈಕೇಯಿಗೆ ವಂದನೆಯನ್ನೂ ಮಾಡದೇ ಆಕೆಯನ್ನು ಕೋಪದಿಂದ ರಕ್ಷಿಸುತ್ತಾನೆ. ವಸಿಷ್ಠಾದಿಗಳು ತಂದ ಅಭಿಷೇಕೋದಕವನ್ನು ನಿರಾಕರಿಸಿ ಅಲ್ಲಿಂದಲೇ ರಾಮನಿರುವ ಅರಣ್ಯವೇ ತನಗೆ ಅಯೋಧ್ಯೆಯೆಂದು ಘೋಷಿಸಿ ಸುಮಂತ್ರನೊಡನೆ ಚಿತ್ರಕೂಟಕ್ಕೆ ತೆರಳುತ್ತಾನೆ. ಇಂತಹ ಪ್ರಸಂಗ ವಾಲ್ಮೀಕಿರಾಮಾಯಣದಲ್ಲಿಲ್ಲ. ಇದು ತನ್ನ ಕಲಾವಂತಿಕೆಯ ಹೃದಯವೆಂದು ಶ್ರುತಪಡಿಸಲೆಂದೇ ಕವಿ ಈ ದೃಶ್ಯವನ್ನು ಆಧರಿಸಿ ತನ್ನ ನಾಟಕಕ್ಕೆ ಪ್ರತಿಮಾನಾಟಕವೆಂದು ಹೆಸರಿಟ್ಟಿದ್ದಾನೆ.

ನಾಲ್ಕನೆಯ ಅಂಕದಲ್ಲಿ ಸೀತಾಪಹರಣ ಪ್ರಸಂಗ ಚಿತ್ರಿಸಲ್ಪಟ್ಟಿದೆ. ರಾಮಾಯಣದ ಸೀತಾಪಹರಣ ಪ್ರಸಂಗಕ್ಕೂ ಪ್ರತಿಮಾನಾಟಕದ ಸೀತಾಪಹರಣ ಪ್ರಸಂಗಕ್ಕೂ ಬಹಳ ವ್ಯತ್ಯಾಸವಿದೆ. ಅಲ್ಲಿ ಬರುವ ಸುವರ್ಣಮೃಗ ಪ್ರಸಂಗಕ್ಕೆ ಕವಿ ಇಲ್ಲಿ ಬೇರೆ ರೂಪವನ್ನೇ ಕೊಟ್ಟಿದ್ದಾನೆ. ಸಂದರ್ಭವನ್ನೂ ಉಚಿತವಾಗಿ ಬದಲಾಯಿಸಿದ್ದಾನೆ. ರಾಮನು ಲಕ್ಷ್ಮಣನನ್ನು ಯಾವುದೋ ಕೆಲಸಕ್ಕೆ ಬೇರೆ ಕಡೆಗೆ ಕಳಿಸಿರುತ್ತಾನೆ. ತಾನೂ ಎಲ್ಲಿಯೋ ಹೋಗಿದ್ದು ಆಶ್ರಮಕ್ಕೆ ಬರುತ್ತಾನೆ. ಮಾರನೆಯ ದಿನವೇ ದಶರಥನ ಸಾಂವತ್ಸರಿಕ ಶ್ರಾದ್ಧದ ದಿನ. ಸೀತೆಯು ಆಶ್ರಮವನ್ನು ಗುಡಿಸಿ, ಸಾರಿಸಿ ಶುದ್ಧಿಮಾಡಿರುತ್ತಾಳೆ. ರಾಮನಿಗೆ ಯೋಚನೆ—ಅಂತಹ ಶ್ರೇಷ್ಠ ತಂದೆಗೆ ಇಂತಹ ಮಗನು ಉಚಿತವಾದ ಪಿಂಡವನ್ನು ಕೊಡುವುದಕ್ಕೆ ಸಾಮರ್ಥ್ಯವಿಲ್ಲದೇ ಹೋಯಿತೇ ಎಂದು. ಸೀತೆಯು ಭರತನು ಅದನ್ನು ಯಥಾವತ್ತಾಗಿ ನಡೆಸುವನೆಂದೂ ಅದರಿಂದ ದಶರಥನು ರಾಮನು ನಡೆಸುವ ಶ್ರಾದ್ಧದಿಂದ ತೃಪ್ತನಾಗುತ್ತಾನೆಂದೂ ಸಮಾಧಾನ ಹೇಳುತ್ತಾಳೆ. ಆ ವೇಳೆಗೆ ರಾವಣನು ಸಂನ್ಯಾಸಿಯಾಗಿ ಬಂದು ತಾನು ಅತಿಥಿಯೆಂದು ಘೋಷಿಸುತ್ತಾನೆ. ರಾಮನೂ, ಸೀತೆಯೂ ಅವನನ್ನು ಯಥೋಚಿತ ಸತ್ಕರಿಸುತ್ತಾರೆ. ಪಿತೃಶ್ರಾದ್ಧದಲ್ಲಿ ಯಾವ ಆಹಾರವಸ್ತುಗಳನ್ನು ಉಪಯೋಗಿಸಬೇಕೆಂಬುದನ್ನು ತಿಳಿಸುತ್ತಾ ರಾವಣ ಸಂನ್ಯಾಸಿಯು ಕಾಂಚನಪಾರ್ಶ್ವಮೃಗದ ಮಾಂಸವನ್ನು ಶ್ರೇಷ್ಠವೆಂದು ವರ್ಣಿಸುತ್ತಾನೆ. ಅಷ್ಟರಲ್ಲಿ ಅಲ್ಲಿಯೇ ಕಾಂಚನಪಾರ್ಶ್ವಮೃಗವೊಂದು ಸುಳಿಯುತ್ತದೆ. ರಾವಣನು 'ನಿನ್ನ ಸೇವೆಗಾಗಿ ಹಿಮವಂತನೇ ಮೃಗವನ್ನು ಕಳಿಸಿರುವನು' ಎಂದು ರಾಮನಿಗೆ ಹೇಳುತ್ತಾನೆ. ರಾಮನು ಸೀತೆಗೆ ತಾನು ಅದನ್ನು ಹಿಡಿದು ತರುವವರೆಗೂ ಪೂಜ್ಯರಾದ ಅತಿಥಿಗಳ ಸೇವೆಯನ್ನು ಮಾಡುತ್ತಿರಬೇಕೆಂದು ಅಪ್ಪಣೆಮಾಡಿ ಆ ಮೃಗವನ್ನು ಅಟ್ಟಿಸಿ ಕೊಂಡು ಹೋಗುತ್ತಾನೆ. ರಾಮನೂ ವೈದೇಹಿಯೂ ತನ್ನನ್ನು ನಂಬಿ ಸತ್ಕರಿಸಿದ್ದನ್ನೂ ಲಕ್ಷಿಸದೇ ರಾವಣನು ಸೀತೆಯನ್ನು ಕದ್ದೊಯ್ಯುತ್ತಾನೆ. ಈ ನಾಟಕದಲ್ಲಿ ಸೀತೆಯು ಅದಮ್ಯಚಾಪಲ್ಯದಿಂದ ಸ್ವರ್ಣಮೃಗವನ್ನು ಇಚ್ಛಿಸಿ ಅದನ್ನು ಪಡೆಯಲು ರಾಮನನ್ನು ಬಲಾತ್ಕರಿಸಿದ ಪ್ರಸಂಗವಿಲ್ಲ. ರಾಮನು ಸ್ವರ್ಣಮೃಗವನ್ನು ತರಲು ಹೋದಾಗ ಲಕ್ಷ್ಮಣನನ್ನು ಮನಸ್ಸು ಬಂದಂತೆ ಸೀತೆಯು ನಿಷ್ಠುರವಾಗಿ ದೂಷಿಸುವ ಪ್ರಮೇಯವೂ ಇಲ್ಲ. ಬದಲಾಗಿ ರಾಮನ ಆದರ್ಶ ಪಿತೃಭಕ್ತಿಯೂ, ಸೀತೆಯ ಸಾತ್ವಿಕ ನಿಷ್ಠೆಯೂ ಸ್ಪಷ್ಟವಾಗುತ್ತದೆ. ರಾವಣನ ಕಪಟ ಸುವ್ಯಕ್ತವಾಗುತ್ತದೆ. ಭಾಸನು ಮಾಡಿ ಕೊಂಡಿರುವ ಈ ಬದಲಾವಣೆ ರಮಣೀಯವಾಗಿದೆ. ಉದ್ದೇಶದಂತೆ ರಾಮ ಮತ್ತು ಸೀತೆಯರ ಪಾತ್ರದ ಔನ್ನತ್ಯವನ್ನು ಮೆರೆಸುತ್ತದೆ.

ಆಗಾಗ್ಗೆ ಸುಮಂತ್ರನನ್ನು ಜನಸ್ಥಾನಕ್ಕೆ ಕಳುಹಿಸಿ ರಾಮನ ವರ್ತಮಾನವನ್ನು ತಿಳಿಯುತ್ತಿದ್ದ ಭರತನಿಗೆ ಸೀತಾಪಹರಣದ ವರ್ತಮಾನವು ತಿಳಿಯುವಂತೆಯೂ ಅವನು ಆಗ ಮತ್ತೆ ಕೈಕೇಯಿಯನ್ನು ದೂಷಿಸಲು ತೊಡಗಿದಾಗ ಅವಳ ಉದಾತ್ತ ಧ್ಯೇಯವು ಬೆಳಕಿಗೆ ಬರುವಂತೆಯೂ ಭಾಸ ಮಾಡಿರುತ್ತಾನೆ. ವೈಧವ್ಯ ಪ್ರಾಪ್ತವಾಗಿಯೂ

ದಾದರೂ ಚಿಂತಿಸದೇ ಸಪತ್ನೀಪುತ್ರನಾದ ರಾಮನನ್ನು ಉಳಿಸಹೊರಟ ಕೈಕೇಯಿಯ ಪಾತ್ರ ಎಂತಹ ಉದಾತ್ತವಾದುದು ಎಂಬ ಅರಿವುಂಟಾಗುತ್ತದೆ. ಇದನ್ನು ವಸಿಷ್ಠ ವಾಮದೇವಾದಿಗಳ ಸಮ್ಮತಿಯಿಂದಲೇ ಅವಳು ಯೋಜಿಸಿದ್ದುದು ಎಂದು ತಿಳಿದಾಗ ಭರತನ ಕೋಪ ಪರಿತಾಪವಾಗಿ ಮೂಡುತ್ತದೆ. ಕೈಕೇಯಿಯಲ್ಲಿ ಎಲ್ಲರ ಗೌರವವೂ ನೂರ್ಮಡಿಯಾಗುತ್ತದೆ.[22] ಕೂಡಲೇ ರಾಮನ ಸಹಾಯಕ್ಕಾಗಿ ಭರತನು ಪರಿವಾರ ಮಾತೆಯರು ಮಂತ್ರಿಗಳು ಮತ್ತು ಸೈನ್ಯಸಮೇತನಾಗಿ ವನಕ್ಕೆ ತೆರಳುತ್ತಾನೆ. ಶತ್ರುವನ್ನು ಸಂಹರಿಸಿ ವಿಜಯಿಯಾಗಿ ಆಗಲೇ ಹಿಂತಿರುಗಿದ್ದ ರಾಮನ ಪಟ್ಟಾಭಿಷೇಕ ತಪೋವನದಲ್ಲಿಯೂ ಅನಂತರ ಮತ್ತೆ ಕೈಕೇಯಿಯ ಇಷ್ಟದಂತೆ ಕಣ್ತುಂಬ ಅಯೋಧ್ಯೆಯಲ್ಲೂ ಯಥಾವತ್ತಾಗಿ ನಡೆಯುತ್ತದೆ. ಇದೆಲ್ಲ ರಾಮಾಯಣದಲ್ಲಿಲ್ಲ. ಈ ಮಾರ್ಪಾಟುಗಳಿಂದ ನಾಟಕದಲ್ಲಿ ವಿಶೇಷ ಪ್ರಯೋಜನವುಂಟಾಗಿದೆ. ದಶರಥನು ಅರಿಯದೇ ಕೊಂದಿದ್ದ ಋಷಿಕುಮಾರನ ಕಥೆ ತತ್ಫಲವಾಗಿ ಪಡೆದಿದ್ದ ಶಾಪಕ್ಕೂ ಈ ಕಥೆಗೂ ನೇರಸಂಪರ್ಕ ಒದಗಿದೆ. ರಾಮಾಯಣದಲ್ಲಿ ಆ ಪ್ರಸಂಗವಿದ್ದರೂ ಈ ಸಂಬಂಧ ಒದಗಿದೆ. ಕರುಣರಸವು ಮತ್ತಷ್ಟು ತುಂಬಿ ಹರಿಯಲೆಂಬ ಉದ್ದೇಶದಿಂದ ಭರತನಿಗೆ ಸೀತಾಪಹರಣದ ಸುದ್ದಿಯು ತಿಳಿಯುವಂತೆಯೂ ರಾಮನಿಗೆ ಪ್ರಿಯರಾಗಿದ್ದ ಮುನಿಗಳ ಮನಸ್ಸಿಗೆ ಆನಂದ ಕೊಡುವ ಉದ್ದೇಶದಿಂದ ತಪೋವನದಲ್ಲೇ ಅವನ ಪಟ್ಟಾಭಿಷೇಕವೂ ನೆರವೇರುವಂತೆಯೂ ಮಾರ್ಪಾಟು ಮಾಡಲಾಗಿದೆ.

ಭಾಸನು ಈ ರೀತಿ ರಾಮಾಯಣದ ಮೂಲೋದ್ದೇಶಕ್ಕೆ ಹಾನಿಯಾಗದಂತೆ ಅಲ್ಲಿಯ ಪಾತ್ರಗಳು ಮತ್ತಷ್ಟು ಉಜ್ವಲವಾಗುವಂತೆ ಸಂಗತಿಗಳು ಸುಸಂಘಟಿತವಾಗುವಂತೆ ಮಾಡಿದ್ದಾನೆ. ದಶರಥನ ಮರಣವೇನೋ ತಪ್ಪಿಲ್ಲ. ಆದರೂ ದಶರಥನ ಕುಟುಂಬವು ಭಾಸನ ಪ್ರತಿಭಾಪ್ರಭಾವದಿಂದ ನಿಷ್ಕಳಂಕ ಪ್ರೇಮಸಂಸಾರವಾಗಿ ಬೆಳಗುತ್ತದೆ. ಕಲ್ಪನೆಗಳಲ್ಲಿ ರಮಣೀಯತೆಯೂ ಕಥಾಯೋಜನೆಯಲ್ಲಿ ಅನ್ಯಾದೃಶ ನಾಟಕೀಯತೆಯೂ ಹೊಂದಿಕೊಂಡು ಉದ್ದಕ್ಕೂ ಸ್ವಂತಿಕೆಯನ್ನು ಸೂಸುವ ಶ್ರೇಷ್ಠ ನಾಟಕವಾಗಿದೆ.

## ಪಾತ್ರಚಿತ್ರಣ

### ರಾಮ

ವಾಲ್ಮೀಕಿ ರಾಮಾಯಣದಲ್ಲಿ ರಾಮನು ಪುರುಷಶ್ರೇಷ್ಠನೆಂದೂ ಪಿತೃಭಕ್ತಿಯಲ್ಲಿ, ಭ್ರಾತೃಪ್ರೇಮದಲ್ಲಿ, ಕಾಂತಾನುರಾಗದಲ್ಲಿ, ಪ್ರಜಾವಾತ್ಸಲ್ಯದಲ್ಲಿ, ಮೈತ್ರಿಯಲ್ಲಿ, ಆದರ್ಶನೆಂದು ವರ್ಣಿತನಾಗಿದ್ದಾನೆ. ಇತರರ ಅಲ್ಪಾಲ್ಪಗುಣವನ್ನೂ ಹಿರಿದುಮಾಡು

---

22 ಮೊದಲನೆಯ ಅಂಕದಲ್ಲಿ ರಾಮನ ವನವಾಸಪ್ರಸ್ತಾಪವನ್ನು ಕಂಚುಕಿಯು ಹೇಳಿದಾಗ "ಉದರ್ಕೇಣ ಗುಣೇನ ತು ಭವಿತವ್ಯಮ್" ಎಂದು ರಾಮನಾಡಿದ್ದ ಮಾತಿನ ಯಾಥಾರ್ಥ್ಯ ಸ್ಪಷ್ಟವಾಗುತ್ತದೆ.

ಭಾವಿಸಿ ಪರರ ದೋಷಗಳನ್ನು ಮರೆಯುವ ಉದಾತ್ತಚರಿತೆ ಅವನ ಪ್ರಕೃತಿಗುಣವೆಂದೂ ವರ್ಣಿತವಾಗಿದೆ. ಹೀಗಿದ್ದರೂ ಕೆಲವು ಸಂದರ್ಭಗಳಲ್ಲಿ ಅವನ ನಡತೆಯ ಧರ್ಮಸೂಕ್ಷ್ಮವು' ನಮಗೆ ಒಗಟಾಗುತ್ತದೆ. ಇಕ್ಷ್ವಾಕುವಂಶದ ಸಂಪ್ರದಾಯದಂತೆ ಹಿರಿಯ ಮಗನಾದ ಅವನಿಗೇ ರಾಜ್ಯಾಭಿಷೇಕ ಸಲ್ಲಬೇಕು ನಿಜ. ಆದರೆ ತನ್ನ ತಂದೆ ದಶರಥ ಕೈಕೇಯಿಯನ್ನು ವಿವಾಹವಾಗುವ ಸಂದರ್ಭದಲ್ಲಿ ರಾಜ್ಯವನ್ನು ಅವಳ ಪುತ್ರನಿಗೇ ಕೊಡುವೆನೆಂದು ವಚನ ಕೊಟ್ಟಿದ್ದನೆಂಬುದೂ ಅವನಿಗೆ ತಿಳಿದಿದೆ. ಹೀಗಿದ್ದರೂ ಪುತ್ರಮೋಹದಿಂದ ತಂದೆ, ಅದೂ ಭರತನು ಇಲ್ಲದ ಸಮಯದಲ್ಲಿ, ಅಭಿಷೇಕ ಮಾಡಲು ಸಿದ್ಧವಾದರೆ ಇಂತಹ ಆದರ್ಶಪುರುಷನಾದ ರಾಮನು ತಂದೆಗೆ ಭರತನು ಬರುವವರೆಗೆ ಕಾಯೋಣವೆಂದಾದರೂ ತಿಳಿಸಬಾರದಾಗಿತ್ತೆ ? ಕಾರಣಾಂತರದಿಂದ ಹಾಗೆ ಕಾಯಲು ಸಾಧ್ಯವಿಲ್ಲದಿದ್ದರೆ ಕೈಕೇಯಿಗಾದರೂ ತಿಳಿಸಿ ಒಪ್ಪಿಸಬಾರದಾಗಿತ್ತೆ ? ಒಂದುವೇಳೆ ಪ್ರೇಮಪತ್ನಿ ಕೈಕೇಯಿಗೆ ತಂದೆ ದಶರಥ ಇಂತಹ ಮುಖ್ಯವಿಷಯವನ್ನು ತಿಳಿಸಿರದೇ ಇರಲಾರನೆಂದು ಅವನು ಭಾವಿಸಿದ್ದರೆ, ರಾಮನು ತನ್ನ ತಾಯಿ ಕೌಸಲ್ಯೆ ಸುಮಿತ್ರೆಯರಿಗೆ ಯುವರಾಜ್ಯಾಭಿಷೇಕದ ಮಂಗಳ ವಿಷಯ ತಿಳಿಸಿ ವಂದಿಸಿ ಅವಳ ಆಶೀರ್ವಾದವನ್ನು ಪಡೆದುಕೊಂಡಂತೆ ಕೈಕೇಯಿಗೂ ತಿಳಿಸಿ ವಂದಿಸಿ ಅವಳ ಆಶೀರ್ವಾದವನ್ನೂ ಪಡೆಯಬಾರದಾಗಿತ್ತೆ? ವಿಧಿಯನ್ನು ವಂಚಿಸಹೋದ ದಶರಥನೇ ವಂಚಿತನಾದಾಗ ರಾಮನು ತನ್ನ ಸತ್ಯಸಂಧತೆ, ನಿಸ್ಪೃಹತೆ, ಪಿತೃಭಕ್ತಿಗಳನ್ನು ಮೆರೆಸಿದರೂ ಕ್ಷಣಕಾಲವಾದರೂ ದುಃಖದಿಂದ ಮನಸ್ಸನ್ನು ಭಾರಮಾಡಿಕೊಂಡು ಸೀತೆಯನ್ನು ಕಾಣಲು ಅವಳ ಅಂತಃಪುರಕ್ಕೆ ನಡೆದನೆಂದು ಶ್ರೀಮದ್ರಾಮಾಯಣದಲ್ಲಿ ಹೇಳಿದೆ. ವನವಾಸದ ಮೊದಲ ರಾತ್ರಿ ವೃದ್ಧ ತಂದೆಯ ಅಚಾರ ವಿಚಾರವನ್ನು ಕುರಿತು ಅಸಮಾಧಾನ ವ್ಯಕ್ತಪಡಿಸುವನೆಂದೂ ವರ್ಣಿತವಾಗಿದೆ. ಭಾಸನ ಪ್ರತಿಮಾನಾಟಕದಲ್ಲಿ ರಾಮನ ಪಾತ್ರವು ಅಪಾರ ಘನತೆಯಿಂದ ಶೋಭಿಸುತ್ತದೆ. ರಾಜ್ಯಾಭಿಷೇಕವು ತಪ್ಪಿಹೋದುದಕ್ಕಾಗಿ ಅವನು ಸ್ವಲ್ಪವೂ ಚಿಂತಿಸುವುದಿಲ್ಲ. ಅಭಿಷೇಕವು ಸಧ್ಯ ನಿಂತುಹೋಯಿತಲ್ಲಾ ಎಂಬುದೇ ಅವನಿಗೆ ಸಂತೋಷ. ತಾನು ನಿರಾತಂಕವಾಗಿ ರಾಜಪುತ್ರನಾಗಿರುವುದೇ ಅವನಿಗೆ ಇಷ್ಟ. ಅವನ ಮನೋಧರ್ಮ ಅವನು ಆಡುವ ಮಾತುಗಳಲ್ಲಿ ಸ್ಪಷ್ಟವಾಗುವುದು. "ಆರ್ಯ, ಗುಣಾಃ ಖಲ್ವತ್ರ" ಎಂದು ಕಂಚುಕಿಗೆ ತಿಳಿಸಿ—ತಂದೆಯು ವನಕ್ಕೆ ಹೋಗಿ ವಾನಪ್ರಸ್ಥಾಶ್ರಮಿಯಾಗುವುದು ತಪ್ಪಿತು ; ತಂದೆಯ ಲಾಲನೆ ಪೋಷಣೆಯಲ್ಲಿ ತಾನು ಬಾಲಭಾವದಿಂದಲೇ ಮುಂದುವರೆಯುವ ಅವಕಾಶವು ಉಳಿಯಿತು ; ಸೋದರರು ಪರಿಭೋಗಗಳಿಂದ ವಂಚಿತರಾಗುವುದೂ ತಪ್ಪಿತು; ಹೊಸರಾಜ ಹೇಗೋ ಏನೋ ಎಂಬ ಶಂಕೆ ಪ್ರಜೆಗಳಿಗೆ ತಪ್ಪಿತು; ಎಂದು ವಿವರಿಸುವನು. ಅಷ್ಟೇ ಅಲ್ಲ, ಸುಮಂತ್ರನು 'ಕೈಕೇಯಿಗೆ ರಾಜ್ಯಲೋಭ' ಎಂದು ಹೇಳಲು "ಆರ್ಯ, ನಮ್ಮ ಮೇಲೆ ಪಕ್ಷಪಾತದಿಂದ ಹೀಗೆಲ್ಲ ಮಾತನಾಡುತ್ತಿರುವಿ. ಶುಲ್ಕದತ್ತವಾದ ರಾಜ್ಯವನ್ನು ಅವಳು ತನ್ನ ಪುತ್ರನಿಗೆ ಕೇಳಿ ಪಡೆದರೆ ಅದು ಲೋಭ ; ಭ್ರಾತೃವಿಗೆ ಸಲ್ಲಬೇಕಾಗಿದ್ದ ರಾಜ್ಯವನ್ನು ನಾನು ಪಡೆದರೆ

ಲೋಭವಲ್ಲ; ಅಲ್ಲವೆ? ಎಂದು ತನ್ನ ಆತ್ಮಸಂಸ್ಕೃತಿಯ ಔನ್ನತ್ಯವನ್ನು ಮೆರೆಸುವನು. ಜನರು ಇವನ ಧೈರ್ಯ ಸಂಯಮಗಳನ್ನು ನೋಡಿ ಚಕಿತರಾಗಿ ಮಾತನಾಡಿಕೊಂಡರೆ, "ಮಗ ತನ್ನ ತಂದೆಯ ಮಾತನ್ನು ನಡೆಸಿದರೆ ಅದರಲ್ಲಿ ಅಂಥ ವಿಸ್ಮಯಕ್ಕೆ ಕಾರಣವಾದರೂ ಏನು ?" ಎನ್ನುವನು. ಅವನಿಗೆ ಇದೆಲ್ಲ ಆಶ್ಚರ್ಯವಲ್ಲ : ಇದರಿಂದ ನಿರಾಶೆಯಿಲ್ಲ ; ವ್ಯಾಕುಲವೂ ಇಲ್ಲ. ವನವಾಸಕ್ಕೆ ತೆರಳಬೇಕಾದಾಗ ಅವನಿಗೆ ಇಕ್ಷ್ವಾಕು ವಂಶದ ತನ್ನ ಪೂರ್ವಜರು ಮುಪ್ಪಿನಲ್ಲಿ ಮಾಡಿದ ಧರ್ಮಾಚರಣೆ ತನಗೆ ತಾರುಣ್ಯದಲ್ಲೇ ಸಾಧಿಸುವ ಅವಕಾಶ ದೊರಕಿತಲ್ಲ ಎಂಬುದೇ ಸಂತೋಷ.

ಪ್ರತಿಮಾನಾಟಕದ ರಾಮನಿಗೆ ಕೈಕೇಯಿಯಲ್ಲಿ ಅಪಾರ ಪ್ರೀತಿ. ಅವಳು ತನ್ನ ಶ್ರೇಯಃಕಾಮಿನಿ ಎಂಬ ಅಚಲ ನಂಬಿಕೆ. ದಶರಥನು ಕೈಕೇಯಿಯ ವರವನ್ನು ಕೇಳಿ ಮೂರ್ಛೆ ಹೋಗಲು ಅರಮನೆಯಲ್ಲಿ ಹಾಹಾಕಾರ ಕೇಳುವುದು. ಆ ಧ್ವನಿಯನ್ನು ಕೇಳಿ ರಾಮನು ಏನೋ ಅನರ್ಥವಾಗಿದೆಯೆಂದು ಊಹಿಸಿದನು. ಅದಕ್ಕೆ ಕೈಕೇಯಿಯೇ ಕಾರಣಳೆಂದು ಬಯ್ಯಲು, "ಹಾಗಿದ್ದರೆ ಇದು ಕೆಡುಕಲ್ಲ. ಯಾವುದೋ ಮುಂದಿನ ಒಳ್ಳೆಯ ಗುರಿಯನ್ನಿಟ್ಟುಕೊಂಡೇ ಅವಳು ಹಾಗೆ ಮಾಡಿದ್ದಾಳೆ" ಎನ್ನುವನು. ಏಕೆಂದರೆ ತಾಯಿ ಎಂದಿಗೂ ಅನರ್ಥವನ್ನುಂಟುಮಾಡಲಾರಳು ಎಂದೇ ಅವನ ತೀರ್ಮಾನ. ಈ ನಾಟಕದ ರಾಮನು ತನ್ನ ಪತ್ನಿ ಸೀತೆಯಲ್ಲಿ ತೋರುವ ಪ್ರೇಮವು ಸರಸವೂ ಸುಂದರವೂ ಆಗಿದೆ. ಇಬ್ಬರ ಮನಸ್ಸೂ ಒಂದೇ. ಅವಳು ಆಭರಣ ತೊಡಲನುವಾದಾಗ ಕನ್ನಡಿ ಹಿಡಿಯುವುದೂ ಅವನಿಗೆ ಪ್ರಿಯದಾಯಕ. ಅವಳುಟ್ಟಿದ್ದ ಸ್ವರ್ಣವರ್ಣದ ನಾರುಡೆಯನ್ನು ಕಂಡು ಅವನಿಗೂ ಅದರ ಮೇಲೆ ಆಸೆ. ಸೀತೆಗೆ ಇಷ್ಟವಾದದ್ದು ರಾಮನಿಗೂ ಇಷ್ಟ. ಅವರದು ಒಂದೇ ಆತ್ಮ ; ಒಂದೇ ಮನಸ್ಸು ; ಎರಡು ದೇಹಗಳು ಅಷ್ಟೆ.

ರಾಮನು ಪಿತೃಭಕ್ತಿಪರಾಯಣ. ವನದಲ್ಲಿದ್ದೂ ತಂದೆಯ ಸಾಂವತ್ಸರಿಕ ಶ್ರಾದ್ಧವನ್ನು ಸ್ವರ್ಗದಲ್ಲಿರುವ ತನ್ನ ತಂದೆಗೆ ತನ್ನ ಕಷ್ಟ ಅರಿವಾಗದಂತೆ ಉಚಿತವಾದ ರೀತಿಯಲ್ಲಿ ಆಚರಿಸಬೇಕೆಂದು ಅವನ ಆಕಾಂಕ್ಷೆ. ಆದುದರಿಂದಲೇ ಪಿತೃಗಳಿಗೆ ಪ್ರಿಯವಾದ ಕಾಂಚನಪಾರ್ಶ್ವಮೃಗ, ಅದು ಹಿಮವಂತನ ಉನ್ನತ ಶಿಖರದಲ್ಲಿದೆಯೆಂದರೂ ತರಲು ಸಿದ್ಧನಾದ. ಅವನಿಗೆ ತನ್ನ ಕ್ಷಾತ್ರತೇಜಸ್ಸಿನಲ್ಲಿರುವಂತೆ ತಪೋಶಕ್ತಿಯಲ್ಲೂ ಸಂಪೂರ್ಣ ಆತ್ಮವಿಶ್ವಾಸ. ಈ ಸತ್ಯವನ್ನು ಅರಿತದ್ದರಿಂದಲೇ ರಾವಣನು ಪೌರುಷ ತೋರಲು ಹೆದರಿ ಸೀತೆಯನ್ನು ಕದ್ದೊಯ್ಯಲು ಕಪಟ ಹೂಡಿದ್ದು. ರಾಮನ ಪಿತೃ-ಭಕ್ತಿ ಏಕಾಂಗಿಯಾದ ಸೀತೆಯನ್ನು ರಾವಣ ಸಂನ್ಯಾಸಿಯ ಸೇವೆಗೆ ಒಪ್ಪಿಸಿ ರಾಮನು ಕಾಂಚನಪಾರ್ಶ್ವಮೃಗದ ಬೆನ್ನಟ್ಟಿ ಹೊರಡುವಂತೆ ಮಾಡಿತು. ಭಾಸನು ನಾಟಕದಲ್ಲಿ ರಾಮನನ್ನು 'ನರಚಂದ್ರನು' 'ಭೂಲೋಕಶಶಾಂಕ' 'ಜಗತ್ಪ್ರಿಯ' ಎಂದು ವರ್ಣಿಸಿದ್ದಾನೆ, ಅವನ ದರ್ಶನವೇ ಆನಂದ. ಅವನಿಗೆ ಸೋಕಿ ಸುಳಿಯುವ ವನವಾತಗಳೂ ಧನ್ಯವೇ. ಅವನನ್ನು ತೊರೆದ ಅಯೋಧ್ಯೆಯ ಪಶುಪಕ್ಷಿಗಳೂ ದುಃಖದಿಂದ ತುಂಬಿತ್ತವೆ. ರಾಮನ ಸೋದರಸ್ನೇಹ ಅನುಪಮವಾದುದು ; ಪಾದುಕೆಗಳನ್ನು

ಕೋರಿದ ಭರತನನ್ನು ಬಿಗಿದಪ್ಪಿ, ಕಣ್ತುಂಬ ಹನಿಗೂಡಿಸಿ ಅವನಾಡುವ ಮಾತುಗಳು ಎಂತಹವರ ಕಣ್ಣನ್ನೂ ತೇವಗೊಳಿಸುವುದು. ಭರತನು ಕಣ್ಮರೆಯಾದ ಮೇಲೆ ಅಯ್ಯೋ! ಹುಡುಗನಾದ ಭರತನೊಬ್ಬನೇ ರಾಜ್ಯಭಾರವೆಲ್ಲ ಹೊರಬೇಕಾಯಿತಲ್ಲ. ಎಂದು ವ್ಯಥೆಗೊಳ್ಳುವನು. ಅಷ್ಟೇ ಅಲ್ಲ, ಸಂಸಾರದ ಬಾಂಧವ್ಯದ ಸೌಂದರ್ಯವನ್ನು ಅನ್ಯಾದೃಶವಾಗಿ ಮೆರೆಸುವ ಆದರ್ಶಪುರುಷನೇ ರಾಮ.

**ಭರತ**

ವಾಲ್ಮೀಕಿ ರಾಮಾಯಣದ ಭರತನಂತೆಯೇ ಪ್ರತಿಮಾನಾಟಕದ ಭರತನೂ ಭ್ರಾತೃವಾತ್ಸಲ್ಯಕ್ಕೆ ಆದರ್ಶನೇ. ಅವನ ಬಾಲ್ಯದ ಬಹುಭಾಗ ಅಯೋಧ್ಯೆಯ ತಂದೆಯ ಮನೆಗಿಂತಲೂ ಕೇಕಯರಾಜ್ಯದ ಸೋದರಮಾವನ ಮನೆಯಲ್ಲೇ ಕಳೆಯುತ್ತದೆ. ತಂದೆಗೆ ಅನಾರೋಗ್ಯವೆಂಬ ಸುದ್ದಿಯನ್ನು ಕೇಳಿದೊಡನೆಯೇ ಅವನು ತುಂಬ ಆತಂಕಗೊಳ್ಳುತ್ತಾನೆ. ತತ್‌ಕ್ಷಣವಲ್ಲೇ ಪ್ರಯಾಣಮಾಡಿ ಅಯೋಧ್ಯೆಗೆ ರಥದಲ್ಲಿ ಬೇಗಬೇಗ ಬರುತ್ತಾನೆ. ದಾರಿಯಲ್ಲಿ ಬರುತ್ತಾ ಅಯೋಧ್ಯೆಯ ಅರಮನೆಯಲ್ಲಿ ತನ್ನನ್ನು ಎದುರ್ಗೊಳ್ಳುವ ತಂದೆಯ ಹರ್ಷ, ಮಾತೆಯರ ಆನಂದಬಾಷ್ಪ, ಸೋದರರ ಸರಸ, ಉಳಿದವರ ಕುತೂಹಲ ಇವುಗಳ ಚಿತ್ರವನ್ನು ಪ್ರಯಾಣದುದ್ದಕ್ಕೂ ಮನದಲ್ಲಿಯೇ ಕಲ್ಪಿಸಿಕೊಳ್ಳುತ್ತಿರುತ್ತಾನೆ. ಅಯೋಧ್ಯಾನಗರದ ಬಾಗಿಲಿಗೆ ಬಂದಾಗ ವಸಿಷ್ಠವಾಮದೇವಾದಿ ಗುರುಗಳು ಮಾಡಿದ ಆಜ್ಞೆಯಂತೆ ಹೇಗೋ ತನ್ನ ಆತುರವನ್ನು ಸಂಯಮಗೊಳಿಸಿ ನಗರಪ್ರವೇಶಕ್ಕಾಗಿ ಶುಭಮುಹೂರ್ತವನ್ನು ನಿರೀಕ್ಷಿಸುತ್ತಾನೆ. ವಾಯುವೇಗದಲ್ಲಿ ಧಾವಿಸಿಬಂದಿದ್ದ ಅಶ್ವಗಳ ದಣಿವಾರಿಸಲು ಸೂತನಿಗೆ ತಿಳಿಸಿ ಹೊತ್ತುಕಳೆಯುವ ಬಗೆಯನ್ನು ಯೋಚಿಸುತ್ತಿರಲು ಪ್ರತಿಮಾಗೃಹ ಕಣ್ಣಿಗೆ ಬೀಳುತ್ತದೆ. ಅದನ್ನು ದೇವಾಲಯವೆಂದು ಭಾವಿಸಿ ಪ್ರವೇಶಿಸುತ್ತಾನೆ. ಅದು ಯಾವ ಮಂದಿರವೆಂದು ಸ್ಪಷ್ಟವಾಗದೇ ಉಚಿತವಾದ ಮಂತ್ರಗಳಿಲ್ಲದಿದ್ದರೂ ನಮಸ್ಕರಿಸಲು ಬಾಗುತ್ತಾನೆ. ದೇವತೆಗಳಲ್ಲಿ ಅಷ್ಟು ಭಕ್ತಿ, ಪೂಜ್ಯಭಾವ ಅವನಿಗೆ.

ಅಲ್ಲಿ ಇರುವುದು ಒಂದೇ ಪ್ರತಿಮೆ ಅಲ್ಲ; ನಾಲ್ಕು ಪ್ರತಿಮೆಗಳು. ಆ ಪ್ರತಿಮೆಗಳ ಆಕಾರ, ರೂಪಗಳನ್ನೇ ಹೋಲುವ ಇವನನ್ನು ನೋಡಿ ಆ ವೇಳೆಗೆ ಅಲ್ಲಿಗೆ ಬಂದ ದೇವಕುಲಿಕನಿಗೆ ಆಶ್ಚರ್ಯ. ಆ ಪ್ರತಿಮೆಗಳನ್ನು ಪರಿಚಯಿಸಿಕೊಡುವುದರಲ್ಲಿ ಅವನಿಗೆ ಆಸಕ್ತಿ. ಒಬ್ಬೊಬ್ಬರ ಪರಿಚಯಮಾಡಿದಾಗಲೂ ಅಪಾರ ಭಕ್ತಿ, ಕುತೂಹಲ ಭರತನಿಗೆ. ದಿಲೀಪ, ಅಜ ಎಲ್ಲರೂ ಪೂರ್ವಜರೇ, ಆದರೆ ಆಗಲೇ ಸ್ವರ್ಗಸ್ಥರು. ಉಳಿದ ಇನ್ನು ಒಂದು ಪ್ರತಿಮೆಯ ಪರಿಚಯವಾಗಬೇಕಾಗಿದೆ. ಕ್ರಮವನ್ನು ಅನುಸರಿಸಿದರೆ ಅದು ತನ್ನ ತಂದೆಯದೇ ಆಗಿರಬೇಕು. ಆದರೆ ಆ ಅಮಂಗಳ ವಾರ್ತೆ ಬೇಡವಷ್ಟೇ. ಶಂಕೆ ದುಗುಡ ತುಂಬಿದ ಹೃದಯದಿಂದ ಮತ್ತೆ ಮತ್ತೆ ಅವನನ್ನು ಕೇಳುತ್ತಾನೆ. ಅಲ್ಲಿರುವ ಪ್ರತಿಮೆಗಳೆಲ್ಲ ಅಯೋಧ್ಯೆಯ ಸ್ವರ್ಗಸ್ಥ ರಾಜರುಗಳದ್ದೇ ಎಂದು ತಿಳಿದಾಗ

ಸಂಭ್ರಾಂತನಾಗುತ್ತಾನೆ. ಪರಿಚಯಮಾಡಿಕೊಡುವುದರಲ್ಲಿ ಆಸಕ್ತನಾದ ದೇವಕುಲಿಕನಿಂದ ನಿಜ ವಿಷಯ ತಿಳಿದು ಅಪಾರ ವ್ಯಥೆಗೊಳ್ಳುತ್ತಾನೆ. ತಾನು ನಿರಪರಾಧಿಯಾದರೂ ಇದಕ್ಕೆಲ್ಲ ತಾನೇ ಸಂಪೂರ್ಣವಾಗಿ ಕಾರಣವೆಂದು ಭಾವಿಸಿಕೊಳ್ಳುತ್ತಾನೆ. ಮರಣವೂ ಇಂತಹ ಅಕೃತ್ಯಕ್ಕೆ ಸಾಕಾದಷ್ಟು ಪ್ರಾಯಶ್ಚಿತ್ತವಾಗಲಾರದೆಂದು ಕೊರಗುತ್ತಾನೆ. ಪುನಃ ಪುನಃ ಮೂರ್ಛೆಗೊಳ್ಳುತ್ತಾನೆ. ಮೃದುಹೃದಯಿಯೂ ಕೋಮಲ ಸ್ವಭಾವದವನೂ ಆದ ಭರತ ಇಂತಹ ಸನ್ನಿವೇಶದಲ್ಲಿ ಭ್ರಾತೃವಾತ್ಸಲ್ಯ, ಪಿತೃಭಕ್ತಿಯಿಂದ ತುಂಬಿ ತನ್ನ ತಾಯಿಯೇ ಈ ಅನರ್ಥ ಪರಂಪರೆಗೆ ಕಾರಣವೆಂದು ತಿಳಿದು ಅವಳನ್ನು ನಿಂದಿಸುತ್ತಾನೆ. ಅವಳ ಮಾತು, ಮುಖ, ಪ್ರೀತಿ—ಎಲ್ಲವೂ ಅವನಿಗೆ ಅಸಹ್ಯವೆಂದೆನಿಸುತ್ತದೆ. ಅವಳು ತಾನು ಹಾಳಾದುದಲ್ಲದೇ ಮಗನಾದ ತನ್ನನ್ನೂ ಹಾಳುಮಾಡಿದಳೆಂದು ಹಳಿಯುತ್ತಾನೆ. ಸುಮಂತ್ರನು ಅಯೋಧ್ಯೆಗೆ ಆಗಮಿಸುವಂತೆ ಪ್ರಾರ್ಥಿಸಿದರೆ "ರಾಮನಿಲ್ಲದ ಅಯೋಧ್ಯೆ ಬರಿಯ ಕಾಡು; ರಾಮನಿರುವ ಕಾಡೇ ಅಯೋಧ್ಯೆ" ಎನ್ನುತ್ತ ಅಲ್ಲಿಗೇ ಹೊರಡುತ್ತಾನೆ.

ಮುಂದೆ ಅರಣ್ಯಪ್ರವೇಶಮಾಡಿ ರಾಮಾಶ್ರಮದ ಬಳಿ ನಿಂತಾಗ ಅವನ ಕೋಪ ಶೋಕಗಳ ಆವೇಗವು ಇಳಿದುಹೋಗಿ ಅವುಗಳ ಸ್ಥಾನದಲ್ಲಿ ದೈನ್ಯ ಪಶ್ಚಾತ್ತಾಪಗಳು ಮೂಡುತ್ತವೆ. ತನ್ನ ತಾಯಿ ಮಾಡಿದ ಅಕಾರ್ಯವನ್ನು ತಾನೇ ಮಾಡಿದಂತೆ ಅವನಿಗೆ ಸಂಕಟವಾಗುತ್ತದೆ. ಆದ್ದರಿಂದ "ಇಕ್ಷ್ವಾಕುಕುಲಕ್ಕೆ ಕಳಂಕಭೂತನಾದ ಭರತನು ದರ್ಶನಾಪೇಕ್ಷಿಯಾಗಿ ಬಂದಿದ್ದಾನೆ" ಎಂದು ತಿಳಿಸು ಎಂದು ಸುಮಂತ್ರನಿಗೆ ಹೇಳುತ್ತಾನೆ. ಸುಮಂತ್ರನು ಹಾಗೆ ಹೇಳಲು ಇಚ್ಛಿಸದೆ "ಕುಮಾರ, ಭರತನು ಬಂದಿದ್ದಾನೆ" ಎಂದು ಮಾತ್ರ ತಿಳಿಸುತ್ತೇನೆ ಎನ್ನಲು, ಕೂಡದು, ಬರಿಯ ಹೆಸರನ್ನು ಹೇಳಿದರೆ ಪ್ರಾಯಶ್ಚಿತ್ತ ಮಾಡಿಕೊಂಡಂತಾಗುವುದಿಲ್ಲ; ಇನ್ನೂ ಬ್ರಹ್ಮಹತ್ಯೆಯಂತಹ ಮಹಾಪಾತಕವನ್ನು ಮಾಡಿದವನ ಹೆಸರನ್ನು ಬೇರೆಯವರು ಹೇಳಬಾರದು; ಆದುದರಿಂದ ನಾನೇ ಅರಿಕೆಮಾಡಿಕೊಳ್ಳುವೆನು ಎಂದು ಹೇಳಿ—'ಕರುಣಾಹೀನ, ಸಾಹಸಿಗ, ಕೃತಘ್ನ, ಅವರೆ ಭಕ್ತ' ಎಂದು ತನ್ನನ್ನು ಕರೆದುಕೊಳ್ಳುತ್ತಾನೆ. ಈ ಸನ್ನಿವೇಶದಲ್ಲಿ ಅವನನ್ನು ಎದುರುಗೊಳ್ಳಲು ಬಂದ ಲಕ್ಷ್ಮಣ ಸೀತೆ ಅವನನ್ನು ರಾಮನೆಂದುಕೊಳ್ಳುವರು. ಏಕೆಂದರೆ ರಾಮ, ಭರತರ ರೂಪಗಳು ಅಪೂರ್ವ ಸಾದೃಶ್ಯದಿಂದ ಕೂಡಿದ್ದವು. ಶರೀರದಿಂದ ಮಾತ್ರವಲ್ಲ ವಾಕ್ಯಗಳಿಂದಲೂ ಸಾದೃಶ್ಯವೆಂದು ಕವಿ ಇಲ್ಲಿ ಸುಂದರವಾಗಿ ಸೂಚಿಸಿದ್ದಾನೆ. ರಾಮನು ವನವಾಸಕ್ಕೆಗೊಳ್ಳುವ ಸಂದರ್ಭದಲ್ಲಿ ಭರತನು ಅಯೋಧ್ಯೆಯಲ್ಲಿ ಇದ್ದಿದ್ದರೆ ಲಕ್ಷ್ಮಣನಂತೆ ಅವನೂ ರಾಮನನ್ನು ಹಿಂಬಾಲಿಸುತ್ತಿದ್ದನೆಂಬುದನ್ನು ಸೂಚಿಸಲು ಕವಿ ಒಂದು ಸಣ್ಣ ಆದರೆ [illegible] ಸನ್ನಿವೇಶವನ್ನು ಸೃಷ್ಟಿಸಿದ್ದಾನೆ. [illegible] ರಾಮನು [illegible] ಸಲುವಾಗಿ ಕುಡಿಯಲು ನೀರು ಕೇಳುವನು. [illegible] ಧಾವಿಸಲು ಅವನನ್ನು ತಡೆದು [illegible] ಅಯೋಧ್ಯೆಗೆ ಹೋಗದೆ ಅರಣ್ಯದಲ್ಲಿ

ತನ್ನೊಡನೆಯೇ ನಿಂತುಬಿಡುವನೆಂದು ಗ್ರಹಿಸಿದ ಸೂಕ್ಷ್ಮಮತಿ ರಾಮನು ಅವನನ್ನು ಹಿಂದಕ್ಕೆ ಕಳುಹಿಸಲು ಪೀಠಿಕೆ ಹಾಕುವನು. ಭರತನು ತಾನೂ ಅವರೊಡನೆ ಕಾಡಿನಲ್ಲಿ ಇರಲು ಅನುಮತಿ ಕೇಳುವನು. ರಾಜ್ಯಾಡಳಿತಕ್ಕೆ ಸೂಕ್ತ ವ್ಯವಸ್ಥೆ ಮಾಡುವುದಾಗಿಯೂ ತಿಳಿಸುವನು. ತಂದೆಯ ವಾಗ್ದಾನಕ್ಕೆ ಲೋಪವಾಗುವುದೆಂದು ರಾಮನು ವಾದಿಸುವನು. ಕೊನೆಗೆ 'ತನ್ನ ಆಣೆ' ಯೆಂದು ರಾಮನು ಭರತನನ್ನು ಹಿಂದಕ್ಕೆ ಕಳುಹಿಸಬೇಕಾಯಿತು. ಆದ್ದರಿಂದ ವನವಾಸದ ಅವಧಿ ಮುಗಿದ ನಂತರ ರಾಮನೇ ರಾಜ್ಯ ಸ್ವೀಕರಿಸುವುದಾಗಿ ಅವನಿಂದ ಮಾತು ಪಡೆದು ಅದನ್ನು ದೃಢಪಡಿಸಿಕೊಳ್ಳಲು ಆರ್ಯೆ ಕೇಳಿದೆಯಾ ? ಆರ್ಯ ಕೇಳಿದೆಯಾ ? ತಾತ, ಸುಮಂತ್ರ ಕೇಳಿದೆಯಾ ? ಎಂದು ಸಾಕ್ಷಿಗಳೆಂಬಂತೆ ಸೀತೆ, ಲಕ್ಷ್ಮಣ, ಸುಮಂತ್ರರನ್ನು ಕೇಳಿ ಆನಂದೋತ್ಸಾಹಗಳನ್ನು ತೋರಿಸುವನು. ಬಳಿಕ ಭರತನು "ಆರ್ಯ ಮತ್ತೊಂದು ವರವನ್ನು ಪಡೆಯಲಿಚ್ಛಿಸುವೆನು." ಎನ್ನುವನು. ಅವನ ಸೌಜನ್ಯ ಭಕ್ತಿಗಳಿಗೆ ವಿಸ್ಮಿತನಾದ ರಾಮನು ಮಗು, ಏನು ಕೇಳುವೆ ? ಏನು ಕೊಡಲಿ. ನಾನೇನು ಮಾಡಬಹುದು ? ಎಂದು ತೀವ್ರ ಆಕಾಂಕ್ಷೆಯನ್ನು ಪ್ರಕಟಪಡಿಸುವನು. ಭರತನು ರಾಮನ ಪಾದುಕೆಗಳನ್ನು ಬೇಡಿ ರಾಮನು ಹಿಂತಿರುಗುವವರೆಗೂ ರಾಜ್ಯಾಧಿಕಾರವನ್ನು ಅವಕ್ಕೆ ವಹಿಸಿ ತಾನು ಅವಕ್ಕೆ ವಿಧೇಯನಾಗಿ ನಡೆದುಕೊಳ್ಳಲು ಅಪ್ಪಣೆ ಕೇಳುವನು. ಅದನ್ನು ಕೇಳಿ ಬೆರಗಾದ ರಾಮನು "ಇಷ್ಟು ದೀರ್ಘಕಾಲ ನಾನು ತಪಸ್ಸಿನಿಂದ ಆರ್ಜಿಸಿದ ಯಶಸ್ಸನ್ನು ಭರತನು ಈಗ ಕ್ಷಣಕಾಲದಲ್ಲಿ ಗಳಿಸಿಬಿಟ್ಟನು" ಎಂದು ಹೇಳಿಕೊಂಡು ಸಂತೋಷಿಸುವನು. ಇದು ರಾಮನ ಅಭಿಪ್ರಾಯ ಮಾತ್ರವಲ್ಲ, ಎಲ್ಲರ ಅಭಿಪ್ರಾಯ. ಭರತನ ಭಕ್ತಿಗೂ, ರಾಮ ಸೀತೆಯರ ವಾತ್ಸಲ್ಯಕ್ಕೂ ಎಲ್ಲರ ಮನಸ್ಸೂ ಕರಗಿ ಆನಂದಾಶ್ರು ಪ್ರವಹಿಸುವುದು.

ಭರತನ ಬಂಧುಪ್ರೇಮವನ್ನೂ ಹೃದಯಮಾರ್ದವವನ್ನೂ ತೋರಿಸುವ ಇನ್ನೊಂದು ಮುಖ್ಯ ಘಟನೆ ಆರನೆಯ ಅಂಕದಲ್ಲಿ ಚಿತ್ರಿತವಾಗಿದೆ. ಭರತನು ಅಯೋಧ್ಯೆಗೆ ಹಿಂತಿರುಗಿ ಸುಮ್ಮನಿರಲಿಲ್ಲ. ಕಾಲಕಾಲಕ್ಕೆ ಸುಮಂತ್ರನನ್ನು ಕಳುಹಿಸಿ ಜನಸ್ಥಾನದಲ್ಲಿದ್ದ ರಾಮ, ಸೀತೆ ಮತ್ತು ಲಕ್ಷ್ಮಣರ ಕುಶಲವನ್ನು ವಿಚಾರಿಸುತ್ತಲೇ ಇದ್ದ. ಕೊನೆಯ ಸಲ ಸುಮಂತ್ರ ಹೋಗಿಬಂದಾಗ ಸೀತಾಪಹರಣದ ವಾರ್ತೆ ಬಂದು ಭರತನ ದುಃಖವು ಮಿತಿಮೀರುವುದು. ಆಗ ಕೈಕೇಯಿಯನ್ನು ಉಗ್ರವಾದ ಮಾತುಗಳಿಂದ ಜರೆಯುವನು. ಕೈಕೇಯಿ ತನ್ನ ಉದ್ದೇಶಾದಿಗಳನ್ನು ಸ್ಪಷ್ಟಪಡಿಸಲು, ಭರತನು ಅವಳ ಕ್ಷಮೆ ಬೇಡುವನು. ಅಲ್ಲಿಂದ ಮುಂದೆ ಅವಳ ಅಪ್ಪಣೆ ಪಡೆದೇ ಸಕಲ ರಾಜಮಂಡಲಿಯೊಡನೆ ಅಪಾರವಾದ ಸೈನ್ಯಸಮೇತನಾಗಿ ರಾಮನ ಸಹಾಯಕ್ಕೆಂದು ಲಂಕಾಭಿಮುಖನಾಗಿ ತೆರಳುವನು. ಆದರೆ ಆ ವೇಳೆಗೆ ರಾಮನು ಜಯಗಳಿಸಿ ಋಷ್ಯಾಶ್ರಮಕ್ಕೆ ಸೀತೆ, ಲಕ್ಷ್ಮಣರೊಡನೆ ಬಂದಿರುತ್ತಾನೆ.

ಹೀಗೆ ಪ್ರತಿಮಾನಾಟಕದ ಭರತನ ಪಾತ್ರವು ಉದಾತ್ತವೂ, ಉನ್ನತವೂ ಆಗಿದೆ. ಭರತನ ಭಕ್ತಿ, ಪ್ರೇಮಾರ್ದ್ರಹೃದಯ, ಭ್ರಾತೃವಾತ್ಸಲ್ಯ ಮತ್ತು ತ್ಯಾಗಶೀಲತೆ ಎಲ್ಲರನ್ನೂ ಚಕಿತಗೊಳಿಸುವುದು.

## ಲಕ್ಷ್ಮಣ

ಅಕ್ಷೋಭ್ಯಃ ಕ್ಷೋಭಿತಃ ಕೇನ ಲಕ್ಷ್ಮಣೋ ಧೈರ್ಯಸಾಗರಃ।
ಯೇನ ರುಷ್ಟೇನ ಪಶ್ಯಾಮಿ ಶತಾಕೀರ್ಣಮಿವಾಗ್ರತಃ ॥

(I. 17)

ಲಕ್ಷ್ಮಣನ ಪಾತ್ರವಿಶ್ಲೇಷಣೆ ರಾಮನ ಮೇಲಿನ ಮಾತುಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿದೆ. ಅವನು ಧೈರ್ಯಸಾಗರ; ಆದುದರಿಂದಲೇ ಅಕ್ಷೋಭ್ಯ. ಅವನು ಕುಪಿತ ನಾದನೆಂದರೆ ತನ್ನ ರೋಷದಿಂದ ಮುಂದೆ ಒಬ್ಬನೇ ಇದ್ದರೂ ಆ ಸ್ಥಳದಲ್ಲಿ ಶತಜನ ಸಾಂದ್ರತೆಯಿರುವಂತೆ ಮಾಡುತ್ತಾನೆ. ರಾಮನು ವನವಾಸಕ್ಕಾಗಿ ತೆರಳಬೇಕೆಂಬ ವಾರ್ತೆ ಕೇಳಿದ ಕೂಡಲೇ ರೋಷದಿಂದ ಸಿಡಿದೆದ್ದು "ಬಿಲ್ಲು ಹಿಡಿದು ಪರಾಕ್ರಮ ಪ್ರದರ್ಶನಕ್ಕೆ ಸಿದ್ಧನಾಗು; ದಯೆ ತೋರಬೇಡ; ಮೃದುಗುಣದಿಂದ ಕೂಡಿದ ವ್ಯಕ್ತಿ ಯನ್ನೇ ಜನ ತುಳಿಯುವುದು; ನಿನಗೆ ಇದೆಲ್ಲ ಇಷ್ಟಬರದಿದ್ದರೆ, ನನ್ನನ್ನು ಬಿಡು. ಭೂಲೋಕದಲ್ಲೇ ಯುವತಿಯರ ಹೆಸರಿಲ್ಲದಂತೆ ಮಾಡಿಬಿಡುತ್ತೇನೆ" ಎಂದು ರಾಮನ ಬಳಿಗೆ ಬರುತ್ತಾನೆ. ರಾಮನು ಶಾಂತಮನಸ್ಕನಾಗಿ, "ಸೌಮಿತ್ರಿ ಇದೆಲ್ಲ ಏಕೆ," ಎನ್ನಲು, ಮತ್ತೆ ಕೋಪದಿಂದ "ಜ್ಯೇಷ್ಠಪುತ್ರನಾದ ನಿನಗೆ ಕ್ರಮಪ್ರಾಪ್ತವಾದ ರಾಜ್ಯ ತಪ್ಪಿ ತಂದೆ ನೆಲದ ಮೇಲೆ ಮೂರ್ಛೆಬಿದ್ದು ಪರಿತಪಿಸುತ್ತಿದ್ದರೂ, ಇನ್ನೂ ಏನು, ಏಕೆ?' ಎಂಬ ಪ್ರಶ್ನೆಯೇ ? ಇದೇನು ನಿನ್ನ ತಾಳ್ಮೆಯೋ ಹೃದಯಶೂನ್ಯತೆಯೋ " ಎಂದು ಛೀಕಾರ ಹಾಕುವನು. ರಾಮನು ಧನುಸ್ಸನ್ನು ತೋರಿಸಿ "ನಿನಗೆ ನಾನು ಹೇಗೋ ಭರತನೂ ಹಾಗೆಯೇ. ಆ ಧನುಸ್ಸಿನಲ್ಲಿ ಕೌಶಲ ನಿನ್ನಲ್ಲಿದ್ದರೆ ನಾನೋ, ಭರತನೋ —ರಾಜನು ಯಾರಾದರೇನು, ನಿನಗೆ? ರಾಜನನ್ನು ಪರಿಪಾಲನಮಾಡಿ ನಿನ್ನ ಕೌಶಲ ತೋರು", ಎನ್ನಲು ಕೋಪ ತಾಳಲಾರದೇ ಅಣ್ಣನಿಗೆ ಎದುರು ನುಡಿಯಲೂ ಆಗದೆ ಹುಬ್ಬು ಗಂಟಿಕ್ಕಿಕೊಂಡೇ ಮೂರು ಲೋಕವನ್ನೂ ದಹಿಸಿಬಿಡುವನೋ ಎಂಬಂತೆ ಹೊರಗೆ ಹೊರಡಲನುವಾಗುವನು. ಆಗ ರಾಮನು ಅವನನ್ನು ಸಮಾಧಾನ ಗೊಳಿಸಿ ತನ್ನ ಪರಿಸ್ಥಿತಿಯ ಅರಿವನ್ನು ತಿಳಿಸಲು ಅವನ ಕೋಪ ಕ್ಷಣದಲ್ಲಿ ಮಾಯ ವಾಗುವುದು. ಹೀಗೆ ಕೋಪಗೊಳ್ಳುವುದೂ ಅಣ್ಣನಿಗೆ ಅನ್ಯಾಯವಾಗಿ ವನವಾಸ ಪ್ರಾಪ್ತವಾಯಿತೆಂದೇ; ರಾಜ್ಯದ ಲೋಭಕ್ಕಲ್ಲ. ಕೋಪ ಬರುವುದೂ ಬೇಗ ಅದು ಮಾಯವಾಗುವುದೂ ಬೇಗ—ಇದು ಅವನ ಲಕ್ಷಣ.

ಸೀತೆಯನ್ನು ವನವಾಸಕ್ಕೆ ಬರಬಾರದೆಂದು ಹೇಳುವ ಜವಾಬ್ದಾರಿಯನ್ನು ರಾಮನು ಲಕ್ಷ್ಮಣನಿಗೆ ಒಪ್ಪಿಸಲು ಅವನು "ಪ್ರಜತು, ಚರತು ಧರ್ಮಂ, ಭರ್ತೃನಾಥಾ ಹಿ

ನಾರ್ಯಃ"—ಎಂಬ ಉದಾತ್ತ ಧರ್ಮವನ್ನೇ ಎತ್ತಿಹಿಡಿಯುತ್ತಾನೆ. ಅಷ್ಟೇ ಅಲ್ಲ, ತಾನೂ ರಾಮನ ಜೊತೆಯಲ್ಲಿ ವನಕ್ಕೆ ತೆರಳಲು ಸೀತೆಯೊಡನೆ ರಾಮನ ಪಾದ-ಶುಶ್ರೂಷೆಮಾಡಲೂ ಬೇಡುತ್ತಾನೆ. ಅಪ್ಪಣೆ ದೊರೆತಾಗ ಧನ್ಯನೆಂದು ಸಂತೋಷಪಡುತ್ತಾನೆ. ಅಲ್ಲಿಂದ ಅವನ ಚಿತ್ತವೆಂದಿಗೂ ಕ್ಷೋಭೆಗೊಳ್ಳುವುದಿಲ್ಲ. ವಾಲ್ಮೀಕಿ ರಾಮಾಯಣದಲ್ಲಿ ಲಕ್ಷ್ಮಣನು ಸುಮಂತ್ರನೊಡನೆ ಕಳಿಸುವ ಸಂದೇಶದಲ್ಲಿ ಸ್ವಲ್ಪ ಕಟೂಕ್ತಿ ಸಹ ಇದೆ. ಆದರೆ ಪ್ರತಿಮಾನಾಟಕದಲ್ಲಿ ಅಂತಹ ಮಾತೇ ಇಲ್ಲ. ಮೌನವೇ ಸಂದೇಶ. ಜೊತೆಗೆ ಭರತನು ಪಂಚವಟಿಗೆ ಹೋದಾಗ ಮೊದಲು ಕಂಡ ಲಕ್ಷ್ಮಣ ಭರತನ ಉದ್ದೇಶವನ್ನೇ ಅಪಾರ್ಥಮಾಡಿಕೊಂಡು ರಾಮನ ಬಳಿ ಕೋಪದ ಮಾತುಗಳನ್ನಾಡುತ್ತಾನೆ. ಪ್ರತಿಮಾನಾಟಕದ ಲಕ್ಷ್ಮಣನ ಭ್ರಾತೃವಾತ್ಸಲ್ಯ ತುಂಬಿದ ಹೃದಯದಲ್ಲಿ ಇಂತಹ ಅಪಾರ್ಥಕ್ಕಾಗಲೀ ಬಿರುನುಡಿಗಾಗಲೀ ಅವಕಾಶವೇ ಇಲ್ಲ. ಅವನ ಶಾಂತಿಯು ಇಲ್ಲಿ ಅಂದಗೆಡದಂತೆ ಕವಿ ಎಚ್ಚರಿಕೆ ವಹಿಸಿದ್ದಾನೆ.

### ದಶರಥ

"ಸಾಹಿತ್ಯದಲ್ಲಿ ಪತ್ನೀವಿರಹತಪ್ತಹೃದಯದಿಂದ ಮರಣವನ್ನಪ್ಪಿದ ಅಜನಂತಹವರು ಅನೇಕರಿರಬಹುದು ; ಆದರೆ ಪುತ್ರವಿರಹದಿಂದ ಮರಣವನ್ನಪ್ಪಿದ ದಶರಥನಂತಹವರು ವಿರಳ"– ಎನ್ನುವ ಮಾತು ಪ್ರತಿಮಾನಾಟಕದ ದಶರಥನಿಗೆ ಸರ್ವಥಾ ಅನ್ವಯಿಸುತ್ತದೆ. ದಶರಥನು ಕೋಸಲದ ಮಹಾರಾಜ. ಎಷ್ಟು ರಾಜ್ಯ, ವೈಭವ ಪರಾಕ್ರಮಗಳಿದ್ದರೂ, ಸುಖ-ದುಃಖಗಳ ದ್ವಂದ್ವ ಯಾರನ್ನೂ ಬಿಡದು. ಇದು ವಿಧಿಯ ವಿಲಾಸ. ಹದಿನಾಲ್ಕು ವರ್ಷಕಾಲ ವನವಾಸಕ್ಕೆಂದು ತೆರಳಲಿರುವ ತನ್ನ ಮುದ್ದು ಮಕ್ಕಳನ್ನು ಕೊನೆಯ ಸಲ ನೋಡಬೇಕೆಂದರೂ ಮುಖ ಸಿಕ್ಕದೆ ವಯೋಗಲಿತನಾದ ದಶರಥನು ಶೋಕಪರವಶನಾಗುವನು. ಮೂರ್ಛೆ ಬೀಳುವನು. ಎದ್ದು ರಾಮ, ಲಕ್ಷ್ಮಣ, ಸೀತೆಯರನ್ನು ನೆನೆನೆನೆದು ರೋದಿಸುವನು.

ಪ್ರತಿಮಾನಾಟಕದ ಎರಡನೆಯ ಅಂಕವೆಲ್ಲವೂ ದಶರಥನ ಶೋಕದ ಚಿತ್ರಣವೇ. ಅವನ ಮನಸ್ಸಿನ ತುಂಬ ರಾಮ, ಲಕ್ಷ್ಮಣ, ಸೀತೆಯರೇ. ನುಡಿ ನುಡಿಯಲ್ಲಿ ಅವರ ನೆನಪೇ. ಒಂದು ಸಲ ಅವರ ನಿಸ್ವಾರ್ಥ ಬುದ್ಧಿಯನ್ನೂ ತ್ಯಾಗವನ್ನೂ ನೆನೆದು ನುಡಿಯುವನು ; ಇನ್ನೊಂದು ಸಲ ವೃದ್ಧನೂ ಪಿತನೂ ಆದ ತನ್ನನ್ನು ದೂರೀಕರಿಸಿ ಅವರು ಹೊರಟುಹೋದದ್ದನ್ನು ಜರಿಯುವನು. ಮತ್ತೆ ರಾಮನ ಗುಣಗಳನ್ನು ನೆನೆಯುವನು ; ಇನ್ನೊಮ್ಮೆ ಅಂತಹ ಪುತ್ರ, ತನ್ನಂತಹ ದೌರ್ಭಾಗ್ಯಶಾಲಿಯ ಹೊಟ್ಟೆಯಲ್ಲಿ ಜನಿಸಲೇಬಾರದಾಗಿತ್ತೆಂದು ಚಿಂತಿಸುವನು. ತನಗೆ ಮಕ್ಕಳಾಗದೆ ಇದ್ದಿದ್ದರೇ ಒಳ್ಳೆಯದಾಗಿತ್ತೆಂದು ಆಶಿಸುವನು. ಪದೇ ಪದೇ ಕೈಕೇಯಿಯ ಕಾರ್ಯವನ್ನು ನೆನೆದು ಅವಳನ್ನು "ಹೆಣ್ಣು ಹುಲಿಯಾಗಿ ಹುಟ್ಟಿ ವನದಲ್ಲಿರಬೇಕಾಗಿದ್ದವಳು" ಎಂದು

ಸಿಡಿದೇಳುವನು, ಏಳುವುದಕ್ಕೆ ಆಗದೆ ಬೀಳುವನು. ಸುಮಂತ್ರನು ಹಿಂತಿರುಗಿ ಬಂದನೆಂದರೆ "ರಾಮನೊಡನೆಯೇ ?" ಎಂದು ಪ್ರಶ್ನಿಸಿ ಹಂಬಲಿಸುವನು. "ಇಲ್ಲ ರಥದೊಡನೆ" ಎಂದರೆ ಆ ಶೂನ್ಯರಥ ಯಮ ತನ್ನನ್ನೊಯ್ಯಲು ಕಳಿಸಿದ ರಥವೆನ್ನುವನು. ಮೂರ್ಛೆಬೀಳುವನು. ಜ್ಞಾನ ತಳೆದ ಕೂಡಲೆ ಮತ್ತೆ ಸೀತಾ ರಾಮ ಲಕ್ಷ್ಮಣರ ಮಾತನ್ನೇ ಆಡುವನು. ವನದಲ್ಲಿ ಬೀಸುವ ಮಂದಮಾರುತ ಸೀತಾ ರಾಮ ಲಕ್ಷ್ಮಣರ ಸ್ಪರ್ಶ ಮಾಡುವ ಭಾಗ್ಯ ಪಡೆಯಿತು ; ತನಗೆ ಆ ಆನಂದವಿಲ್ಲ ಎಂದು ಕೊರಗುವನು. ಅವರ ಹೆಸರನ್ನು ಮತ್ತೆ ಮತ್ತೆ ಕೇಳುವ ಹಂಬಲ : 'ಅವರು ಸಂದೇಶವನ್ನೇನಾದರೂ ಕಳಿಸಿದ್ದಾರೆಯೇ' ಎಂದು ಪ್ರಶ್ನಿಸುವನು. ಸುಮಂತ್ರನು ಆಗ "ಎಲ್ಲರೂ" ಎಂದು ಪ್ರಾರಂಭಿಸಿದರೆ— "ಬೇಡ, ಬೇಡ, ಅವರ ಹೆಸರುಗಳನ್ನೇ ಸ್ಪಷ್ಟವಾಗಿ ಹೇಳು" ಎನ್ನುವನು. ಒಂದೊಂದು ಹೆಸರನ್ನು ಹೇಳಿದಾಗಲೂ ಅದನ್ನು ಚಪ್ಪರಿಸಿ ಮತ್ತೆ ತಾನೂ ನುಡಿಯುವನು. 'ರಾಮ, ಲಕ್ಷ್ಮಣ, ಸೀತೆ ಎಂದು ಒಂದೊಂದನ್ನೂ ಹೇಳಿದರೆ ಅದು ಸರಿಯಾದ ಕ್ರಮವಲ್ಲವೆಂದು ತಾನೇ ಮತ್ತೆ ರಾಮ, ಜಾನಕಿ, ಲಕ್ಷ್ಮಣ'—ಎಂಬ ಕ್ರಮವನ್ನು ಹೇಳುವನು. ಒಟ್ಟಿನಲ್ಲಿ ಆ ಹೆಸರುಗಳನ್ನು ಯಾರು ಎಷ್ಟು ಸಲ ಹೇಳಿದರೂ ಅವನಿಗೆ ತೃಪ್ತಿಯಿಲ್ಲ; ಪುನಃ ಪುನಃ ಕೇಳುವ ಚಪಲ. ಮತ್ತೆ ತಾನೇ ನಿಧಾನವಾಗಿ ಆ ಹೆಸರುಗಳನ್ನು ಜಪಿಸುವನು. "ರಾಮ, ಜಾನಕಿ, ಲಕ್ಷ್ಮಣ" ನೀವು ಒಂದು ಸಲ ನನ್ನನ್ನಪ್ಪಿ ಆನಂದ ಕೊಡಿ ಎಂದು ಕೊರಗುವನು; ರಾಮನ ಸ್ಪರ್ಶಕ್ಕಾಗಿ ತಳಮಳಿಸುವನು. "ರಾಮ, ನಿನ್ನನ್ನು ರಾಜ್ಯದಲ್ಲಿಟ್ಟು ನಾನು ಕಾಡಿಗೆ ಹೋಗಬಯಸಿದ್ದೆ, ನೀನೇ ನನ್ನನ್ನು ಬಿಟ್ಟು ಹೋದೆಯಾ" ಎಂದು ಕೂಗುವನು. ಸುಮಂತ್ರನು ವರ್ಣಿಸಿದ ಮಕ್ಕಳ ಮೌನ ಸಂದೇಶವಂತೂ ಅವನ ಶೋಕವನ್ನು ಸಂಪೂರ್ಣಗೊಳಿಸಿತು. ಮೂರ್ಛೆಬಿದ್ದನು. ಮತ್ತೆ ಜ್ಞಾನ ಪಡೆದು ರಾಮನ ತಾಯಿಯ ಸ್ಪರ್ಶವನ್ನಾದರೂ ಮಾಡಿ ಶಾಂತಿಗೊಳ್ಳಬೇಕೆಂದು ಆಶಿಸುವನು. ಆ ವೇಳೆಗೆ ಕಣ್ಣು ಕತ್ತಲಿಟ್ಟಿತು. 'ರಾಮನ ಹಿಂದೆಯೇ ಬುದ್ಧಿಯೂ ತೆರಳಿತು' ಎಂದು ಕೌಸಲ್ಯೆಯನ್ನು ಕರೆಯುವನು. 'ನಿನ್ನ ಮಗನನ್ನು ಬಲಮಾಡಿಕೊ' ಎನ್ನುವನು. ಕೈಕೇಯಿಯನ್ನು 'ಪಾಪಿ ! ನಿನ್ನ ಪಾಪ ಫಲಿಸಲಿ' ಎಂದು ಕಿಡಿ ಕಿಡಿಯಾಗುವನು. ಅಂತ್ಯಕಾಲದಲ್ಲಿ ಪಿತೃಗಳ ದರ್ಶನ ಪಡೆದಂತೆ ಅವರೊಡನೆ ಸ್ವಪ್ನದಲ್ಲಿ ಮಾತನಾಡಿಕೊಂಡು ಕೊನೆಯುಸಿರು ಎಳೆಯುವವರೆಗೂ ಸೀತಾ ರಾಮ ಲಕ್ಷ್ಮಣರನ್ನೇ ಧ್ಯಾನಿಸುವನು.

ಈ ಪುತ್ರವಾತ್ಸಲ್ಯ ಅನ್ಯಾದೃಶವಾದುದು. ಈ ಶೋಕ ಅನುಪಮವಾದುದು. ಶಕ್ರಸಮವಾಗಿ ಏಕಶರೀರಸಂಕ್ಷಿಪ್ತಪೃಥ್ವಿಯಾಗಿದ್ದ ದಶರಥನ ಹೃದಯ ಬೆಂದು, ಬುದ್ಧಿ ಕುಂದಿ, ದೇಹವು ಕುಗ್ಗಿ, ಬುದ್ಧಿ ಭ್ರಮಣೆಗೊಂಡವನಂತೆ "ಶಿಥಿಲದೇಹಮತಿ" ಯಾಗಿ ನೆಲದ ಮೇಲೆ ಬಿದ್ದು ಮರಣವನ್ನಪ್ಪಿದ ದೃಶ್ಯ ಎಂತಹವರ ಕಣ್ಣನ್ನೂ ತೇವಗೊಳಿಸದೇ ಇರದು.

## ಸುಮಂತ್ರ

ಸುಮಂತ್ರನು ದಶರಥನ ರಥವಾಹಕನಷ್ಟೇ ಅಲ್ಲದೆ ಮಂತ್ರಿಯೂ ಆಗಿದ್ದನು, ಅರಮನೆಯ ಒಳ ಆಡಳಿತ ವಿಷಯಗಳೆಲ್ಲ ಅವನಿಗೆ ಸುಪರಿಚಿತ. ರಾಮ ಮತ್ತು ಅವನ ಸಹೋದರರು ಸುಮಂತ್ರನ ಹಿರಿಯ ವಯಸ್ಸು, ಆಳವಾದ ಲೋಕಾನುಭವ, ಪರಿಣತ ಜ್ಞಾನ ಮತ್ತು ಉನ್ನತ ಅಂತಸ್ತುಗಳನ್ನು ಮನಗಂಡು ಅವನನ್ನು ಗೌರವಿಸುತ್ತಿದ್ದರು.

ಪ್ರತಿಮಾನಾಟಕದಲ್ಲಿ ಸುಮಂತ್ರನು ನಿರ್ವಹಿಸಬೇಕಾಗಿ ಬಂದ ಜವಾಬ್ದಾರಿ ಕ್ಲಿಷ್ಟವಾದುದು. ವನಕ್ಕೆ ತೆರಳಲನುವಾದ ಸೀತಾ ರಾಮ ಲಕ್ಷ್ಮಣರ ರಥವಾಹಕನಾಗಿ ಅವರನ್ನು ಅರಣ್ಯದಲ್ಲಿ ಬಿಟ್ಟು ಹಿಂತಿರುಗಬೇಕಾಯಿತು. ಅವನ ಮನಸ್ಸಿನಲ್ಲಿ ಎಂತಹ ನಿಗೂಢ ಸಂತಾಪವಿತ್ತೋ ಅದನ್ನು ಕವಿ ನಮ್ಮ ಊಹೆಗೆ ಬಿಟ್ಟಿದ್ದಾನೆ. ಆದರೆ ಸುಮಂತ್ರನು ಹಿಂತಿರುಗಿ ಬಂದು ದಶರಥನೊಂದಿಗೆ ನಡೆಸಿದ ಸಂಭಾಷಣೆಯಿಂದ ಕವಿ ಅವನ ವಿವೇಕ ಮತ್ತು ಅನುಭವಗಳನ್ನು ನಮಗೆ ಪರಿಚಯಿಸಿಕೊಟ್ಟಿದ್ದಾನೆ. ಶೋಕ ಜ್ವಾಲೆಯಲ್ಲಿ ದಹಿಸಿಹೋಗುತ್ತಿರುವ ದಶರಥನು "ನನ್ನ ಜ್ಯೇಷ್ಠಪುತ್ರ ರಾಮನೆಲ್ಲಿ ?" ಎಂದು ಕೇಳಿದ ಕೂಡಲೆ, ರಾಮನನ್ನು ತನ್ನ ಪುತ್ರನೆಂದು ಹೇಳಿಕೊಳ್ಳುವುದು ತನಗೆ ಉಚಿತವಲ್ಲವೆಂದು ಭಾವಿಸಿ, ಪ್ರಿಯಸುತ, ನಿನ್ನ ಪುತ್ರ ರಾಮನೆಲ್ಲಿ ? ಎಂದು ಮಾತು ಬದಲಾಯಿಸುವನು. "ಅವರು ಏನಾದರೂ ಹೇಳಿದರೆ ?" ಎನ್ನುವನು. ಸುಮಂತ್ರನು ಮಹಾರಾಜನ ಆಗಿನ ಸ್ಥಿತಿಯನ್ನು ಗಮನಿಸಿ ರಾಜನಿಗೆ ಪ್ರಿಯವಾದ ಮಾತುಗಳನ್ನೇ ಹೇಳುವನು. ದಶರಥನು ಮತ್ತೆ ಮತ್ತೆ ಅವರ ಹೆಸರುಗಳನ್ನೇ ಹೇಳುವಂತೆ ಬಲಾತ್ಕರಿಸುವನು. ಕೊಂಚವೂ ಬೇಸರಗೊಳ್ಳದೆ ಮಹಾರಾಜನಿಗೆ ಹಿತವಾದ ಆ ಹೆಸರುಗಳನ್ನು ಅವನಿಗೆ ಪ್ರಿಯವಾಗುವಂತೆ ಮಹಾರಾಜನಿಗೆ ಇಷ್ಟವಾದ ಕ್ರಮದಂತೆಯೆ ಪುನಃ ಪುನಃ ತಿಳಿಸುವನು. ಸುಮಂತ್ರನು ಕೊಡುವ ಸೀತಾ ರಾಮ ಲಕ್ಷ್ಮಣರ ಮೌನ ಸಂದೇಶದ ವಿವರಣೆ ಅವನ ಸಂಯಮದ ದ್ಯೋತಕವಾಗಿದೆ.

ಪ್ರತಿಮಾಗೃಹದ ದರ್ಶನಕ್ಕೆ ಮಹಾರಾಣಿಯರನ್ನು ಕರೆದುಕೊಂಡು ಬರುವ ಕರ್ತವ್ಯವೂ ಸುಮಂತ್ರನ ಪಾಲಿನದೇ. ತಂದೆಯ ಮರಣ ಮತ್ತು ಸೀತಾ ರಾಮರ ವನಗಮನ ವಾರ್ತೆಯನ್ನು ತಿಳಿದ ಭರತನು ಕೈಕೇಯಿಯನ್ನು ಪಟಪಟನೆ ಕೆನ್ನೆಯ ಮೇಲೆ ಹೊಡೆದಂತೆ ಬಯ್ಯುತ್ತಿರಲು ಸುಮಂತ್ರನು ಮುಂದೆ ಬಂದು "ಕುಮಾರ, ವಸಿಷ್ಠ ವಾಮದೇವಾದಿ ಋಷಿಗಳು ಅಭಿಷೇಕ ಸಾಮಗ್ರಿಗಳನ್ನು ಸಿದ್ಧಮಾಡಿಕೊಂಡು ನಿನಗಾಗಿ ಕಾದಿದ್ದಾರೆ, ರಾಜತ್ವವನ್ನು ಪಡೆ" ಎಂದು ಹೇಳಿ ಭರತನ ಮನಸ್ಸನ್ನು ಕೈಕೇಯಿಯಿಂದ ತಿರುಗಿಸಲು ಯತ್ನಿಸುವನು. ಆದದ್ದು ಆಗಿಹೋಯಿತು; ರಾಜ್ಯದ ಹಿತವನ್ನೂ ಉಪೇಕ್ಷಿಸಬಾರದಷ್ಟೆ, ಆದುದರಿಂದ ಭರತನನ್ನು ಒಲಿಸಿ ಅವನಿಗೆ ಪಟ್ಟಾಭಿಷೇಕ ಮಾಡ ಬೇಕೆಂದು ವನಕ್ಕೆ ಹೊರಟ ಅವನನ್ನು ಮತ್ತೆ ಸುಮಂತ್ರನೇ ತಡೆದು ಪ್ರಾರ್ಥಿಸುತ್ತಾನೆ.

ಸುಮಂತ್ರನು ಬಹು ಕಷ್ಟಸ್ಥಿತಿಯಲ್ಲಿ ಸಿಕ್ಕುವನು. ಒಂದು ಕಡೆ ಪ್ರಿಯಸಖಿಸೂ ಮಹಾರಾಜನೂ ಆದ ದಶರಥನನ್ನು ಕಳೆದುಕೊಂಡ. ಇನ್ನೊಂದು ಕಡೆ ಸೀತಾ ರಾಮ ಲಕ್ಷ್ಮಣರ ವನವಾಸವನ್ನು ಕಂಡ. ಈಗ ಭರತನ ಮನೋಭಾವವನ್ನು ಕಂಡ. ಮುಪ್ಪಿನಿಂದ ಬಳಲಿದ್ದುದಕ್ಕಿಂತ ಈ ಶೋಕದ ಸನ್ನಿವೇಶಗಳು ಅವನನ್ನು ಕುಗ್ಗಿಸುವುವು.

ಕೊನೆಯದಾಗಿ ಭರತನನ್ನು ವನಕ್ಕೆ ಸೀತಾ ರಾಮ ದರ್ಶನಕ್ಕಾಗಿ ಒಯ್ಯುವ ಜವಾಬ್ದಾರಿಯೂ ಸುಮಂತ್ರನಿಗೇ ಬರುವುದು. ಅರಣ್ಯ ಪ್ರವೇಶ ಮಾಡಿದಾಗ ಭರತನು ಸುಮಂತ್ರನನ್ನು ಕುರಿತು "ರಾಜ್ಯಲುಬ್ಧೆಯಾದ ಕೈಕೇಯಿಯ ಪುತ್ರ ಭರತ ಬಂದಿದ್ದಾನೆಂದು ಘೋಷಿಸು" ಎನ್ನುವನು. ಆಗ ಸುಮಂತ್ರನು ಕೈಕೇಯಿಯ ಮೇಲೆ ಆ ಅಪವಾದವನ್ನು ಸೂಚಿಸುವುದು ಅನುಚಿತವೆಂದು ತಿಳಿದು ಭರತನಿಗೆ ಹಾಗೆನ್ನಬಾರದೆಂದು ಸಮಾಧಾನ ಹೇಳುವನು. ಆಗ ಭರತ "ನಿಜ, ಪರದೋಷವನ್ನು ನುಡಿಯಬಾರದೆಂದು ಹೇಳಿ ಇಕ್ಷ್ವಾಕುಕುಲಕ್ಕೇ ಕಳಂಕಪ್ರಾಯನಾದ ಭರತ ಬಂದಿರುವನೆಂದು ಘೋಷಿಸು" ಎನ್ನುವನು. ಇಂತಹ ಕಠಿಣ ಸನ್ನಿವೇಶಗಳು ಸುಮಂತ್ರನ ಹೃದಯದಲ್ಲಿ ಎಂತಹ ಸಂತಾಪವನ್ನು ತಂದುವೆಂಬುದನ್ನು ಊಹಿಸುವುದೂ ಸಂಭವವಲ್ಲ. ರಾಜವಂಶದ ಸುಖದುಃಖಗಳಲ್ಲಿ ಕರ್ತವ್ಯವೆಂದೆನಿಸಿ ಭಾಗಿಗಳಾಗುವ ಇಷ್ಟು ನಿಷ್ಠಾವಂತ ವ್ಯಕ್ತಿಗಳು ದುರ್ಲಭ.

### ಸೀತೆ

ವಾಲ್ಮೀಕಿ ರಾಮಾಯಣದಲ್ಲಿನ ಸೀತೆಯ ಪಾತ್ರ ಮಹತ್ವಪೂರ್ಣವಾದುದು, ಅವಳು ಶುದ್ಧಚಾರಿತ್ರ್ಯಳು, ಪಾವನಸ್ವರೂಪಳು, ಪತಿವ್ರತಾಶಿರೋಮಣಿ, ಸ್ತ್ರೀಕುಲಕ್ಕೇ ಆದರ್ಶಳು.

ಪ್ರತಿಮಾನಾಟಕದ ಸೀತೆಯೂ ಉದಾತ್ತಚರಿತಳು. ಮೊದಲನೆಯ ಅಂಕದ ಪ್ರಾರಂಭದಲ್ಲೇ ರಾಮಪಟ್ಟಾಭಿಷೇಕದ ಸುದ್ದಿ ಬರುವುದು. ಆದರೆ ಸೀತೆ ಅದರ ಸೌಭಾಗ್ಯದಲ್ಲಿ ಕಾತುರವುಳ್ಳವಳಲ್ಲ. ರಾಮನಿಗೆ ಪಟ್ಟಾಭಿಷೇಕವಾಗಬೇಕಾದರೆ ದಶರಥನ ಯೋಗಕ್ಷೇಮವೇನೋ ಎಂಬ ಕಳವಳ. ಮಾವನವರು ಆರೋಗ್ಯವಾಗಿದ್ದಾರೆಂದು ತಿಳಿದಾಗ ತನ್ನ ಪತಿಗೆ ಪಟ್ಟಾಭಿಷೇಕವಾದುದಕ್ಕಿಂತ ಹೆಚ್ಚಿನ ಆನಂದ ಅವಳಿಗೆ. ಆ ವರ್ತಮಾನ ತಂದವಳಿಗೆ ಅವಳು ತನ್ನ ಆಭರಣಗಳನ್ನೆಲ್ಲಾ ಪಾರಿತೋಷಕವಾಗಿ ಕೊಡುವಳು. ಮಂಗಳ ಶಬ್ದ ಇದ್ದಕ್ಕಿದ್ದಂತೆ ನಿಲ್ಲಲು ಪಟ್ಟಾಭಿಷೇಕ ನಿಂತಿರಬಹುದೇ ಎಂಬ ಯೋಚನೆ ಹೊಳೆಯುವುದು. ಆದರೆ ಆಶೆಯೇ ತೀವ್ರವಾಗಿಲ್ಲದ ಅವಳಿಗೆ ನಿರಾಶೆಯೂ ದುಃಖಜನಕವಲ್ಲ. ಅವಳು 'ಏನೋ ಎಂತೋ—ಇಂತಹ ಅರಮನೆಗಳಲ್ಲಿ ಎಷ್ಟೋ ಸಂಗತಿಗಳು ನಡೆಯುವುವು' ಎಂದು ಸುಮ್ಮನಾಗಿಬಿಡುವಳು. ದಶರಥ ಮಹಾರಾಜರು ವಾನಪ್ರಸ್ಥಾಶ್ರಮಕ್ಕೆ ತೆರಳುತ್ತಾರೆ. ಅಂದರೆ—ಅವಳಿಗೆ ಪಟ್ಟಾಭಿಷೇಕದ ಸಂತೋಷವೇ ಇಲ್ಲ. "ಹಾಗಿದ್ದರೆ ಇದು ರಾಜ್ಯಾಭಿಷೇಕವಲ್ಲ; ಕಣ್ಣೀರೆರೆಯುವುದು"

ಎನ್ನುವಳು. ಹೀಗೆ ರಾಮನಂತೆಯೇ ಸೀತೆಗೂ ರಾಜ್ಯ–ಸುಖ–ಸಂಪತ್ತುಗಳಲ್ಲಿ ಸಂಗರಾಹಿತ್ಯ. ರಾಮನೇ ಬಂದು ಪಟ್ಟಾಭಿಷೇಕ ನಿಂತ ವಿಚಾರವನ್ನು ಸಮಾಧಾನಚಿತ್ತ ದಿಂದ ತಿಳಿಸಲು ಸೀತೆಗೆ ಇನ್ನೂ ಸಂತೋಷವೇ. "ಮಹಾರಾಜನು ಮಹಾರಾಜನೇ, ಆರ್ಯಪುತ್ರನು ಆರ್ಯಪುತ್ರನೇ ಅದೇ ಚೆನ್ನ" ಎನ್ನುವಳು. ತನ್ನ ಮಾವ ಮುದುಕನಾಗಿ ಅಥವಾ ಮೃತನಾಗಿ ತನ್ನ ಪತಿಗೆ ರಾಜ್ಯ ಸಿಕ್ಕಿಬಿಟ್ಟರೆ ಸಾಕು ಎಂಬ ಮನೋಭಾವವೇ ಇಲ್ಲ ಅವಳಿಗೆ. ಅವಳ ಮನಸ್ಸೆಲ್ಲಾ ಹಿರಿಯರ ಮತ್ತು ಪತಿಯರ ಶ್ರೇಯಸ್ಸು ಸುಖ ಗಳಲ್ಲಿಯೇ ಇದೆ. ತಾನು ಮಹಾರಾಣಿಯಾಗಿ ಶೋಭಿಸುತ್ತಿರಬೇಕೆಂಬ ಆತುರವಿಲ್ಲ; ಆಸೆಯೂ ಇಲ್ಲ. "ತಂದೆಯ ಕಣ್ಣಮುಂದಿನ ಮಕ್ಕಳಂತೆ ಅವರ ಆಶೀರ್ವಾದದ ನೆರಳಿನಲ್ಲಿರುವುದೇ ಪರಮ ಶ್ರೇಯಸ್ಸೆಂದು ಅವಳು ಸ್ಥಿರವಾಗಿ ನಂಬಿಕೊಂಡಿದ್ದಂತೆ ತೋರುತ್ತದೆ. ಮಹಾರಾಣಿಯ ಪದವಿ ವೈಭವಗಳಿಗಿಂತ ಶುದ್ಧವಾದ ಪತಿಪ್ರೇಮಪೂರಿತ ಕರ್ಮಯೋಗವೇ ಹೆಚ್ಚು ಸುಖದಾಯಕವೆಂದು ಜಾನಕಿಯು ಅನುಭವಕ್ಕೆ ತಂದು ಕೊಂಡಿದ್ದಂತೆ ಬೋಧೆಯಾಗುತ್ತದೆ. ಸೀತಾರಾಮರ ಹೃದಯಗಳು ಬಿಂಬ–ಪ್ರತಿಬಿಂಬ ಗಳಿದ್ದಂತೆ. ರಾಮನು ಯಾವ ವಿಚಾರಗಳಲ್ಲಿ ಏನು ಅಭಿಪ್ರಾಯಗಳನ್ನು ಇಟ್ಟು ಕೊಂಡಿರಬಹುದು, ಯಾವ ಅಭಿರುಚಿಯನ್ನು ಪಡೆದಿರಬಹುದು ಎಂದೆಲ್ಲವೂ ಸೀತೆಯ ಹೃದಯದಲ್ಲಿ ಪ್ರತಿಫಲಿತವಾಗುತ್ತಿದ್ದುದೆಂದು ತೋರುತ್ತದೆ. ಅಭಿಷೇಕಕ್ಕೆ ದಶರಥ ಮಹಾರಾಜನು ಕರೆದಾಗ ರಾಮನ ಮನಸ್ಸಿನಲ್ಲೇನಾಯಿತೆಂಬುದನ್ನೂ ಅವನ ಪ್ರತಿ ಕ್ರಿಯೆ ಏನಾಗಿದ್ದಿರಬಹುದೆಂಬುದನ್ನೂ ಸೀತೆ ಊಹಿಸಿಯೇ ಹೇಳಬಲ್ಲಳು. ಇಂತಹವರು ಒಬ್ಬರನ್ನು ಒಬ್ಬರು ಅಗಲುವುದು ಅಸಾಧ್ಯ.

ಪ್ರತಿಮಾನಾಟಕದ ಸಂವಿಧಾನದಲ್ಲಿ ಸೀತೆ ಲಕ್ಷ್ಮಣನಿಗೆ ಬಿರುನುಡಿಗಳಾಡುವ ಪ್ರಸಂಗವೇ ಬರುವುದಿಲ್ಲ. ರಾಮನು ಕಾಂಚನಪಾರ್ಶ್ವಮೃಗದ ಬೆನ್ನಟ್ಟಿಹೋದಾಗ ಲಕ್ಷ್ಮಣ ಆಶ್ರಮದಲ್ಲಿರುವುದಿಲ್ಲ. ರಾಮನ ಆಜ್ಞೆಯಂತೆ ಅವನು ಬೇರೆ ಸ್ಥಳಕ್ಕೆ ಕಾರ್ಯದ ಮೇಲೆ ಹೋಗಿರುತ್ತಾನೆ. ಅಷ್ಟೇ ಅಲ್ಲ, ವನವಾಸದಲ್ಲಿ ರಾಮನನ್ನು ಹಿಂಬಾಲಿಸಲು ಸೀತೆಯನ್ನು ಲಕ್ಷ್ಮಣನೂ, ಲಕ್ಷ್ಮಣನನ್ನು ಸೀತೆಯೂ ಶಿಫಾರಸು ಮಾಡಿ ರಾಮನನ್ನು ಒಪ್ಪಿಸುತ್ತಾರೆ. ಭರತ–ಲಕ್ಷ್ಮಣರಲ್ಲಿ ಸೀತೆ ಮಾತೆಯಂತೆ ವಾತ್ಸಲ್ಯದಿಂದ ವರ್ತಿಸುತ್ತಾಳೆ. ಭರತನು ಪಾದುಕೆಗಳನ್ನು ಬೇಡಲು ಬಂದಾಗ ಮಾತೆಯಂತೆ ಸೀತೆ ಅವನನ್ನು ಎದಿರುಗೊಂಡು ಆದರಿಸುತ್ತಾಳೆ. ಭರತನು ಹೊರಡುವ ವಾರ್ತೆ ಕೇಳಿ "ಭರತನೀಗಲೇ ಹೊರಡಬೇಕೇ?" ಎಂದು ವಾತ್ಸಲ್ಯದಿಂದ ಕೇಳುತ್ತಾಳೆ. ರಾಮನು ರಾಜ್ಯಭಾರದ ಉಪೇಕ್ಷೆ ಕ್ಷಣಕಾಲವೂ ಸಲ್ಲದೆಂದು ಹೇಳಲು ಕಷ್ಟದಿಂದ ಅವನನ್ನು ಬೀಳ್ಕೊಡುತ್ತಾಳೆ.

ಚಕ್ರವರ್ತಿಯ ಮುದ್ದು ಮಗಳಾಗಿ ಬೆಳೆದು ಲೋಕೈಕವೀರನನ್ನೂ ಪುರುಷ ಶ್ರೇಷ್ಠನನ್ನೂ ವಿವಾಹವಾಗಿ ಚಕ್ರವರ್ತಿಯ ಮನೆಯನ್ನು ಸೇರಿದವಳಿಗೆ ವನವಾಸ ಒದಗಿತು. ಅವಳು ಅದಕ್ಕೆ ಒಗ್ಗಿಹೋಗಿದ್ದಳೆಂಬುದನ್ನು ನಾಟಕದಲ್ಲಿ ಅವಳು

ಗಿಡಗಳಿಗೆ ನೀರೆರೆಯುವ ಚಿತ್ರದಿಂದ ಸುಂದರವಾಗಿ ಸೂಚಿತವಾಗಿದೆ. ಸುಖವೋ ಕಷ್ಟವೋ ಅವಳ ಪಂಚಪ್ರಾಣಗಳೂ ರಾಮನಲ್ಲಿ ನೆಲೆಸಿವೆ. ಒಟ್ಟಿನಲ್ಲಿ ಪ್ರತಿಮಾನಾಟಕದ ಸೀತೆ ಯಾವ ಕಲಂಕವೂ ಇಲ್ಲದ ಆದರ್ಶಸ್ವರೂಪಳಾದ ಸಾಧ್ವಿ.

## ಕೈಕೇಯಿ

ಕವಿಯು ಈ ನಾಟಕದಲ್ಲಿ ಮುಖ್ಯವಾಗಿ ಕೈಕೇಯಿಯ ಪಾತ್ರವನ್ನು ಉದಾತ್ತವಾಗಿ ಮಾರ್ಪಡಿಸಿದ್ದಾನೆ. ಅವಳ ಪಾತ್ರದ ಮೂಲಕ ಕವಿಯು ಸ್ತ್ರೀಜಾತಿಯಲ್ಲಿಯೇ ಅನಿರ್ವಚನೀಯವಾದ ಒಂದು ಗೌರವ ನಮ್ಮಲ್ಲಿ ಹುಟ್ಟುವಂತೆ ಮಾಡಿದ್ದಾನೆ. ಇದಕ್ಕಾಗಿ ವಸ್ತು ಸಂವಿಧಾನಗಳಲ್ಲಿ ಕೆಲವು ಮನೋಜ್ಞ ಬದಲಾವಣೆಗಳನ್ನು ಮಾಡಿದ್ದಾನೆ.

ಪ್ರತಿಮಾನಾಟಕದಲ್ಲಿಯೂ ವಾಲ್ಮೀಕಿ ರಾಮಾಯಣದಂತೆಯೇ ರಾಮನ ಪಟ್ಟಾಭಿಷೇಕ ಹಠಾತ್ತನೆ ನಿಲ್ಲಲು ಕೈಕೇಯಿಯೇ ಕಾರಣ. ರಾಮನಿಗೆ ವನವಾಸಪ್ರಾಪ್ತಿಯಾಗುವುದೂ ಅವಳ ಮಾತಿನಂತೆಯೇ. ಇದರಿಂದ ಅರಮನೆಯ ಸೇವಕ ಕಂಚುಕಿಯಿಂದ ಹಿಡಿದು, ಲಕ್ಷ್ಮಣ, ದಶರಥ, ಭರತ ಊರಿನ ಜನರು ಕಡೆಗೆ ದೇವಕುಲಿಕ ಎಲ್ಲರೂ ಅವಳನ್ನು 'ರಾಜ್ಯಲುಬ್ಧೆ, ಪಾಪಿ' ಮುಂತಾಗಿ ನಿಂದಿಸುವವರೇ. "ಕೈಕೇಯಿ, ಸ್ವಜನವೇ ಆಗಿ ಒಳಗಿಂದಲೇ ಅರಮನೆಯಲ್ಲಿನ ಅನರ್ಥಪರಂಪರೆಗೆ ಕಾರಣಳಾದಳೆಂದೂ ಸ್ತ್ರೀಬುದ್ಧಿಯೇ! ಈ ರೀತಿ ನೀಚವೆಂದೂ" ಕಂಚುಕಿ ಅಂದರೆ, ಅಲ್ಲಿಯವರೆಗೂ ಚಿಕ್ಕ ಹೆಂಡತಿಯಾದ ಅವಳ ಪ್ರೇಮದ ಬಲೆಯಲ್ಲಿ ಬಂಧಿತನಾಗಿದ್ದ ದಶರಥನು 'ಅವಳನ್ನು ದೈವವು ವನದಲ್ಲಿ ವ್ಯಾಘ್ರಿಯನ್ನಾಗಿ ಏಕೆ ಹುಟ್ಟಿಸಲಿಲ್ಲವೋ' ಎಂದು ವಿಧಿಯನ್ನೇ ಪ್ರಶ್ನಿಸುತ್ತಾನೆ. ಭರತನಂತೂ ಭಾವಪರವಶನಾಗಿ ಅವಳ ಮಾತನ್ನೆತ್ತಿದ ಕೂಡಲೇ 'ಇವಳು ಮಾತೆಯಲ್ಲ, ಗಂಡನಿಗೆ ದ್ರೋಹವೆಸಗಿದ ಮಹಾಪಾಪಿ' ಎಂದು ಹಳಿಯುತ್ತಾನೆ. 'ವತ್ಸ ನಾನೇನು ಮಾಡಿದೆ' ಎಂದು ಅವಳು ದಿಕ್ಕು ತೋಚದೆ ಒಂದು ಸಲ ಕೇಳಲು ಅವಳು ಮಾಡಿದಳೆಂದು ಹೇಳಲಾದ ಪಾಪಕೃತ್ಯಗಳನ್ನೆಲ್ಲ ಸಾಲುಗಟ್ಟಿ ಅವಳ ಮುಖಕ್ಕೆಸೆಯುವಂತೆ ಪಟಪಟನೆ ಹೇಳಿಬಿಡುತ್ತಾನೆ. ಅಷ್ಟೇ ಅಲ್ಲ"—ಸೀತೆ ನಾರುಬಟ್ಟೆ ಧರಿಸಿದಾಗಲೂ ಹೋಳಾಗದ ನಿನ್ನ ಎದೆ ವಜ್ರದಷ್ಟು ಕಠಿಣ" ಎಂದು ಬಯ್ಯುತ್ತಾನೆ. 'ಗಂಗೆ ಯಮುನೆಯರ ಮಧ್ಯೆ ಬಂದ ಕುನದಿಯಂತೆ ಕೌಸಲ್ಯೆ ಸುಮಿತ್ರೆಯರ ಮಧ್ಯೆ ನೀನು ಕುತ್ಸಿತ ನಾರಿ' ಎಂದು ಜರಿಯುತ್ತಾನೆ. ಈ ರೀತಿಯಾಗಿ ಯಾರು ಏನೇ ನಿಂದಿಸಲಿ, ಟೀಕಿಸಲಿ, ಅವಳು ಮಾತ್ರ ತನ್ನ ತಾಳ್ಮೆಯನ್ನು ಬಿಡಲಿಲ್ಲ. ತಾನು ನಿರಪರಾಧಿನಿಯೆಂಬ ಸತ್ಯವನ್ನು ವ್ಯಕ್ತಗೊಳಿಸುವ ಕಾಲಕ್ಕಾಗಿ ತಪಸ್ವಿನಿಯಂತೆ ಕಾಯುತ್ತಾ ಸಹನೆಯಿಂದ ಸುಮ್ಮನಿರುತ್ತಾಳೆ. ಇದು ಅವಳ ಪಾತ್ರದ ಸತ್ವಾಂಶ. ಪಟ್ಟಾಭಿಷೇಕ ತಪ್ಪಿಹೋಗಿ ವ್ಯಕ್ತಿಜೀವನದಲ್ಲೇ ಪ್ರಳಯವಾದಂತೆ ಕಂಡಾಗಲೂ, ಧೈರ್ಯಗೆಡದೆ ಇದ್ದ ರಾಮನು ಅಭಿನಂದನಾರ್ಹನಾಗಿರುವಂತೆಯೇ ಎಂತಹ ಅಪರಾಧಿಗೂ ಸಹನೆ ಮೀರುವಂತಹ ಸನ್ನಿವೇಶದಲ್ಲೂ ತಾಳ್ಮೆಗೆಡದೆ ಇದ್ದ ಕೈಕೇಯಿಯೂ ಅಭಿನಂದನಾರ್ಹಳೇ.

ಶ್ರೀಮದ್ರಾಮಾಯಣದಲ್ಲಿ ಕೈಕೇಯಿಯು ರಾಮನಲ್ಲಿ ಪ್ರೀತಿಯುಳ್ಳವಳಾಗಿದ್ದರೂ ಮಂಥರೆಯ ದುರ್ಬೋಧನೆಯಿಂದ ಸವತಿಮಾತ್ಸರ್ಯ ತುಂಬಿ ಪಾಪಕೃತ್ಯದಲ್ಲಿ ತೊಡಗಿದ ಅಪರಾಧಿನಿಯಂತೆ ಕಂಡುಬರುತ್ತಾಳೆ. ಪ್ರತಿಮಾನಾಟಕದಲ್ಲಿ ಭಾಸನು ಅವಳು ನಿರಪರಾಧಿನಿ ಮಾತ್ರವಲ್ಲ, ಉದಾತ್ತ ಚರಿತಳೂ ಆಗಿದ್ದಳು ಎಂದು ಸಾಧಿಸಲೆಂದೇ ಹೊಸ ಪ್ರಸಂಗಗಳನ್ನು ಕಲ್ಪಿಸಿದ್ದಾನೆ. ತತ್ಫಲವಾಗಿ ಮಂಥರೆಯ ದುರ್ಬೋಧನೆಯಾಗಲೀ ಕೈಕೇಯಿ ದಶರಥನನ್ನು ಸಂಬೋಧಿಸಿ ಆಡುವ ಬಿರುನುಡಿಗಳಾಗಲೀ, ನಿರ್ದಯಿಯಾಗಿ ಸಂಕೋಚವಿಲ್ಲದೆ ರಾಮ ಸೀತೆಯರಿಗೆ ನಾರುಮಡಿ ಕೊಟ್ಟು ಕಾಡಿಗೆ ಆಗಲೇ ತೆರಳಬೇಕೆಂದು ಕಪಟದಿಂದ ಹೇಳುವುದಾಗಲೀ ಪ್ರತಿಮಾನಾಟಕದಲ್ಲಿ ಬರುವುದಿಲ್ಲ. ವೃದ್ಧರಾಜ ದಶರಥನು ಸ್ತ್ರೀಶುಲ್ಕರೂಪವಾಗಿ ಮೊದಲೇ ತನ್ನ ಮಗ ಭರತನಿಗೆ ಕೊಟ್ಟಿದ್ದ ರಾಜ್ಯದ ವಿಷಯವನ್ನೇ ಮರೆತು ರಾಮನಿಗೆ ಪಟ್ಟಾಭಿಷೇಕ ಮಾಡುವುದು ಮಾತಿಗೆ ತಪ್ಪಿದಂತೆ ಆಗುತ್ತಿತ್ತು. ರಾಜನ ಸತ್ಯ ಪ್ರತಿಜ್ಞೆಗೆ ಭಂಗ ಬಂದಂತೆ ಅವನ ಮಾತನ್ನು ರಕ್ಷಿಸಲು ಕೈಕೇಯಿ ಆ ವಿಷಯವನ್ನು ನೆನಪು ಮಾಡಿಕೊಡುತ್ತಾಳೆ. ರಾಜ್ಯಲೋಭದಿಂದಲ್ಲ. ಅವನ ಸತ್ಯವ್ರತವನು ಸಂರಕ್ಷಿಸಿದ ಧನ್ಯೆ ಕೈಕೇಯಿ. ಪತಿಯನ್ನು ಸತ್ಯಸಂಧನನ್ನಾಗಿ ಮಾಡಲಿಚ್ಛಿಸಿದ ಅವಳು ಮಂಥರೆಯೊಡನೆ ರಾಜನ ಕಿವಿಯಲ್ಲಿ ಸ್ತ್ರೀಶುಲ್ಕದ ವಾಗ್ದಾನವನ್ನು ಜ್ಞಾಪಿಸುತ್ತಾಳೆ. ತನ್ನ ಪತಿ ಅಯೋಧ್ಯೆಯ ಪ್ರಥಿತರಾಜ ದಶರಥನ ಪಾತ್ರಕ್ಕೂ ಹಿರಿಮೆಯೇ. ಹಾಗೆಯೇ 'ವಲ್ಕಲ ಪ್ರಸಂಗ'ವನ್ನು ತಂದು ಸೀತೆಯು ಆಕಸ್ಮಿಕವಾಗಿ ಕುತೂಹಲದಿಂದ ಉಟ್ಟ ನಾರುಮಡಿಯನ್ನು ಬದಲಾಯಿಸಲಾಗದಂತೆ ಹಾಗೆಯೇ ಅವಳು ಕಾಡಿಗೆ ಹೊರಡುವಂತೆ ಕವಿಯು ನಾಟಕದಲ್ಲಿ ಕಲ್ಪಿಸಿದ್ದಾನೆ.

ಕೈಕೇಯಿಯೇ ವಾಲ್ಮೀಕಿ ರಾಮಾಯಣದಲ್ಲಿ ನಿರ್ಲಜ್ಜೆಯಿಂದ ಭರತನಿಗೆ ದಶರಥನ ಮರಣವನ್ನು ತಿಳಿಸಿ ಸಡಗರದಿಂದ ರಾಜ್ಯಾಭಿಷೇಕ ಅವನನ್ನು ಕಾದಿರುವುದೆಂದು ನುಡಿಯುತ್ತಾಳೆ. ಆದರೆ ನಾಟಕದಲ್ಲಿ ಕೋಮಲಹೃದಯಿ ಭರತನಿಗೆ ಕೈಕೇಯಿ ಈ ಯಾವ ವಿಚಾರವನ್ನೂ ಹೇಳುವ ಅವಕಾಶವಿಲ್ಲ. ಸೂಕ್ಷ್ಮವೂ ಪರಿಣಾಮಕಾರಿಯೂ ಆದ ಪ್ರತಿಮಾದೃಶ್ಯದಿಂದ ದಶರಥನ ಸಾವು, ರಾಮನ ವನಗಮನವೃತ್ತಾಂತ ಕ್ರಮಕ್ರಮವಾಗಿ ಭರತನಿಗೆ ಅರಿವಾಗುತ್ತವೆ. ಭರತನು ರಾಮನನ್ನು ಹುಡುಕಿಕೊಂಡು ಹೊರಟರೂ ಅವಳು ಅವನನ್ನು ತಡೆಯುವುದಿಲ್ಲ. ಅವನ ಕಟೂಕ್ತಿಗಳು—ಒಂದೇ ಎರಡೇ—ಎಲ್ಲವನ್ನೂ ಸೈರಿಸಿಕೊಂಡು ತನ್ನ ಉದ್ದೇಶವನ್ನು ತಿಳಿಸುವ ಕಾಲ ಬಂದೀತೆ ಎಂದು ಕಾಯುತ್ತಾಳೆ. ಕಡೆಗೆ ಸೀತಾಪಹರಣವನ್ನು ಕೇಳಿ ಶೋಕದಗ್ಧಹೃದಯನಾದ ಭರತನು ಅವಳನ್ನು, "ನೀನು ಸೊಸೆಯಾಗಿ ಬಂದು ಈ ಪ್ರಸಿದ್ಧ ವಂಶದ ಸೊಸೆಯೊಬ್ಬಳನ್ನು ಪಾಪಿಯೊಬ್ಬನು ಅಪಹರಿಸುವಂತೆ ಮಾಡಿದೆ" ಎಂದು ಮತ್ತೆ ನಿಂದಿಸಲು ಅವಳು ತನ್ನ ಕಾರ್ಯವನ್ನು ಭರತನೂ ಒಪ್ಪುವಂತೆ [illegible]ಕೊಳ್ಳುತ್ತಾಳೆ. ಪುತ್ರವಿರಹ ಶೋಕದಿಂದ ದಶರಥನ ಮರಣವಾಗಬೇಕ[illegible]ವದ ಕಥೆಯನ್ನು

ಜ್ಞಾಪಿಸುತ್ತಾಳೆ. ಭರತನು ಮೊದಲೇ ಕೈಕೇಯಿಯ ರಾಜ್ಯದಲ್ಲೇ ಇದ್ದುದರಿಂದಲೆ ರಾಮನಲ್ಲಿ ದಶರಥನಿಗೆ ಅನ್ಯಾದೃಶ ಪ್ರೇಮವಿದ್ದುದರಿಂದಲೂ ರಾಮನ ವಿರಹವೆ ನಿಜವಾದ ಪುತ್ರವಿರಹವೆನಿಸುವುದಾಗಿತ್ತು. ಇದರಲ್ಲೂ ರಾಮನನ್ನು ಅಧಿಕತ ವಿಪತ್ತಿನಿಂದ ರಕ್ಷಿಸುವುದೇ ಅವಳ ಉದ್ದೇಶವಾಗಿದ್ದಿತು. ಇಲ್ಲದಿದ್ದರೆ ಅಂಥ ಋಷಿ ಕುಮಾರನಿಗೆ ಮರಣ ಪ್ರಾಪ್ತವಾಗಿ ಅವನೂ ಅವನ ಮಾತಾಪಿತೃಗಳೂ ಹೀಗೆ ವಂಶವೇ ಮರಣವನ್ನಪ್ಪಿದಂತೆ ಇಲ್ಲೂ ಆಗಿಬಿಡಬಹುದೆಂದು ಅವಳು ಹೆದರಿದಳು. ಅಪಹರಣೀಯವಾದ ಪುತ್ರವಿರಹದಿಂದ ವೃದ್ಧಪತಿಯು ಮರಣ ಹೊಂದಿದರೂ ಸಹಿಸಿಕೊಳ್ಳಲು ಸಿದ್ಧಳಾಗಿ ಸವತಿಪುತ್ರ ರಾಮನ ಸಂರಕ್ಷಣೆಯನ್ನು ಹಾಗೆಯೇ ಇಕ್ಷ್ವಾಕುವಂಶದ ಸಂರಕ್ಷಣೆಯನ್ನು ಯೋಚಿಸಿದ ಕೈಕೇಯಿ ನಿಜಕ್ಕೂ ನಿಸ್ವಾರ್ಥ ಉದಾರ ಚರಿತೆ. ಆದರೆ ಹದಿನಾಲ್ಕು ದಿನ ಎಂದು ಹೇಳುವ ಸಂದರ್ಭದಲ್ಲಿ ಅಷ್ಟು ಕೇಳುವಾಗಲೂ, ಅವಳಲ್ಲಿ ತಳಮಳ ಹುಟ್ಟಿದ್ದರಿಂದ ಎಲ್ಲೋ ವಿಧಿಲೀಲೆಯ ಗೊಂಬೆಯಾಗಿ 'ಹದಿನಾಲ್ಕುವರ್ಷ' ಎಂದು ಅಂದುಬಿಟ್ಟಳು. ಇದು ಅವಳ ಮಾತಲ್ಲ. ವಿಧಿವಿಲಾಸ. ಇದಕ್ಕೆ ತ್ರೈಲೋಕ್ಯಸಾಕ್ಷಿಗಳ ಪ್ರಮಾಣವನ್ನು ಅವಳು ಹೇಳಲು ಎಲ್ಲರೂ ಅವಳನ್ನು ಗೌರವಿಸುವವರೇ. ಕೊನೆಯಲ್ಲಿ ಭರತನೇ ಕ್ಷಮೆ ಬೇಡಲು 'ಯಾವ ತಾಯಿ ತಾನೆ ಪುತ್ರನ ತಪ್ಪನ್ನು ಕ್ಷಮಿಸಲಾರಳು' ಎಂದು ಹೃದಯವೈಶಾಲ್ಯವನ್ನು ಮೆರೆಸುವಳು.

ಅನಂತರ ಭರತನು ತನ್ನ ತಾಯಿಯೊಡನೆಯೂ ಸಕಲಪರಿವಾರದೊಡನೆಯೂ ಅರಣ್ಯಕ್ಕೆ ತೆರಳಿ ಋಷ್ಯಾಶ್ರಮದಲ್ಲಿ ಜಯಶೀಲನಾಗಿ ಬಂದಿದ್ದ ರಾಮನನ್ನು ಸಂದರ್ಶಿಸಿ ರಾಮನನ್ನು ರಾಜ್ಯವನ್ನು ಪಡೆಯುವಂತೆ ಬೇಡಿಕೊಳ್ಳಲು——ಕೈಕೇಯಿಯೇ ಮುಂದೆ ಬಂದು "ಬಾ ಮಗು ಅಭಿಷೇಕವನ್ನು ಒಪ್ಪಿಕೋ" ಎಂದು ವಾತ್ಸಲ್ಯದಿಂದ ನುಡಿಯುವಳು. ರಾಮನು ಸಮ್ಮತಿಸುವನು.

ಇಲ್ಲಿಂದ ಮುಂದೆ ಕೈಕೇಯಿಗೆ ಅಪಾರ ಸಂಭ್ರಮ. ರಾಮನ ಪಟ್ಟಾಭಿಷೇಕ ಋಷ್ಯಾಶ್ರಮದಲ್ಲಿಯೂ ಅಯೋಧ್ಯೆಯಲ್ಲಿಯೂ ಮತ್ತೆ ಮತ್ತೆ ನಡೆದುದನ್ನು ನೋಡಿ ಆನಂದಿಸಿದಳು. ಇವೆಲ್ಲ ತನ್ನ 'ಮಗನ' ಅಭ್ಯುದಯವೆಂದೇ ಭಾವಿಸಿ ತಾನು ಪುಣ್ಯವಂತೆ ಎನಿಸುವಳು. ಹೀಗೆ ಕೈಕೇಯಿ ರಾಮಾಯಣದಂತೆ ನಾಟಕಕ್ಕೆಲ್ಲ ಸೂತ್ರಧಾರಿಣಿಯೇ ಆದರೂ ಪ್ರತಿಮಾನಾಟಕದಲ್ಲಿ ನಿಸ್ವಾರ್ಥೆ, ನಿಷ್ಕಳಂಕೆ, ನಿರ್ಮತ್ಸರೆ ಹಾಗೂ ಉದಾರಚರಿತೆ.

### ಕೌಸಲ್ಯೆ

ಕೌಸಲ್ಯೆಯು ರಾಮನ ಜನನಿಯೆಂಬುದು ಕೇವಲ ಜನ್ಮದಾತಳಾದ್ದರಿಂದ ಮಾತ್ರವಲ್ಲ; ಘನತೆ, ಗಾಂಭೀರ್ಯ, ಕ್ಷಮೆಯೇ ಮುಂತಾದ ಗುಣಗಳಿಂದಲೂ ಅವಳು ಜನನಿಯೇ. ಮಗನನ್ನು ಸೊಸೆಯನ್ನು ವನವಾಸಕ್ಕೆ ಕಳಿಸಿದ್ದ ಪತಿಯನ್ನು

ಅವಳು ತನ್ನ ಹೃದಯವನ್ನೇ ಹಿಂಡುತ್ತಿದ್ದ ದುಃಖವನ್ನೆಲ್ಲ ಮರೆತು ಶುಶ್ರೂಷೆ ಮಾಡಿದಳು. ಅವಳ ಚಿತ್ರವನ್ನು ನೆನೆದಾಗ ಕ್ಷಮಾಮಯಿಯಾದ ದಿವ್ಯ ಸ್ತ್ರೀಯ ಸಾನ್ನಿಧ್ಯದಲ್ಲಿರುವೆವೋ ಎಂಬ ಭಾವನೆಯುಂಟಾಗುವುದು.

ಪ್ರತಿಮಾಗೃಹದಲ್ಲಿ ಕೈಕೇಯಿಗೆ ವಂದಿಸದೆ ಭರತನು ಅವಳ ವಿಚಾರದಲ್ಲಿ ಕಠಿಣೋಕ್ತಿಗಳನ್ನಾಡಲು ಕೌಸಲ್ಯೆ ಅದ್ದ ಬಂದು ಸರ್ವ ಸಮುದಾಚಾರವನ್ನು ಬಲ್ಲ ನೀನು ನಿನ್ನ ಜನನಿಯನ್ನು ಏಕೆ ವಂದಿಸದೆ ಸುಮ್ಮನೆ ನಿಂದಿಸುವೆ ? ಎಂದು ಭರತನ ಕರ್ತವ್ಯವನ್ನು ಜ್ಞಾಪಿಸುವಳು. 'ಕೌಸಲ್ಯೆಯೇ ತನ್ನ ತಾಯಿ'; ಕೈಕೇಯಿಯಲ್ಲ ಎಂದು ಭರತನು ಕೋಪದಿಂದ ನುಡಿಯಲು ಕೌಸಲ್ಯೆ ಮತ್ತೆ "ಇಲ್ಲ ಹಾಗೆಲ್ಲ ಅನ್ನಬಾರದು ; ಇವಳು ನಿನ್ನ ಮಾತೆ" ಎಂದು ಮೃದುಮಾತುಗಳಿಂದ ಅವನನ್ನು ಸಂತೈಸುವಳು. ಅಪರಾಧಿನಿಯೆಂದು ಸಾಮಾನ್ಯವಾಗಿ ಲೋಕವೇ ಬಗೆದಿದ್ದ ಸವತಿಯನ್ನು ಸೋದರಿಯಂತೆ ಪ್ರೇಮದಿಂದ ಕಾಣುವ ಪತಿಪರಾಯಣಳಾದ ಕ್ಷಮೆಯ ಮಹೋದಧಿ ಕೌಸಲ್ಯೆ. ದಶರಥನು ಕೊನೆಗಾಲದಲ್ಲಿ ಅವಳ ಸ್ಪರ್ಶದಿಂದ ತನ್ನ ಶೋಕಾಗ್ನಿ ದಗ್ಧಹೃದಯಕ್ಕೆ ಸ್ವಲ್ಪವಾದರೂ ಸಮಾಧಾನ ಪಡೆದಿದ್ದರೆ ಹೆಚ್ಚೇನು ? ಅಂತಹ ಮಹಾಮಾತೆಯರಿಂದಲೇ ಭಾರತೀಯ ಸಂಸ್ಕೃತಿ ತನ್ನ ಉನ್ನತ ಕಾಂತಿಯನ್ನು ಮೆರೆಸಿದುದು.

## ನಾಟಕದ ಹೆಸರಿನ ಔಚಿತ್ಯ

ಕೃತಿಗೆ ಹೆಸರಿಡುವುದು ಕವಿಯ ಒಂದು ಕೌಶಲ. ಈ ಹೆಸರು ಸಾಧಾರಣವಾಗಿ ಎರಡು ಬಗೆಯಲ್ಲಿರಬಹುದು: ಒಂದು ವಿವರಣಾತ್ಮಕ (Descriptive), ಇನ್ನೊಂದು ಧ್ವನ್ಯಾತ್ಮಕ (Suggestive). ಪಾರ್ವತೀಪರಿಣಯನಾಟಕ, ಉತ್ತರರಾಮಚರಿತ ಮೊದಲಾದವು ಮೊದಲ ವರ್ಗಕ್ಕೆ ಉದಾಹರಣೆಗಳು. ಮೃಚ್ಛಕಟಿಕ, ಪ್ರತಿಮಾನಾಟಕ ಮೊದಲಾದವು ಎರಡನೆಯ ವರ್ಗಕ್ಕೆ ಸೇರಲರ್ಹವಾದವು. ಮೊದಲನೆಯ ವರ್ಗದ ಕೃತಿಗಳ ಹೆಸರನ್ನು ಕೇಳಿದ ಕೂಡಲೇ ಅಲ್ಲಿನ ವಸ್ತುವಿನ ಪರಿಚಯವು ಆಗುತ್ತದೆ. ಎರಡನೆಯ ವರ್ಗದ ಕೃತಿಗಳ ಹೆಸರಿನಲ್ಲಿ ಹಾಗೆ ಕೂಡಲೇ ವಸ್ತುಪರಿಚಯವಾಗುವುದಿಲ್ಲ. ಬದಲಾಗಿ ವಸ್ತುವನ್ನು ತಿಳಿಯುವ ಮನಸ್ಸು ಕುತೂಹಲಗೊಳ್ಳುತ್ತದೆ. ಕ್ರಮಕ್ರಮವಾಗಿ ವಸ್ತು ವಿವರಗೊಂಡು ಹೆಸರಿನ ಔಚಿತ್ಯದ ಅಂಶ ನಮಗೆ ಅರಿವಾಗುತ್ತದೆ. ಅಲ್ಲಿಂದ ಅದು ಸ್ಮೃತಿಪಟಲದಲ್ಲಿ ಚಿರಂತನವಾಗಿ ನಿಲ್ಲುತ್ತದೆ. ಕೃತಿಗಳ ಹೆಸರನ್ನು ಹೇಗೆ ಇಡಬಹುದೆಂಬುದನ್ನೇ ರೂಪಕ ನಿಯಮಗಳಲ್ಲಿ ಪ್ರಾಚೀನರು ತಿಳಿಸಿದ್ದಾರೆ. ಕೆಲವೊಮ್ಮೆ ಅಲ್ಲ ನಾಯಿಕೆಯರನ್ನು ಪ್ರಧಾನವಾಗಿ ಮಾಡಿ ಕೆಲವೊಮ್ಮೆ ನಾಯಕರನ್ನು ಪ್ರಧಾನವಾಗಿ ಮಾಡಿ ಮತ್ತೆ ಕೆಲವು ಸಲ ನಾಯಿಕೆ ನಾಯಕರ ಹೆಸರನ್ನು ಪ್ರಾಧಾನ್ಯಕ್ಕೆ ತಕ್ಕಂತೆ ಮೊದಲು—ಆಮೇಲೆ ಇಟ್ಟು, ಇನ್ನು ಕೆಲವು ಸಲ ನಾಯಿಕೆ ಅಥವಾ ನಾಯಕನನ್ನು

ಮತ್ತು ಪ್ರಧಾನ ಪ್ರಸಂಗವನ್ನು ಸೇರಿಸಿ ನಾಮಕರಣ ಮಾಡಿ ತಮ್ಮ ದೃಷ್ಟಿಯಿಂದ ಯಾವುದಕ್ಕೆ ಮಹತ್ತ್ವವೆಂಬುದನ್ನು ಸೂಚಿಸಿರುತ್ತಾರೆ. ಹೀಗಾಗಿ ರತ್ನಾವಲೀ, ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಅಭಿಜ್ಞಾನಶಾಕುಂತಲ, ಪ್ರತಿಜ್ಞಾ, ಸ್ವಪ್ನವಾಸವದತ್ತ, ವೇಣೀಸಂಹಾರ, ಮೃಚ್ಛಕಟಿಕ, ಊರುಭಂಗ ಮೊದಲಾದ ನಾಟಕಗಳ ನಾಮಕರಣದಲ್ಲಿ ಕವಿಗಳ ಆಶಯವೇನು ಎಂಬ ಜಿಜ್ಞಾಸೆಯ ಮೇಲೆ ಸಾಕಷ್ಟು ಸಾಹಿತ್ಯ ಬೆಳೆದಿದೆ.

ಸಂಸ್ಕೃತ ನಾಟಕಕರ್ತರಲ್ಲಿ ಭಾಸನಂತೂ ತನ್ನ ರೂಪಕಗಳಿಗೆ ಆದಷ್ಟು ಧ್ವನಿಪೂರ್ಣ ಹೆಸರುಗಳನ್ನೇ ಕೊಟ್ಟು ಒಮ್ಮೆ ಅವನ್ನು ಓದಿದ ಓದುಗರು ಮತ್ತೆ ಎಂದಿಗೂ ಅವನ್ನು ಮರೆಯಲಾಗದಂತೆ ಮಾಡಿದ್ದಾನೆ. ಅವನ ಮಧ್ಯಮವ್ಯಾಯೋಗ, ಪಂಚರಾತ್ರ, ಕರ್ಣಭಾರ, ಊರುಭಂಗ, ಸ್ವಪ್ನವಾಸವದತ್ತ, ಅಭಿಷೇಕನಾಟಕಗಳು ಮರೆಯಲಾರದ ಧ್ವನಿಸೌಂದರ್ಯವನ್ನು ಹೆಸರಿನಲ್ಲಿ ಪಡೆದಿವೆ. ಈ ಗುಂಪಿನಲ್ಲಿ ರತ್ನಪ್ರಾಯವಾಗಿರುವುದೆಂದರೆ ಪ್ರತಿಮಾನಾಟಕ. ಇದರ ವಸ್ತುವೂ ಅರ್ಥಪ್ರಾಮುಖ್ಯವೂ ಮೇಲ್ನೋಟಕ್ಕೆ ಅರಿವಾಗುವುದು. ಒಮ್ಮೆ ಓದಿದರೆ ಸಾಕು'ಕವಿಯ ಕಲ್ಪನಾಚಾತುರ್ಯ, ಪ್ರತಿಭಾಸಂಪತ್ತು, ಸುವಿಧಾನಚತುರತೆಗೆ ಈ ಹೆಸರು ಪರ್ಯಾಯವೆಂದೆನಿಸಿ ಆಶ್ಚರ್ಯ–ಆನಂದ ಹೊನಲಿನಲ್ಲಿ ನಾವು ಮಿಂದು ಮಿನುಗುತ್ತೇವೆ.

ಶ್ರೀಮದ್ರಾಮಾಯಣದಲ್ಲಿ ದಶರಥನು ಮರಣ ಪಡೆದ ಸಂಗತಿಯು ಭರತನಿಗೆ ತಿಳಿಯುವ ಪ್ರಸಂಗದಲ್ಲಿ ಕಲಾಸೌಂದರ್ಯದ ದೃಷ್ಟಿಯಿಂದ ಅತಿಶಯವೇನೂ ಇಲ್ಲ. ಈ ವಿಷಯದಲ್ಲಿ ಭಾಸನ ಸಂವಿಧಾನವೇ ಬೇರೆ. ಮೂರನೆಯ ಅಂಕದಲ್ಲಿ ಭರತನು ದಶರಥನ ಮರಣ ವೃತ್ತಾಂತವನ್ನು ಅರಿತ ಬಗೆ, ಅದು ಅವನ ಮೇಲೆ ಮಾಡಿದ ಪರಿಣಾಮ—ಇವುಗಳನ್ನು ಕವಿಯು ವಿವರಿಸುತ್ತಾನೆ. ದಶರಥನ ಮರಣಾನಂತರ ವಸಿಷ್ಠ ವಾಮದೇವಾದಿಗಳು ಸೋದರಮಾವನ ಮನೆಯಲ್ಲಿದ್ದ ಭರತನನ್ನು ಕರೆತರಲು ರಥ ದೊಂದಿಗೆ ಒಬ್ಬ ಸೂತನನ್ನು ಕಳಿಸುವರು. ಅವನು ಭರತನಿಗೆ ದಶರಥನ ಮರಣವಾರ್ತೆ ಯನ್ನು ಹೇಳದೆ ರಾಜನಿಗೆ ಅಸ್ವಸ್ಥತೆಯೆಂದು ಮಾತ್ರ ಹೇಳುವನು. ಏಕೆಂದರೆ ಅವನು ಮರಣ ವಿಷಯವನ್ನು ತಿಳಿಸಿದರೆ—ತಂದೆಯ ಸಾವು, ತಾಯಿಯ ಲೋಭ, ರಾಮಾದಿಗಳ ವನವಾಸ ಈ ಮೂರನ್ನೂ ಹೇಳಲೇಬೇಕಾದ ಸಂದರ್ಭವಿತ್ತು. ಇದಕ್ಕೆ ಅವನ ಮನಸ್ಸು ಬಾರದು ಅಥವಾ ಹಿರಿಯರ ಆಜ್ಞೆಯೂ ಇರಬಹುದು. ಆದರೆ ಭರತನಿಗೆ ಮನಸ್ಸಿನಲ್ಲಿ ಕಳವಳ. ಅಪ್ಪರಿಂದ ತಂದೆಗೆ ಏನು ಕಾಯಿಲೆ ? ವೈದ್ಯರ ಅಭಿಪ್ರಾಯ ವೇನು ? ಊಟ ನಿದ್ರೆಗಳನ್ನು ಮಾಡುತ್ತಾನೆಯೇ ? ಪ್ರಾಣಕ್ಕೆ ಭಯವಿಲ್ಲವಷ್ಟೆ — ಈ ವಿಷಯಗಳನ್ನು ಕೆದಕಿ ಕೆದಕಿ ಕೇಳುವನು. ಸೂತನು ಉಪಾಯದಿಂದ ವಿಷಯ ವನ್ನು ಮರೆಮಾಚುತ್ತಾ ಕುದುರೆಗಳನ್ನು ವೇಗದಿಂದ ಓಡಿಸಿಕೊಂಡು ಬರುತ್ತಲಿರುವನು. ಅಯೋಧ್ಯೆಯ ಬಳಿ ಬಂದಂತೆಲ್ಲಾ ಭರತನ ಕಾತರತೆ ಹೆಚ್ಚುವುದು. ಆದರೆ ಅಯೋಧ್ಯೆಯ ಹೆಬ್ಬಾಗಿಲು ಸೇರುವ ವೇಳೆಗೆ ಅಲ್ಲಿಯೇ ನಿಲ್ಲಬೇಕಾಗುವುದು.

"ಪ್ರವೇಶಕ್ಕೆ ಮುಹೂರ್ತ ಚೆನ್ನಾಗಿಲ್ಲ; ಶುಭಮುಹೂರ್ತ ಬರುವವರೆಗೂ ಕಾಯಬೇಕು" ಎಂದು ಗುರುಗಳು ಹೇಳಿಕಳಿಸುವರು. "ಊರಿಗೆ ಬಂದಾಗ ಊರ ಬಾಗಿಲಲ್ಲಿ ಸ್ವಲ್ಪ ಕಾದು ಒಳಕ್ಕೆ ಹೋಗಬೇಕೆಂಬ ಸಂಪ್ರದಾಯವೂ ಉಂಟು—ಅದನ್ನು ನಡೆಸಿದ ಹಾಗೂ ಆಯಿತು; ಗುರುಗಳ ಮಾತನ್ನು ನಡೆಸಿದಂತೆಯೂ ಆಯಿತು" ಎಂದುಕೊಂಡು ತನ್ನ ಉತ್ಸಾಹಕ್ಕೆ ಅಡ್ಡಿ ಒದಗಿದ್ದರೂ ಸೂತನನ್ನು ಕುದುರೆಗಳಿಗೆ ನೀರು ಕುಡಿಸಿ ದಣಿವಾರಿಸಲು ಆಜ್ಞೆಮಾಡಿ ಅವನು ಆ ಕಡೆ ತೆರಳಿದ ಮೇಲೆ ಅಲ್ಲಿಯೇ ದೇವಸ್ಥಾನದಂತೆ ಕಾಣುತ್ತಿದ್ದ ಒಂದು ಕಟ್ಟಡಕ್ಕೆ ತೆರಳುವನು. ಅದರಲ್ಲಿ ದೇವಸ್ಥಾನದ ಚಿಹ್ನೆಗಳಿರಲಿಲ್ಲ; ಆದರೆ ಅದಕ್ಕೆ ಈಚೆಗೆ ಸುಣ್ಣಸಾರಣೆಮಾಡಿ ಅಲಂಕರಿಸಿದ್ದರು. ಆದುದರಿಂದ ಕುತೂಹಲಗೊಂಡು ಒಳಗೆ ಪ್ರವೇಶಿಸಿ ನೋಡಲು, ಅಲ್ಲಿ ನಾಲ್ಕು ಶಿಲಾಪ್ರತಿಮೆಗಳಿದ್ದವು. ಅವು ದೇವಪ್ರತಿಮೆಗಳಾಗಿರಬೇಕೆಂಬ ಭಾವನೆಯಿಂದ ಅವುಗಳಿಗೆ ನಮಸ್ಕರಿಸುತ್ತಿದ್ದ ಕಾಲಕ್ಕೆ ದೇವಕುಲಿಕನು ಬಂದು ಅಲ್ಲಿಯ ಪ್ರತಿಮೆಗಳನ್ನು ನೋಡುವ ಯಾರೋ ಒಬ್ಬ ವ್ಯಕ್ತಿ ಒಳಗೆ ಇರುವುದನ್ನೂ ಆ ಪ್ರತಿಮೆಗಳಿಗೆ ವಂದಿಸುತ್ತಿರುವುದನ್ನೂ ಕಂಡು ಅವು ಕ್ಷತ್ರಿಯರ ವಿಗ್ರಹಗಳೆಂದೂ ಇಕ್ಷ್ವಾಕು ವಂಶದ ಅರಸರ ಪ್ರತಿಮೆಗಳೆಂದೂ ತಿಳಿಸಿ ಅವುಗಳನ್ನು ತಿಳಿದುಕೊಳ್ಳಲು ಕುತೂಹಲಿಯಾದ ಭರತನಿಗೆ ಕ್ರಮವಾಗಿ ಮೊದಲನೆಯ ಪ್ರತಿಮೆ ದಿಲೀಪನದು; ಎರಡನೆಯದು ರಘುಮಹಾರಾಜನದು; ಮೂರನೆಯದು ಅಜ ಮಹಾರಾಜನದು ಎಂದು ಅವರ ಮಹಿಮೆಗಳನ್ನು ವರ್ಣಿಸಿ ಪರಿಚಯ ಮಾಡಿಕೊಡುವನು. ಅಲ್ಲಿಂದ ಮುಂದಿನ ನಾಲ್ಕನೆಯದಾದ ದಶರಥನ ವಿಗ್ರಹವನ್ನು ನೋಡುತ್ತಲೇ ಕಳವಳ ತುಂಬಿ ಭರತನು ಪುನಃ ಆ ಹೆಸರುಗಳನ್ನೆಲ್ಲಾ ಕ್ರಮವಾಗಿ ಮೊದಲಿನಿಂದ ಹೇಳಿಸುವನು. ದಿಲೀಪ, ತನ್ನ ಮುತ್ತಜ್ಜನ ತಂದೆ, ರಘು, ತನ್ನ ಮುತ್ತಜ್ಜ, ಅಜ, ತನ್ನ ಅಜ್ಜ; ಇನ್ನೂ ಒಂದು ಪ್ರತಿಮೆ ಬಾಕಿ ಉಳಿಯಿತು. ಮುಂದೆ ದಶರಥನಿರಬೇಕಷ್ಟೇ? ಆಗ ಹೆದರಿಕೆ ಉಂಟಾಯಿತು. ಭರತನಿಗೆ ಆಗ ದೇವಕುಲಿಕನು ಮಾತಾಡುವಷ್ಟರಲ್ಲಿ ಒಂದು ವಿಚಾರ ಕೇಳಬೇಕು. ಜೀವಂತ ವ್ಯಕ್ತಿಗಳ ಪ್ರತಿಮೆಗಳನ್ನೂ ಇಲ್ಲಿ ಪ್ರತಿಷ್ಠಾಪಿಸಿದ್ದಾರೆಯೇ? ಎಂದು ಅವನನ್ನು ಪ್ರಶ್ನಿಸುವನು. "ಇಲ್ಲ—ಮೃತರಾದವರ ಪ್ರತಿಮೆಗಳನ್ನು ಮಾತ್ರ" ಎಂದು ಅವನು ಉತ್ತರಿಸುವನು. "ಹಾಗಾದರೆ... ..........." ಸರಿ. ಈ ಪ್ರತಿಮೆಗಳೆಲ್ಲ ಯಾರವು?" ಎಂದು ಪುನಃ ಪ್ರಶ್ನಿಸುವನು. ಅದೇ ಉತ್ತರ. ಕೊನೆಯದನ್ನು ತಿಳಿಸುವ ವೇಳೆಗೆ ನಿರಾಶೆ ಹೊಂದಿ "ಸರಿ, ನಾನು ಹೋಗುತ್ತೇನೆ" ಎಂದು ಹೊರಡುವನು. ಈ ವೇಳೆಗೆ ರೂಪಿನಿಂದ ಧ್ವನಿಯಿಂದ ಆಕಾರದಿಂದ ಅವನನ್ನು ಆಗಲೇ ಗುರುತಿಸಿದ್ದ ದೇವಕುಲಿಕನು — "ಸ್ತ್ರೀಶುಲ್ಕಕ್ಕಾಗಿ ಪ್ರಾಣವನ್ನೂ ರಾಜ್ಯವನ್ನೂ ಕೊಟ್ಟ ದಶರಥ ಮಹಾರಾಜನ ಪ್ರತಿಮೆಯ ವಿಚಾರವನ್ನೇಕೆ ನೀನು ಕೇಳಬಯಸುತ್ತಿಲ್ಲ?" ಎನ್ನಲು ಭರತನು ಯಾವುದನ್ನು ಕೇಳಬಾರದೆಂದು ಭಾವಿಸಿಕೊಂಡಿದ್ದನೋ ಅದನ್ನೇ ಕೇಳಿದುದರಿಂದ ಬರಸಿಡಿಲು

ಎರಗಿದವನಂತೆ ಮೂರ್ಛೆಹೋಗುವನು. ಆಗಲೇ ರಾಮ, ಲಕ್ಷ್ಮಣ ಮತ್ತು ಸೀತೆ—ಮೂರು ಜನವೂ ಅರಣ್ಯಕ್ಕೆ ತೆರಳಿದರೆಂಬ ವಿಷಯವೂ ತಿಳಿಯುವುದು; ಅದಕ್ಕೆ ದೇವಕುಲಿಕನು ಕಾರಣ ಹೇಳಲು ಪ್ರಾರಂಭಿಸಿ, ಮಹಾರಾಜನು ರಾಮನಿಗೆ ರಾಜ್ಯಾಭಿಷೇಕವನ್ನು ಮಾಡಲು ಸಿದ್ಧನಾಗಿರುವಲ್ಲಿ ನಿನ್ನ ಮಾತೆ ಹೀಗೆ ಹೇಳಿದಳು—ಏನೆಂದರೆ; ಅನ್ನುತ್ತಿರುವಂತೆಯೇ ಭರತನು—"ಅಯ್ಯೋ! ತಿಳಿಯಿತು ಅವಳು ತನ್ನ ಹಾಳು ಶುಲ್ಕವನ್ನು ಜ್ಞಾಪಿಸಿದಳಷ್ಟೆ: ತನ್ನ ಮಗ ರಾಜನಾಗಬೇಕು ಎಂದಳು. ಅಣ್ಣನನ್ನು ಕುರಿತು, ವತ್ಸ, ವನಕ್ಕೆ ಹೋಗು ಎಂದಳು. ಪುತ್ರವಿರಹ ತಾಪದಿಂದ ನಮ್ಮ ತಂದೆ ಮರಣವನ್ನಪ್ಪಿದರು; ಪ್ರಜೆಗಳು ನನ್ನನ್ನು ನೀಚನೆಂದು ನಿಂದಿಸುತ್ತಿದ್ದಾರೆ,—ಎಂದು ಹೇಳಿ ಮುಗಿಸಿದನು. ಆಗ ಭರತನಿಗೆ ತನ್ನ ತಂದೆಯಿಲ್ಲದ ಅಣ್ಣನಿಲ್ಲದ ಅಯೋಧ್ಯೆ ಅಯೋಧ್ಯೆಯೆನಿಸದೆ ಅಸಹ್ಯವಾಯಿತು. ಮತ್ತೆ ಮೂರ್ಛಿತನಾಗಿ ಬೀಳುವನು.

ಈ ವೇಳೆಗೆ ವಸಿಷ್ಠಾದಿಗಳಿಂದ ಪೂರ್ವನಿಯೋಜಿತ ಕಾರ್ಯಕ್ರಮದಂತೆ ಮಹಾರಾಣಿಯರು ಪ್ರತಿಮಾಗೃಹದ ದರ್ಶನಕ್ಕಾಗಿ ಅಲ್ಲಿಗೆ ಆಗಮಿಸುವರು. ಭರತನು ಅವರನ್ನು ನೋಡಿದರೂ ಈಗ ಅವರು ಮೊದಲಿನಂತೆ ಸುಮಂಗಲಿಯರಲ್ಲ, ಅವರನ್ನು ಮಾತನಾಡಿಸುವುದೂ ಆತಂಕವೇ, ಆದುದರಿಂದ ಸುಮಂತ್ರನು ಪರಿಚಯಿಸಿಕೊಡುವನು. ಮೊದಲು ಕೌಸಲ್ಯೆ: ಅವಳನ್ನು ನೋಡಿ—"ಜನನಿ, ನಿರಪರಾಧಿಯಾದ ನಾನು ನಮಸ್ಕರಿಸುವೆನು" ಎಂದು ವಂದಿಸುವನು. ಭರತನ ಸಂತಾಪವನ್ನು ತಿಳಿದ ಕೌಸಲ್ಯೆ ವಾತ್ಸಲ್ಯದಿಂದ—"ವತ್ಸ, ಸಂತಾಪರಹಿತನಾಗು" ಎಂದು ಆಶೀರ್ವದಿಸುವಳು. ಅದಕ್ಕೆ ತನ್ನದೇ ಅರ್ಥಮಾಡಿಕೊಂಡ ಭರತನಿಗೆ ಆ ಮಾತೇ ಸಾಕು; ಹೃದಯವನ್ನು ಇರಿಯಲು. ಆಮೇಲೆ ಸುಮಿತ್ರೆಯ ಪರಿಚಯ; ಕೊನೆಗೆ ಕೈಕೇಯಿಯನ್ನು ಪರಿಚಯಗೊಳಿಸುತ್ತಾ ಸುಮಂತ್ರನು—"ಈಕೆ ನಿನ್ನ ಜನನಿ" ಎಂದು ಹೇಳಿದ ಕೂಡಲೇ ಸಿಡಿದೆದ್ದು—"ಅಯ್ಯೋ ಪಾಪಿ! ಗಂಗಾ-ಯಮುನೆಯರ ಮಧ್ಯೆ ಪ್ರವೇಶಿಸಿದ ಕುನದಿಯಂತೆ ಕ್ಷುದ್ರಳಾದ ನೀನೇಕೆ ಈ ಇಬ್ಬರು ಮಾತೆಯರ ಮಧ್ಯೆ ನಿಂತಿರುವೆ" ಎಂದು ಪ್ರಾರಂಭಿಸಿ ನಿಂದನೆಗಳ ಮಳೆಯನ್ನೇ ಸುರಿಸುವನು. ಕೈಕೇಯಿ ದಿಕ್ಕುಕಾಣದೆ—"ಮಗೂ, ನಾನೇನು ಮಾಡಿದೆ" ಎಂದು ಕೇಳಲು ಕುದಿದೆದ್ದ ಭರತನು "ಹೇಳಬೇಕೇ ನೀನು ಮಾಡಿದ್ದು? ಒಂದೇ ಎರಡೇ ನೀನು ಮಾಡಿದ್ದು—ಹೇಳುತ್ತೇನೆ ಕೇಳು: ನನಗೆ ಅಪಕೀರ್ತಿ, ರಾಮನಿಗೆ ವನವಾಸ, ರಾಜನ ಮರಣ, ಅಯೋಧ್ಯೆಗೆ ಸಂಕಟ, ಲಕ್ಷ್ಮಣನಿಗೆ ಮೃಗಗಳೊಡನೆ ಜೀವಿಸುವ ಕಷ್ಟ, ತಾಯಿಯರಿಗೆ ದುಃಖ, ಸೀತೆಗೆ ಆಯಾಸ, ಕೊನೆಗೆ ನಿನಗೆ ಎಲ್ಲರಿಂದಲೂ ಛೀಮಾರಿ" ಎಂದು ಪಟಪಟನೆ ಅಂದುಬಿಡುವನು. ಕೌಸಲ್ಯೆ—"ತಾಯಿಯನ್ನು ಹಾಗೆ ಕಟುವಾಗಿ ನಿಂದಿಸಬಾರದು. ಅವಳಿಗೆ ಅಭಿವಂದಿಸು" ಎಂದು ಸಾಂತ್ವನಗೊಳಿಸಲು, ಭರತನು—"ಅವಳು ನನ್ನ ತಾಯಿಯಲ್ಲ: ನೀನೇ ನನ್ನ ತಾಯಿ" ನಿನಗೇ ನನ್ನ ಅಭಿವಂದನೆ", ಎಂದು ಕೋಪದಿಂದ ನುಡಿಯುವನು.

"ಅವಳು ಒಮ್ಮೆ ತಾಯಿಯಾಗಿದ್ದಳು ; ಈಗಲ್ಲ. ಪತಿದ್ರೋಹಮಾಡಿದ ಹೆಂಗಸು, ತಾಯಿಯಾದರೂ ಮಗನಿಂದ ಧಿಕ್ಕರಿಸಲ್ಪಡಲು ಅರ್ಹಳು" ಎನ್ನುವನು. "ಮಗು, ಮಹಾರಾಜನು ತನ್ನ ಸತ್ಯವ್ರತವನ್ನು ಪಾಲಿಸಲೆಂದೇ ನಾನು ಹಾಗೆ ನುಡಿದೆ" ಎಂದು ಕೈಕೇಯಿ ಹೇಳುತ್ತಿರುವಂತೆಯೇ ಭರತನು—"ಹೌದು, ನಿನಗೆ ರಾಮ ಮಗನಲ್ಲವೋ ? ಅವನಿಗೆ ರಾಜ್ಯ ಬಂದಿದ್ದರೆ ಅವನ ತಮ್ಮಂದಿರು ದುಃಖಿಸುತ್ತಿದ್ದರೋ, ಪ್ರಜೆಗಳು ವಿರೋಧಿಸುತ್ತಿದ್ದರೋ ? ಅವನು ನಾರುಡೆ ಉಟ್ಟು ವನದಲ್ಲಿ ವಾಸಮಾಡಲು ಕಳಿಸಿದೆಯಲ್ಲ ಅದೆಲ್ಲ ಸ್ತ್ರೀಶುಲ್ಕದಲ್ಲಿದ್ದಿತೋ ? ನಿನಗೆ ಹಾಳಾಗಲು ಇಷ್ಟವಿದ್ದರೆ ಆಗಬಹುದಿತ್ತು, ಆದರೆ ನನ್ನನ್ನು ಏಕೆ ಅದಕ್ಕೆ ಎಳೆದೆ ? ನೀನು ಕ್ರೂರಿ. ವಜ್ರಹೃದಯೆ" ಎಂದು ಪುನಃ ಝಂಕಿಸುವನು. ಆ ವೇಳೆಗೆ ಸುಮಂತ್ರನು ಮುಂದೆ ಬಂದು "ಆಯುಷ್ಮನ್, ವಸಿಷ್ಠ ವಾಮದೇವಾದಿಗಳು ಅಭಿಷೇಕ ಸಾಮಗ್ರಿಗಳನ್ನು ಅಣಿಮಾಡಿಕೊಂಡು ನಿನ್ನನ್ನು ಎದುರುನೋಡುತ್ತಿದ್ದಾರೆ. ರಾಜನಿಲ್ಲದ ರಾಜ್ಯದಲ್ಲಿ ಪ್ರಜೆಗಳಿಗೆ ಹಿತವಿಲ್ಲ ; ಅನಾಥರಾಗುತ್ತಾರೆ" ಎಂದು ನುಡಿದನು. ಭರತನು "ನಾನೂ ಅನಾಥನೇ, ಪ್ರಜೆಗಳೂ ಅನಾಥರೇ ಬೇಕಾದರೆ ಅವರೂ ನನ್ನ ಹಿಂದೆ ಬರಲಿ" ಎಂದು ಹೇಳಿ ಹೊರಡಲನುವಾಗುವನು. ಅವನಿಗೆ ಅಭಿಷೇಕ ಮಾಡಿ ರಾಜನನ್ನಾಗಿ ಮಾಡಬೇಕೆಂದಿದ್ದ ಹಿರಿಯರ ಇಚ್ಛೆಯನ್ನು ತಿಳಿಸಿ ಸುಮಂತ್ರನು—"ಕುಮಾರ, ಅಭಿಷೇಕವನ್ನು ತೊರೆದು ಎಲ್ಲಿಗೆ ಹೋಗುವೆ" ಎನ್ನಲು ಕೇಳಿದ ಭರತನು—"ಏನು ! ಪಟ್ಟಾಭಿಷೇಕವೆ ! ಇಕೋ ಇವಳಿಗೆ ಮಾಡಿ" ಎಂದು ಕೈಕೇಯಿಯನ್ನು ತೋರಿಸಿ "ರಾಮಲಕ್ಷ್ಮಣರೆಲ್ಲಿರುವರೋ ಅದೇ ನನಗೆ ಅಯೋಧ್ಯೆ. ನಾನು ಅಲ್ಲಿಗೇ ಹೋಗುತ್ತೇನೆ" ಎಂದು ಅಯೋಧ್ಯೆಯನ್ನು ಪ್ರವೇಶಿಸದೇ ಯಾರು ಏನು ಸಮಾಧಾನ ಹೇಳಿದರೂ ಕೇಳದೇ, ಹಾಗಿಂದ ಹಾಗೇ ವನಕ್ಕೆ ತೆರಳುತ್ತಾನೆ.

ವಾಲ್ಮೀಕಿ ರಾಮಾಯಣದಲ್ಲಿಲ್ಲದ ಭಾಸನ ಸ್ವತಂತ್ರ ಸೃಷ್ಟಿಯಾಗಿ ಅವನ ನಾಟಕಕಲಾಕೌಶಲ ಮುಗಿಲು ಮುಟ್ಟಿರುವ ಈ ಪ್ರತಿಮಾಂಕ, ನಾಟಕದ ಹೆಸರಿನ ಔಚಿತ್ಯವನ್ನು ಮೆರೆಯಿಸಿದೆ. ವಲ್ಕಲಪ್ರಸಂಗ ಮತ್ತು ಅಭಿಷೇಕಪ್ರಸಂಗಗಳನ್ನೊಳಗೊಂಡ ಮೊದಲ ಅಂಕ ಅನಿರ್ವಚನೀಯವಾದ ಆತಂಕವನ್ನೂ ಭಯವನ್ನೂ ಹುಟ್ಟಿಸಿ ಆಗಾಮಿ ದುಃಖದ ಸೂಚನೆಯನ್ನು ತನ್ನ ಗರ್ಭದಲ್ಲಿ ಪಡೆದಿರುತ್ತದೆ. ಎರಡನೆಯ ಅಂಕದಲ್ಲಿ ನಾವು ಯಾವುದನ್ನು ಕುರಿತು ಶಂಕಿಸುತ್ತಿದ್ದೆವೋ ಅದೇ ಆಗಿಬಿಡುತ್ತದೆ—ರಾಮನ ವನಪ್ರಯಾಣ ಮತ್ತು ದಶರಥನ ಮರಣ. ಮೂರನೆಯ ಅಂಕದಲ್ಲಿ, ಮುಂದೆ ದೋಷಮುಕ್ತಳಾಗಿ ರಾಮನ ರಕ್ಷಣೆಯನ್ನೇ ಬಯಸಿ ಸ್ತ್ರೀರತ್ನವೆನಿಸಬೇಕಾದ ಕೈಕೇಯಿ ಈ ಅಂಕದಲ್ಲಿ ಅನುಭವಿಸಿದ ದುಃಖ ಅಪ್ರಮೇಯವಾಗುತ್ತದೆ.

ಈ ಅಂಕದಲ್ಲಿ ಕವಿಯ ಕಲ್ಪನೆ ಮನೋಜ್ಞವಾಗಿರುವುದಷ್ಟೇ ಅಲ್ಲ: ನಾಟಕಕೌಶಲ್ಯವೂ ಮನೋಜ್ಞವಾಗಿದೆ. ಎರಡನೆಯ ಅಂಕದಲ್ಲಿ ವರ್ಣಿತವಾಗಿರುವ ದಶರಥ

ಮರಣ, ಮೂರನೆಯ ಅಂಕದಲ್ಲಿ ಪ್ರತಿಪಾದಿತವಾಗಿರುವ ದಶರಥನ ಪ್ರತಿಮಾ ದರ್ಶನ—ಹೃದಯವಿದ್ರಾವಕವಾದ ಈ ಎರಡು ಸನ್ನಿವೇಶಗಳ ಮಧ್ಯೆ ವೈವಿ ಬರುವಂತೆ ಪ್ರಾಸಂಗಿಕ ಜೀವನದ ಸಡಿಯಾಕ್ಕಿನಂತಿರುವ ಪ್ರತಿಮಾಗೃಹದ ಭಟ ಮತ್ತು ಸುಣ್ಣಗಾರನ ಮಾತುಗಳನ್ನು ತಂದಿರುವುದು ಅತ್ಯಂತ ಉಚಿತ ವಾಗಿದೆ, ನಿತ್ಯಜೀವನಕ್ಕೆ ಕನ್ನಡಿ ಹಿಡಿಯುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ, ಸರ ಸ್ವಭಾವದವನೂ, ಮೃದುಹೃದಯಿಯೂ, ತಂದೆಯನ್ನು ನೋಡಲು ಕಾತುರನಾ ಸುಂದರ ಚಿತ್ರಗಳನ್ನು ಕಲ್ಪಿಸಿಕೊಳ್ಳುತ್ತಲೂ ಇರುವ ಭರತನಿಗೆ ಒಮ್ಮೆಲೆ ಕೆಟ್ಟ ಸುದ್ದಿಯ ಸಿಡಿಲನ್ನು ಸಿಡಿಸುವ ಬದಲು, ನಿಧಾನವಾಗಿ ಕ್ರಮ ಕ್ರಮವಾ ಮೊದಲು ಸ್ಪಷ್ಟಾಸ್ಪಷ್ಟವಾಗಿ ಕೊನೆಗೆ ಸ್ಪಷ್ಟವಾಗಿ ಸೂಚಿಸಿದಂತೆ ಯೋಜಿಸಿರು 'ಪ್ರತಿಮಾದೃಶ್ಯ' ಮಹಾನಾಟಕಕಾರನಿಗೆ ಮಾತ್ರ ಗೋಚರವಾಗುವ ಕಲೆ ಇದನ್ನು ಸರಿಗಟ್ಟುವ ದೃಶ್ಯ ಸಂಸ್ಕೃತ ಸಾಹಿತ್ಯದಲ್ಲೇ ಬೇರೊಂದಿಲ್ಲ. ಈ ದೃಶ್ಯವೆ ಭಾಸನಿಗೆ ಪರಮಪ್ರಿಯವಾಗಿದ್ದಿತೆನ್ನುವುದಕ್ಕೂ, ಭಾಸನ ಪ್ರತಿಭೆಯನ್ನು ತೂಗಿ ನೋಡುವ ರಸಿಕನು ಇದನ್ನು ಮೊದಲು ಗಮನಿಸಬೇಕೆನ್ನುವುದಕ್ಕೂ, ನಾಟಕಕ್ಕೆ ಕವಿ ಇಟ್ಟಿರುವ ಹೆಸರೇ ಸಾಕ್ಷಿ. ಈ ಹೆಸರು ಎಷ್ಟು ಧ್ವನಿಪೂರ್ಣ, ಅರ್ಥ ಗರ್ಭಿತ, ಎಷ್ಟು ಸಾರ್ಥಕ. ರಾಮಾಯಣದ ಬಗ್ಗೆ ಸ್ವಂತ ಚಿಂತನ ಅನುಭವ ಗಳಿಂದ ಮಾಗಿದ ಕವಿಯ ಚೇತನ ಇತ್ತ ಫಲ.

## ಉಪಸಂಹಾರ

ಸಂಸ್ಕೃತ ರೂಪಕಸಾಹಿತ್ಯದ ಇತಿಹಾಸದಲ್ಲಿ ಭಾಸನ ಹೆಸರು ಅವಿಸ್ಮರಣೀಯ ವಾದುದು. ಅವನ ರೂಪಕರಚನೆ ಬಹುಮುಖ್ಯವಾದುದಷ್ಟೇ ಅಲ್ಲ; ರೂಪಕಗಳ ಸಂಖ್ಯೆಯೂ ಅತ್ಯಧಿಕವಾದುದು. ಅವುಗಳ ಮಹಿಮೆಯೂ ಅನುಪಮವಾದುದು. ಅವನ ಕೃತಿಗಳಲ್ಲಿ ಅನೇಕವು ರಾಮಾಯಣ, ಭಾರತ, ಭಾಗವತ ಮತ್ತು ಬೃಹತ್ಕಥೆ ಗಳನ್ನು ಆಧರಿಸಿ ಬರೆದವು. ಕೆಲವು ಸ್ವಂತ ರಚನೆಯ ವಸ್ತುಗಳನ್ನೊಳಗೊಂಡವು. ಪ್ರಸಿದ್ಧ ಪೂರ್ವಕೃತಿಗಳ ಪ್ರಭಾವಕ್ಕೆ ಒಳಗಾಗಿದ್ದರೂ ಭಾಸನು ತನ್ನ ವ್ಯಕ್ತಿತ್ವವನ್ನು ಸ್ವತಂತ್ರದೃಷ್ಟಿಯನ್ನೂ ಎಲ್ಲಿಯೂ ಕಳೆದುಕೊಂಡಿಲ್ಲ. ಈ ನೂತನ ಸ್ವತಂತ್ರ ದೃಷ್ಟಿ ಅವನ ರೂಪಕಗಳಿಗೆ ವಿಶೇಷ ಮಹತ್ವವನ್ನು ತಂದುಕೊಟ್ಟಿದೆ. ಅವನ ಸಂವಿಧಾನಚಾತುರ್ಯ, ಪಾತ್ರನಿರೂಪಣಾಸಾಮರ್ಥ್ಯ ಮತ್ತು ರಸಪ್ರತಿಪಾದನಾ-ನೈಪುಣ್ಯ, ಹಿಂದಿನ ಹಾಗೂ ಇಂದಿನ ಕವಿಗಳನ್ನೂ ವಿಮರ್ಶಕರನ್ನೂ ತಲೆದೂಗುವಂತೆ ಮಾಡಿದೆ

ವಲ್ಲಿ ಭಾಸನು ಕಥಾಭಾಗವನ್ನು ಈ ರೀತಿ ಮಾರ್ಪಾಡಾಗಿ ಬದಲಾಯಿಸಿಕೊಂಡಿದ್ದಾನೆ ಇನ್ನೆಲ್ಲಿ ರಾಜನು ರಾಮನ ಅಭಿಷೇಕವನ್ನು ಪೂರೈಸಿಯೇಬಿಡುತ್ತಾನೋ—ಅಷ್ಟರಲ್ಲಿ ಅದನ್ನು ತಡೆಯಬೇಕೆಂಬುದೇ ಸಂಭ್ರಮ.—ತ್ವರೆ.

ಈ ಶ್ಲೋಕದಲ್ಲಿ ಬಂದಿರುವ ಎರಡು ಚ ಗಳು ಏಕಕಾಲದ ಕಾರ್ಯಾಚರಣೆ ಎಂಬ ವಿಶಿಷ್ಟಾರ್ಥವನ್ನು ಸೂಚಿಸುತ್ತವೆ. ಅಂದರೆ ಮಂಥರೆ ಬಂದು ಏನೋ ಕಿವಿಯಲ್ಲಿ ಉಸುರಿದಳು ತತ್ಕ್ಷಣ (ಅಭಿಷೇಕ ನಿಂತು) ನಾನು ರಾಜನಾಗಲಿಲ್ಲ ! ಎಂದರ್ಥ.

**प्रियं मे महाराज एव महाराजः आर्यपुत्र एव आर्यपुत्रः** — ನನಗೆ ಇದೇ ಇಷ್ಟ. ಮಹಾರಾಜನು ಮಹಾರಾಜನೇ. ಆರ್ಯಪುತ್ರನು ಆರ್ಯಪುತ್ರನೇ. ಆಶೆಯು ತೀವ್ರ ವಾಗಿದ್ದರೆ ನಿರಾಶೆಯಾದಾಗ ದುಃಖಜನಕವಾಗುವುದು. ಸೀತೆಯೂ ಪಟ್ಟಾಭಿಷೇಕ ಸೌಭಾಗ್ಯದಲ್ಲಿ ಉದಾಸೀನಳು. ಮಹಾರಾಣಿಯಾಗಿ ಮೆರೆಯಬೇಕೆಂಬ ಹಂಬಲವೇ ಆಕೆಗಿಲ್ಲ. ಆದುದರಿಂದಲೇ ಈ ಸಂತೋಷ.

महाश्चासौ राजा च (ಕರ್ಮಧಾರಯ) राजन्, अहन् ಮತ್ತು सखिन् ಶಬ್ದ ಗಳು ಸಮಾಸಾಂತ್ಯದಲ್ಲಿ ಬಂದರೆ अकारान्त ವಾಗುತ್ತವೆ. 'राजाहःसखिभ्यष्टच्'।

**मुक्तालङ्कारासि** — ನೀನು ಆಭರಣಗಳನ್ನೆಲ್ಲಾ ತೆಗೆದುಬಿಟ್ಟಿದ್ದಿ. ಪ್ರಿಯವಾರ್ತೆ ತಂದ ಚೇಟಿಯು ಮಡಿಲಿಗೆ ಆಭರಣಗಳನ್ನೆಲ್ಲಾ ಸುರಿದಿದ್ದಳು. ಅದರೆ ಅಭಿಷೇಕದ ಸಂದರ್ಭ ಸಮಾಚಾರಗಳನ್ನೇ ಚಿತ್ರಿಸ ಬಯಸದಲ್ಲಿ ಉಪಸ್ಥಿಸುವ ನೀತಿಯು ಕೌಶಲ ಅದನ್ನು ಸುಳ್ಳೆಂದು ತೋರಿಸುವ ರಾಮನ ಕೌಶಲ ಎರಡೂ ನರಸೋದರವಾಗಿವೆ.

**प्रत्यग्र····भवितव्यम्** — ಈಗತಾನೇ ಆಭರಣಗಳನ್ನು ತೆಗೆದಿರಬೇಕು. ಇದನ್ನು ಸಮರ್ಥಿಸಿ ಹೇಳುವ ರಾಮನ ಸೂಕ್ಷ್ಮದೃಷ್ಟಿ ಮುಂದಿನ ಶ್ಲೋಕದಲ್ಲಿ ಸುಂದರವಾಗಿ ಅಭಿವ್ಯಕ್ತವಾಗಿದೆ.

**ಶ್ಲೋಕ 8** (ವಸಂತತಿಲಕ) — कर्णौ त्वरापहृतभूषणभुग्नपाशौ (दृश्येते) हस्तौ संस्रंसिताभरणगौरतलौ च (दृश्येते) गात्रे आभरणभारनतानि एतानि स्थानानि (अद्यापि) समता नैव उपयान्ति तावच्च ।

ತ್ವರೆಯಿಂದ ಆಭರಣವನ್ನು ತೆಗೆದಿರುವ ಕಾರಣ ಕಿವಿಗಳ ಕೆಳಭಾಗದ ತುದಿ ಇನ್ನೂ ಮುದುಡಿದೆ. ಯಾವಾಗಲೂ ಕೈಯಲ್ಲಿದ್ದ ಸ್ವರ್ಣ ಕಡಗಾದಿಗಳನ್ನು ತೆಗೆದಿರು ವುದರಿಂದ ಕೈಯಿನ ಆ ಭಾಗ ಗೌರವರ್ಣದಿಂದ ಕೂಡಿದೆ. ಆಭರಣಗಳ ಭಾರ ಹೊತ್ತು ತಗ್ಗಾಗಿದ್ದ ನಿನ್ನ ಶರೀರದ ಸ್ಥಾನಗಳು ಸ್ವಾಭಾವಿಕ ಸಮತ್ವವನ್ನೇ ಇನ್ನೂ ಪಡೆದಿಲ್ಲ— ಈ ಲಕ್ಷಣಗಳೇ ನೀನು ಇದೇತಾನೇ ಆಭರಣಗಳನ್ನು ತೆಗೆದಿರಬೇಕೆಂಬುದನ್ನು ಸ್ಪಷ್ಟ ಮಾಡುತ್ತಿವೆ.

ಸೀತೆಯ ಸೌಂದರ್ಯ ಕೋಮಲತೆಗಳನ್ನು ಕವಿ ಈ ಶ್ಲೋಕದಲ್ಲಿ ಹೃದ್ಯವಾಗಿ ಧ್ವನಿತಗೊಳಿಸಿದ್ದಾನೆ. 'ಸ್ವಭಾವೋಕ್ತಿ' ಅಲಂಕಾರಕ್ಕೆ ಇದೊಂದು ಸುಂದರ ದೃಷ್ಟಾಂತ.

**त्वरापहृत····पाशौ** — त्वरया अपहृतानि भूषणानि ययोस्तौ त्वरापहृत-भूषणौ अत एव भुग्नः (वक्रतां गतः) पाशः (अधःप्रान्तभागः) ययोस्तौ।

**संस्रंसिताभरण····हस्तौ** — संस्रंसितानि यानि आभरणानि तैः गौरं तलं ययोस्तादृशौ।

**पारयति··· मन्त्रयितुम्** — ಆರ್ಯಪುತ್ರನಿಗೆ ಸುಳ್ಳನ್ನೂ ಸತ್ಯವೆಂಬಂತೇ ಹೇಳುವ ಕೌಶಲ ಎಷ್ಟು ಚೆನ್ನಾಗಿದೆ! (ಸೀತೆಯು ಕೇವಲ ಸರಸದಲ್ಲಿ ಆಡುವ ಮಾತು.)

**अहं आदर्शं धारयिष्ये** — ಅಭಿಷೇಕದ ವಿಷಯ ಅಲ್ಲಿಗೇ ನಿಂತುಹೋಯಿತು. ಇನ್ನು ಎಂದಿನಂತೆ ಸರಸ. ರಾಮನು ಕನ್ನಡಿ ತೋರಿಸಿ ಸೀತೆಗೆ ಅಲಂಕಾರ ಮಾಡಿಸಲು ತೊಡಗುವನು. ಕನ್ನಡಿಯಲ್ಲಿ ಸೀತೆಯನ್ನು ಗಮನಿಸಿ ಆಶ್ಚರ್ಯಗೊಳ್ಳುವನು. ಕನ್ನಡಿಯನ್ನು ಅವಳೇ ಕೈಯಲ್ಲಿ ಹಿಡಿದರೆ ಅವಳ ಕೋಮಲಕರಕ್ಕೆ ಆಯಾಸವಾಗಬಹುದಷ್ಟೇ. 'योऽस्याः करः श्राम्यति दर्पणेऽपि' ಎಂದು ಐದನೆಯ ಅಂಕದಲ್ಲಿ ರಾಮನೇ ಹೇಳಿದ್ದಾನೆ. ಕನ್ನಡಿ ಪ್ರಸಂಗ ಆಗಲೇ ನಾಟಕದಲ್ಲಿ ಅಭಿಷೇಕ ವೃತ್ತಾಂತವನ್ನು ತರಲು ಸಹಾಯಕವಾಗಿದ್ದಿತು. ಈಗ ಸೀತೆ ವಲ್ಕಲವನ್ನು ಧರಿಸಿರುವುದನ್ನು ರಾಮನಿಗೆ ತಿಳಿಸಲು ಸಹಾಯವಾಗಿದೆ.

**ಶ್ಲೋಕ 9** (ಅನುಷ್ಟುಪ್) — आदर्शे (त्वया *) वल्कलानि (धृतानि *) इव (भान्ति *) एते सूर्यरश्मयः किम्? (तव *) हसितेन (वल्कलानि इति *) परिज्ञातम्; (अत एव पृच्छामि *) इयं क्रीडा (वा *) नियमस्पृहा।

ಕನ್ನಡಿಯಲ್ಲಿ ನೀನು ವಲ್ಕಲವನ್ನು ಧರಿಸಿರುವಂತೆ ತೋರುತ್ತಿದೆ. ಇವೇನು ಸೂರ್ಯನ ಕಿರಣಗಳೇ? ಹ್ಞಾಂ, ನಿನ್ನ ಮಂದಹಾಸದಿಂದ ಇದು ಸೂರ್ಯರಶ್ಮಿಯಲ್ಲ; ಆದರಂತೆ ತೋರುತ್ತಿರುವ ನಾರುಮಡಿ ಎಂದು ಗೊತ್ತಾಗಿಹೋಯಿತು. ಸರಿ ಈಗ ಹೇಳು, ಇದೇನು ಹಾಸ್ಯವೋ ಅಥವಾ ತಪಸ್ಸು ಮಾಡುವ ಬಯಕೆಯೋ?

ಪುಟ 8

**ಶ್ಲೋಕ 10** (ಅನುಷ್ಟುಪ್) — विशेषतः परिहासे (वल्कलेषु याचितेषु) स्वयं मन्युं मा उत्पादय। हि (विशेषण) यदा मम शरीरार्धेन (भूतया) त्वया (एते वल्कलाः) पूर्वमेव आबद्धाः।

---

* ಭಾಸನ ಅನೇಕ ಶ್ಲೋಕಗಳಲ್ಲಿ ಈ ರೀತಿ ಪದಗಳನ್ನು ನಾವು ಅಧ್ಯಾಹಾರ ಮಾಡಿಕೊಂಡು ಅರ್ಥಮಾಡಿಕೊಳ್ಳಬೇಕಾದ ಸನ್ನಿವೇಶ ಬರುತ್ತದೆ. ಅದು ಅವನ ಶೈಲಿಯ ಒಂದು ಸ್ವರೂಪ.

'ಹಾಸ್ಯಕ್ಕಾಗಿ ವಲ್ಕಲಗಳನ್ನು ಕೊಡು' ಎಂದು ಕೇಳಿದ್ದಕ್ಕೆ ಅಷ್ಟು ದುಃಖಪಡಬಾರದು. ಏಕೆಂದರೆ ಪತ್ನಿಯಾಗಿ ನನ್ನ ಶರೀರಾರ್ಧವಾಗಿರುವ ನೀನು ಆಗಲೇ ಅವನ್ನು ಧರಿಸಿದ್ದೀಯಷ್ಟೆ!

**परिहासे** — ಹಾಸ್ಯಕ್ಕಾಗಿ ಮನ್ಯು ಶೋಕ (ವನ್ನು)

**शरीरार्धेन** — 'अर्धो वा एष आत्मनो यत् पत्नी' ಎಂದು ಶ್ರುತಿ ಸಾರುತ್ತಿದೆ.

मा उत्पाद्य = ಪ್ರತಿಷೇಧಾರ್ಥದಲ್ಲಿ मा ಉಪಯೋಗಿಸಿದಾಗ ಲ್ಯಪ್ ಪ್ರತ್ಯಯಾಂತವಾದ ಅವ್ಯಯವನ್ನು ಉಪಯೋಗಿಸಿರುವುದು ಅಪಾಣಿನೀಯ. मा उत्पाद्य· मा उत्पादय (मा कुरु)। वल्कल ಶಬ್ದವು ನಪುಂಸಕಲಿಂಗ. ಆದರೆ ಇಲ್ಲಿ ಪುಲ್ಲಿಂಗದಲ್ಲಿರುವುದು ವಿಶೇಷ. ಜೊತೆಗೆ ಇಲ್ಲಿ ಬಹುವಚನದಲ್ಲೂ ಬಂದಿದೆ.

**ಶ್ಲೋಕ 11** (ಅನುಷ್ಟುಪ್) — यदा नारीणां पुरुषाणां च रोदनध्वनिः (ईदृक्) निर्मर्यादः (संजायते) तदा (सर्वत्राहं) प्रभवामीति (प्रकाशयता) दैवेन मूले ताडितं इति सुव्यक्तम् ।

ಸ್ತ್ರೀ ಪುರುಷರು ಇಷ್ಟೊಂದು ಉಚ್ಚ ಧ್ವನಿಯಿಂದ ರೋದನಶಬ್ದವನ್ನು ಮಾಡುತ್ತಿರಬೇಕಾದರೆ ಸರ್ವತ್ರ ಪ್ರಭಾವಶಾಲಿಯಾದ ವಿಧಿ ಬುಡಕ್ಕೆ (ಮಹಾರಾಜನ ಪ್ರಾಣಕ್ಕೆ) ಪೆಟ್ಟುಹಾಕಿರಬೇಕೆಂಬುದು ಸ್ಪಷ್ಟ.

**दैवेन मूले ताडितम्** — ಸುಳಿಗಲ್ಲ-ಕೊಂಬೆಗಲ್ಲ. ಬುಡಕ್ಕೆ ಏಟುಬಿದ್ದಿದೆ. ಸರ್ವನಾಶವಾದಂತೆ ಸ್ತ್ರೀ ಪುರುಷರೆಲ್ಲರ ಈ ಹಾಹಾಕಾರವನ್ನು ಕೇಳಿದರೆ ಸರ್ವಪ್ರಧಾನನಾದ ಮಹಾರಾಜನ ಪ್ರಾಣಕ್ಕೇ ಧಕ್ಕೆ ಬಂದಂತಿದೆ. (ದಶರಥನು ಮಂಥರೆಯ ಮಾತಿನಂತೆ ತನ್ನ ಭವನಕ್ಕೆ ತೆರಳುವನು. ಅಲ್ಲಿಗೆ ಕೂಡಲೇ ಬಂದ ಕೈಕೇಯಿಯನ್ನು ಕಂಡು ಅವಳು ಕೋರಿದ ವರವನ್ನು ಕೇಳುತ್ತಲೇ ಮೂರ್ಛೆಹೋಗುವನು.) ಒಟ್ಟಿನಲ್ಲಿ ಏನೋ ಅನರ್ಥವಾಗಿರಬೇಕೆಂದು ರಾಮನು ಊಹಿಸುವನು.

**निर्मर्यादः** — ಮೇರೆ ಮೀರಿದ. ಅಂದರೆ ಅತ್ಯುಚ್ಚವಾದ. ध्वनिः ಎಂಬುದಕ್ಕೆ ವಿಶೇಷಣ.

**ಶ್ಲೋಕ 12** (ಅನುಷ್ಟುಪ್) — अरिः शरीरे प्रहरति, तथा स्वजनः हृदये प्रहरति। कस्य स्वजनशब्दः मे लज्जां उत्पादयिष्यति?

ಶತ್ರುವಿನ ಪೆಟ್ಟು ಶರೀರಕ್ಕೆ ಮಾತ್ರ (ಆದುದರಿಂದ ಅದನ್ನು ಸಹಿಸಬಹುದು). ಸ್ವಜನರ ಪೆಟ್ಟು ಹೃದಯಕ್ಕೆ ಬಿದ್ದು ದುಃಸಹವಾಗಿ ಶೋಕಕಾರಣವಾಗುತ್ತದೆ. ಇಂತಹ ಅಕಾರ್ಯ ಮಾಡಿ ನನಗೆ ಲಜ್ಜಾಕರರಾದ ಬಂಧುಗಳು ಯಾರು?

**उदर्केण गुणेनात्र भवितव्यम्** — ಈ ಅನರ್ಥಕ್ಕೆ ಕೈಕೇಯಿಯೇ ಮೂಲವೆಂದು ಕಂಚುಕಿಯು ಹೇಳುವನು. ತತ್ಕ್ಷಣ ರಾಮ 'ಹಾಗಿದ್ದರೆ ಇದು ಕೆಡುಕಲ್ಲ. ಮುಂದೆ ಏನೋ ಒಳ್ಳೆಯದಕ್ಕೇ ಇರಬೇಕು' ಎನ್ನುವನು.

**उदर्केण** — (ಮುಂದಿನ) ಭವಿಷ್ಯದ. ಕೈಕೇಯಿ ಎಂದಿಗೂ ವಿಪತ್ಕಾರಿಣಿಯಾಗ ಲಾರಳು. ಪರಂತು ಪುರೋಭಿವೃದ್ಧಿಗೆ ಕಾರಣಳಾಗುವಳು ಎಂಬ ದೃಢ ವಿಶ್ವಾಸ ರಾಮನಿಗೆ. कुपुत्रो जायेत क्वचिदपि कुमाता न भवति ಎಂಬುದೇ ಅವನ ಸ್ಪಷ್ಟನಿಲುವು,

**ಶ್ಲೋಕ 13** (ಅನುಷ್ಟುಪ್) — यस्याः भर्ता शक्रसमः या मया पुत्रवती च तस्याः कस्मिन् फले स्पृहा येन (सा) अकार्यं करिष्यति।

ಯಾರಿಗೆ ದೇವೇಂದ್ರನಿಗೆ ಸಮನಾದ ದಶರಥನೇ ಪತಿಯಾಗಿದ್ದಾನೆಯೋ ಯಾರಿಗೆ ನನ್ನಂತಹ ಪುತ್ರನಿದ್ದಾನೆಯೋ ಅಂತಹವಳು ಇದಕ್ಕಿಂತಲೂ ಹೆಚ್ಚಿನ ಇನ್ನೇನನ್ನು ಪಡೆಯಬೇಕೆಂಬ ಆಸೆಯಿಂದ ಅಕಾರ್ಯ ಮಾಡಿಯಾಳು ?

ಸತ್ಪತಿಯನ್ನೂ ಅವನಿಂದ ಸುಪುತ್ರನನ್ನೂ ಪಡೆಯಬೇಕೆಂಬುದು ಹಿಂದೂ ಮಹಿಳೆಯ ಉತ್ತಮೋತ್ತಮ ಆಸೆ. ಕೈಕೇಯಿಗಾದರೆ ಈ ಆಸೆ ಅನ್ಯಾದೃಶವಾಗಿ ಸಿದ್ಧಿಸಿದೆ. ಹೀಗೆ ಸರ್ವಥಾ ಸಂತೃಪ್ತಳಾದ ಅವಳಿಗೆ ಅಕಾರ್ಯ ಮಾಡಿ ಪಡೆಯಬಹು ದಾದ ಲಾಭ ಬೇರೇನೂ ಇರಲಾರದು—ಎಂಬುದು ರಾಮನ ಅಚಲ ನಂಬಿಕೆ.

ಪುಟ 9

**अलं उपहतासु....उपनिक्षेप्तुम्** — ಸ್ವಭಾವದುಷ್ಟವಾದ ಸ್ತ್ರೀಬುದ್ಧಿಯನ್ನು ನಿನ್ನ ಋಜುಬುದ್ಧಿಯೆಂದು ಭಾವಿಸಬೇಡ.

**ಶ್ಲೋಕ 14** (ಮಾಲಿನೀವೃತ್ತ) — पार्थिवस्य वनगमननिवृत्तिः तावत् एव मम बालभावः स एव, पितृपरवत्ता (च), प्रजानां नवनृपतिविमर्शे शङ्का नास्ति अथ मे भ्रातरः परिभोगैः न वञ्चिताः च।

ಪಟ್ಟಾಭಿಷೇಕ ನಿಂತುಹೋದದ್ದೇ ಒಳ್ಳೆಯದಾಯಿತೆಂದು ರಾಮನ ಅಭಿಪ್ರಾಯ. ಮೊಟ್ಟಮೊದಲಿಗೆ ದಶರಥ ಮಹಾರಾಜನು ಕಾಡಿಗೆ ಹೋಗುವುದು ತಪ್ಪಿತು. ಎರಡ ನೆಯದಾಗಿ ನಾನು ಇನ್ನೂ ಕೆಲಕಾಲ ತಂದೆಯ ಕಣ್ಣುಮುಂದಿನ ಮಗನಾಗಿ ರಾಜ್ಯದ ಜವಾಬ್ದಾರಿಯಿಲ್ಲದೆ ಅವರ ಆಶೀರ್ವಾದದ ನೆರಳಿನಲ್ಲಿಯೇ ನಿಶ್ಚಿಂತೆಯಿಂದ ಇರಬಹುದು. ಮೂರನೆಯದಾಗಿ ಹೊಸಬ ಹೇಗೆ ರಾಜ್ಯವಾಳುತ್ತಾನೆ ಎಂಬ ಶಂಕೆ ಸದ್ಯಕ್ಕೆ ಪ್ರಜೆಗಳಿಗೆ ತಪ್ಪಿತು. ಕೊನೆಯದಾಗಿ ನಾನು ಮಹಾರಾಜನಾಗಿದ್ದರೆ ನನಗೆ ಮೀಸ ಲಾಗಬಹುದಾದ ಕೆಲವು ಸುಖಾನುಭವಗಳು ತಮ್ಮಂದಿರಿಗೆ ತಪ್ಪುತ್ತಿತ್ತು. ಈಗ ಆ ವಂಚನೆಯೂ ಇಲ್ಲ.

**वनगमनानिवृत्तिः . . तावत्** — ರಾಮನಿಗೆ ತಂದೆಯ ಬಿತದಲ್ಲಿಯೇ ಆಸಕ್ತಿ. ಸೀತೆ ಮೊದಲು ವ್ಯಕ್ತಪಡಿಸಿದ ಭಾವನೆಯನ್ನೇ ರಾಮನೂ ಈಗ ವ್ಯಕ್ತಪಡಿಸುತ್ತಾನೆ. ಅಭಿಷೇಕ ತಪ್ಪಿದುದು ಸೀತಾ-ರಾಮರಿಬ್ಬರಿಗೂ ಸಂತೋಷವೇ. ಅವರಿಬ್ಬರಾಡುವುದೂ ಒಂದೇ ಮಾತು. **परवत्ता** — ಅಧೀನತೆ : ಈ ಶ್ಲೋಕದಲ್ಲಿ ಪೂರ್ವಾರ್ಧಕ್ಕೂ ಉತ್ತರಾರ್ಧಕ್ಕೂ ವಾಕ್ಯರಚನಾಸಾಮಂಜಸ್ಯವಿಲ್ಲ. ಇಂತಹ ಶ್ಲೋಕಗಳು ಭಾಸನಲ್ಲಿ ಅಪರೂಪವೇನಲ್ಲ.

**ಶ್ಲೋಕ 15** (ಅನುಷ್ಟುಪ್) — यदि शुल्के विपणितं राज्यं पुत्रार्थे (तया) याच्यते (तर्हि) अत्र तस्याः लोभः, भ्रातृराज्यापहरिणां अस्माकं लोभः न किम् ?

ಕೈಕೇಯಿಯ ಬೇಡಿಕೆಯ ಸ್ವರೂಪವನ್ನು ತಿಳಿದಮೇಲೂ ರಾಮನು ಈ ಔದಾರ್ಯದ ಮಾತುಗಳನ್ನೇ ಆಡುವನು. ಕನ್ಯಾಶುಲ್ಕವಾಗಿ ಕೊಟ್ಟಿದ್ದ ರಾಜ್ಯವನ್ನು ತಾಯಿಯಾದವಳು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ಬರಬೇಕೆಂದು ಅಪೇಕ್ಷಿಸಿದರೆ (ನಿಮ್ಮ ಪ್ರಕಾರ) ಅದು ಲೋಭ: ನಿಜವಾಗಿಯೂ ತಮ್ಮನಿಗೇ ಸೇರಬೇಕಾದ ರಾಜ್ಯವನ್ನು ನಾನು ಪಡೆಯುವುದರಲ್ಲಿದ್ದುದು ಅಲೋಭ! ಅವರ ಅಭಿಪ್ರಾಯ ತಪ್ಪು ಎಂದು ರಾಮನು ಪುಷ್ಟೀಕರಿಸುತ್ತಾನೆ.

**शुल्के विपणितं राज्यं** — ಕನ್ಯಾಶುಲ್ಕವಾಗಿ ಕೊಡಲ್ಪಟ್ಟ ರಾಜ್ಯ. ಕೈಕೇಯಿಯ ಸ್ವಾರ್ಥ, ದುರಾಶೆಯನ್ನು ರಾಮನಿಗೆ ಮನದಟ್ಟು ಮಾಡಿಸಬೇಕೆಂಬುದು ಕಂಚುಕಿಯ ಆಶಯ. ರಾಮನಿಗಾದರೆ, ತಪ್ಪು ಅವಳದಲ್ಲ; ತನ್ನದೇ ಎಂಬ ಭಾವನೆ.

**शुल्कम्** — ವಿವಾಹಕ್ಕಾಗಿ ಅಳಿಯನಿಂದ ಮಾವನು ಪಡೆಯುವ ವಸ್ತು. ಧನ ಮೊದಲಾದವು. शुल्कं विवाहार्थे जागातुः गृह्यते च यत् ।

ವಾಲ್ಮೀಕಿ ರಾಮಾಯಣದಲ್ಲಿಯೂ ರಾಮನೇ ಕನ್ಯಾಶುಲ್ಕವಾಗಿ ತಂದೆ ಕೊಟ್ಟಿದ್ದ ರಾಜ್ಯದ ವಿಚಾರವನ್ನು ಭರತನಿಗೆ ನೆನಪುಮಾಡುತ್ತಾನೆ. पुरा भ्रातः पिता नः स मातरं ते समुद्वहन् । मातामहे समाश्रौषीद्राज्यशुल्कमनुत्तमम् ।। (ಅಯೋಧ್ಯಾ ಕಾಂಡ ಸರ್ಗ 107, ಶ್ಲೋಕ 3).

**अतः परं . . . . न इच्छामि** — ಸಾರ : ಇನ್ನು ಮಾತೃನಿಂದೆಯನ್ನು ಕೇಳಲು ನಾನು ಸಿದ್ಧನಿಲ್ಲ. ಕಂಚುಕಿಯು ಕೈಕೇಯಿಯನ್ನು ಅಪರಾಧಿನಿಯೆಂದು ತಿಳಿಸಲು ಮತ್ತೆ ಬಾಯಿ ತೆಗೆಯುತ್ತಾನೆ. ರಾಮನಿಗೆ ಅದು ಒಗ್ಗದು. परिवाद=ನಿಂದೆ.

**ಶ್ಲೋಕ 16** (ಅನುಷ್ಟುಪ್) — राज्ञा शोकात् अवचनात् हस्तेनैव (अहं अथवा सर्वो जनः) विसर्जितः । (तत्र) किमपि अभिमतं मन्ये । नृपतिः मोहं गतश्च ।

ಕೈಕೇಯಿಯ ಮಾತಿನಿಂದ ಉಂಟಾದ ಸಂಕಟದಿಂದ ಮರುಮಾತನ್ನು ಆಡುವ
ಸಾಮರ್ಥ್ಯವೂ ಇಲ್ಲದೆ ಕೈಸನ್ನೆಯಿಂದ ಎಲ್ಲರನ್ನೂ ಕಳುಹಿಸಿ ದೊರೆ ಮೂರ್ಛೆ
ಹೋದನು. ವೇದನೆಯ ಅನುಭವದ ಜ್ಞಾನವನ್ನು ತಪ್ಪಿಸಿದ ಆ ಮೂರ್ಛೆಯಿಂದಲೇ
ಒಳ್ಳೆಯದಾಯಿತೆಂದು ಕಂಚುಕಿಯ ಅಭಿಪ್ರಾಯ.

**ಶ್ಲೋಕ 17** (ಅನುಷ್ಟುಪ್)— अक्षोभ्यः धैर्यसागरः लक्ष्मणः केन
क्षोभितः? येन रुष्टेन अग्रतः शताकीर्णमिव पश्यामि ।

ಎಂದಿಗೂ ಪ್ರಕ್ಷುಬ್ಧ ಸ್ಥಿತಿಯನ್ನು ಪಡೆಯದ ಚಿತ್ತಸ್ಥೈರ್ಯಶಾಲಿಯಾದ
ಲಕ್ಷ್ಮಣನೂ ಕ್ಷೋಭೆಗೊಳ್ಳುವಂತೆ ಮಾಡಿದವರಾರು ? ಅವನೊಬ್ಬ ಕೋಪಗೊಂಡರೆ
ಸಾಕು ; ನನಗೆ ಶತಶತ ಸಂಖ್ಯೆ ಕುಪಿತ ಜನಜಂಗುಳಿ ನನ್ನ ಮುಂದೆ ಇದ್ದಂತೆ ಅನುಭವ
ವಾಗುತ್ತದೆ.

येन रुष्टेन ಎಂಬುದಕ್ಕೆ ಬದಲಾಗಿ येन क्षुब्धेन ಎಂದಿದರೆ ಹೆಚ್ಚು ಸಮಂಜಸ
ವೆನಿಸುತ್ತಿತ್ತು.

ಪುಟ 10

**ಶ್ಲೋಕ 18** (ಹರಿಣೀ)— (त्वं) राज्ञः मोहं यदि न सहसे (तर्हि),
धनुः स्पृश ; मा दया, स्वजननिभृतः सर्वोऽपि मृदुः एवं परिभूयते । अथ न
रुचितम् (तर्हि) त्वं मां मुञ्च ; यतः वयं छलिताः (ततः) लोकं युवतिरहितं
कर्तुं अहं कृतनिश्चयः ।

ತಂದೆಯ ಮೂರ್ಛೆಹೋದ ವರ್ತಮಾನವನ್ನು ತಿಳಿದ ಲಕ್ಷ್ಮಣನು ಭುಗ್ಗನೆ
ಜ್ವಲಿಸಿದ ಬೆಂಕಿಯಂತೆ ಕೆರಳಿ ಬಿಲ್ಲನ್ನು ವಿಜೃಂಭಿಸುತ್ತಾ ಹಾರಾಡುತ್ತಾನೆ—ರಾಜನು
ಮೂರ್ಛೆಗೊಳ್ಳುವಂತೆ ಮಾಡಿದವರನ್ನು ಶಿಕ್ಷಿಸಲು ನಿನಗೆ ಇಷ್ಟವಿದ್ದರೆ ಸಿದ್ಧನಾಗು
ಧನುಸ್ಸನ್ನು ಧರಿಸು. ಅಂತಹವರ ವಿಚಾರದಲ್ಲೂ ದಯೆ ತೋರಬೇಡ. ನಮ್ಮವರೆಂದ
ನಂಬಿದರೆ ಅವರು ಮಾಡುವುದು ತಿಳಿದೇ ಇದೆ. ಮೆತ್ತನೆಯವರ ಪಾಡೆಲ್ಲ ಹೀಗೆಯೇ
ನಮ್ಮವರೇ ಆದ ಅವರನ್ನು ಶಿಕ್ಷಿಸಲು ನಿನಗೆ ಕಿರಿಕಿರಿ. ಆದರೆ ನನಗೆ ಅವಕಾಶಕೊಡು
ಯೌವನ ವಿಲಾಸದ ಕಪಟದಿಂದ ರಾಜನನ್ನು ವಶೀಕರಿಸಿಕೊಂಡು ನಮ್ಮನ್ನು ಈ ರೀತಿ
ಮೋಸಗೊಳಿಸಿರುವ ಹೆಂಗಸರ ಹೆಸರು ಲೋಕದಲ್ಲೇ ಇರದಂತೆ ಮಾಡಲು ಪಣತೊಟ್ಟ
ದ್ದೇನೆ.

**मा दया**=मा दया भवतु ಅಥವಾ मा दयां स्पृश ಎಂದು ಅರ್ಥ ಮಾಡಿಕೊಳ್ಳ
ಬೇಕು. स्वजननिभृतः —ಸ್ವಜನರೆಂದು ಅವರ ವಿಷಯದಲ್ಲಿ ವಿನೀತಭಾವನೆಯುಳ್ಳ
ವನು. युवतिरहितं लोकं कर्तुम् — ಲೋಕದಲ್ಲಿ ಸ್ತ್ರೀಜಾತಿಯೇ ಇಲ್ಲದಂತೆ
ಮಾಡಲು — ಲಕ್ಷ್ಮಣನು ಕೋಪದ ಭರದಲ್ಲಿ ಆಡುವ ಮಾತು ಇದು. ಸೀತೆಯೂ

ಕೌಸಲ್ಯೆಯೂ ಸುಮಿತ್ರೆಯೂ ಸ್ತ್ರೀಯೆಂಬುದನ್ನೂ ಲಕ್ಷ್ಮಣನಂತಹವನೂ ಮರೆಯು
ವಂತೆ ಮಾಡಿದೆ ಈ ಉಗ್ರ ಕೋಪ.

ವಾಲ್ಮೀಕಿ ರಾಮಾಯಣದಲ್ಲಿನ ಈ ಶ್ಲೋಕಗಳನ್ನು ನೋಡಿ : निर्मनुष्यामिम सर्वामयोध्यां मनुजर्षय....करिष्यामि । सर्वविव हनिष्यामि मृदुर्हि परिभूयते प्रोत्साहितोऽयं कैकेय्या स दुष्टो यदि नः पिता । अमित्रभूतो निःसङ्गं वध्यत वध्यतामिति' (ಅಯೋಧ್ಯಾಕಾಂಡ ಸರ್ಗ 21, ಶ್ಲೋಕ 10.12).

**सुमित्रामातः** — सुमित्रा माता यस्य सः ಭಾಸನಿಗೆ ಮಾತೃವಂಶದ ಮೇಲ
ಸಂಬೋಧಿಸುವುದು ಹೆಚ್ಚು ಪ್ರಿಯ.

**ಶ್ಲೋಕ 19** (ಅನುಷ್ಟುಪ್) — क्रमप्राप्ते राज्ये हृते सति, नृपे भु
शोच्यासने (सति); इदानीमपि संदेहः, इयं क्षमा किं निर्मनस्विता ?

(ತಂದೆಯ ನಂತರ ಜ್ಯೇಷ್ಠಪುತ್ರನಿಗೆ ಸಲ್ಲಬೇಕಾಗಿದ್ದ) ರಾಜ್ಯವೂ ಹೋಯಿತು
ತಂದೆಯೂ ಹೋಗುವುದರಲ್ಲಿದ್ದಾನೆ. ಇಷ್ಟಾದರೂ ಪ್ರತಿಕ್ರಿಯೆ ಕೈಗೊಳ್ಳಬೇಕ
ಬೇಡವೇ ಎಂಬ ಸಂದೇಹ ನಿನಗೆ. ಇದೇನು ನಿನ್ನ ಕ್ಷಮಾಗುಣವೋ ? ಅಭಿಮಾ
ಶೂನ್ಯತೆಯೋ ?

**शोच्यासने** — शोच्यं आसनं स्थितिः जीवनं वा यस्य (ಪರಂಜಪೆ).

**सुमित्रामातः अस्मद्राज्यभ्रंशो....** — ಲಕ್ಷ್ಮಣ, ನನಗೆ ರಾಜ್ಯ ತಪ್ಪಿ
ಎಂದೇ ನಿನ್ನ ಈ ಕೂಗಾಟ. ತಿಳುವಳಿಕೆ ಇಲ್ಲ ನಿನಗೆ.

**ಶ್ಲೋಕ 20** (ಅನುಷ್ಟುಪ್) — भरतः राजा भवेत् वयं वा तत्
समं ननु, यदि ते धनुःश्लाघा, तर्हि सः राजा परिपाल्यताम् ।

ಭರತ ರಾಜನಾಗಲೀ ಅಥವಾ ನಾವೇ ಆಗಲೀ ನಿನಗೆಲ್ಲ ಒಂದೇ. ವಿಶೇಷವೇನಿ
'ಕುಶಲನಾದ ಬಿಲ್ಗಾರ ನಾನು' ಎಂಬ ಅಭಿಮಾನ ನಿನಗಿದ್ದರೆ ರಾಜನಾದ ಭರ
ರಕ್ಷಣೆಯನ್ನೇ ಮಾಡು.

**न शक्नोमि रोषं धारयितुं** — "ಕೋಪವನ್ನು ತಡೆಯಲಾರೆ" ರಾಮನ
ನಯದ ಮಾತುಗಳು ಲಕ್ಷ್ಮಣನಿಗೆ ಹಿಡಿಸಲಿಲ್ಲ. ಅಣ್ಣನಿಗೆ ಎದುರುಮಾತನಾಡ
ಆರ. ಆದರಿಂದ ಅಲ್ಲಿಂದ ಹೊರಟುಬಿಟ್ಟ.

**ಶ್ಲೋಕ 21** (ಅನುಷ್ಟುಪ್) — लक्ष्मणस्य एषा ललाटपुटसंस्थिता भ्रु
त्रैलोक्यं दग्धुकामा नियती इव व्यवस्थिता ।

ಮೂರು ಲೋಕಗಳನ್ನು ದಹಿಸುವ ಇಚ್ಛೆಯಿಂದ ಕೂಡಿದ ವಿಧಿಯೆಂಬಂತೆ
್ಮಣನ ಹಣೆಯಲ್ಲಿ ಹುಬ್ಬು ಗಂಟಿಟ್ಟಿದೆ. ಲಕ್ಷ್ಮಣನ ಆ ಉಗ್ರ ಕೋಪಾಗ್ನಿ ಮೂರು
ೀಕಗಳನ್ನೂ ದಹಿಸಿ ಎಲ್ಲದನ್ನೂ ಆಹುತಿಯನ್ನಾಗಿ ತೆಗೆದುಕೊಳ್ಳುವಂತಿದ್ದಿತು.

**नियतीव** — ವಿಧಿ. ಈ ಶಬ್ದವು इ ಕಾರಾಂತವಾಗಿ नियतिः ಎಂದಿರಬೇಕಾಗಿ
ತು. ಕೆಲವರು वियति इव ಎಂದು ಪಾಠಾಂತರ ಮಾಡಿ ಕೋಪದಲ್ಲಿ ಲಕ್ಷ್ಮಣನ
ಬ್ಬು ಆಕಾಶ ತಾಗುತ್ತಿತ್ತು ಎಂದು ಅರ್ಥಮಾಡುತ್ತಾರೆ. वियति = ಆಕಾಶದಲ್ಲಿ
ಪ್ತಮಿ ಏಕವಚನ) ವ್ಯಾಕರಣಬದ್ಧವಾಗಿದ್ದರೂ ಈ ಅರ್ಥ ಅತ್ಯುತ್ಪ್ರೇಕ್ಷೆ ಆಗುತ್ತದೆ.

**ಶ್ಲೋಕ 22** (ವಸಂತತಿಲಕಾ) — सत्यमवेक्षमाणे ताते धनुर्नमयि (किम् ?
वा) स्वधनं हरन्त्यां मातरि (कैकय्यां) शरं मुञ्चानि (किम्) (उत) दोषेषु
ह्यं अनुजं (भरतं) हनानि (किं) (एतेषु) त्रिषु पातकेषु तव रोषणाय किं
वरम् ?

ತನ್ನ ಸತ್ಯಸಂಧತೆಯನ್ನು ಪಾಲಿಸಿದ ತಂದೆಯ ಮೇಲೆ ಬಿಲ್ಲನ್ನು ಉಪಯೋಗಿಸಲೆ?
ಥವಾ (ಶುಲ್ಕವಾಗಿ) ತನ್ನದಾದ ರಾಜ್ಯಧನವನ್ನು ಪಡೆಯುತ್ತಿರುವ ಮಾತೆ
ೇಯಿಯ ಮೇಲೆ ಬಾಣ ಬಿಡಲೇ? ಇದ್ಯಾವುದೂ ತಿಳಿಯದ ಮುಗ್ಧ ಭರತನನ್ನು
ಲ್ಲಲೆ?—ಈ ಮೂರು ಪಾತಕಗಳಲ್ಲಿ ಯಾವುದರಿಂದ ನಿನ್ನ ಕೋಪ ಶಮನ
ಂಡೀತು?

ಲಕ್ಷ್ಮಣನ ಉಗ್ರಕೋಪವನ್ನು ಕಂಡ ರಾಮನು ಅವನನ್ನು ಹಾಗೇ ಬಿಟ್ಟರೆ
ಗತ್ತನ್ನೇ ಆಹುತಿಗೊಳ್ಳಬಹುದೆಂದು ಭಾವಿಸಿ ಅವನಿಗೆ ಧರ್ಮದ ಸೂಕ್ಷ್ಮತೆಯನ್ನು
ಳಿಸಿ ಶಾಂತಗೊಳಿಸಲಿಚ್ಛಿಸುವನು.

धनुर्नमयि ಎಂಬುದು धनुर्नमतु ಎಂದಿದ್ದರೆ ಹೆಚ್ಚು ಸಮಂಜಸವಾಗಿತ್ತು.
ಯೆ ಎಂದೂ ಹೇಳಬಹುದು.

ಡಾ॥ ಗಣಪತಿಶಾಸ್ತ್ರಿಗಳು ताते = तातं प्रति, मयि स्वविषयं मामवलंब्य,
धनुः = चापप्रयोगकथैव नास्ति । ಎಂದು ಅರ್ಥಮಾಡುತ್ತಾರೆ.

किम् — (कतमत्) — ಯಾವ.

ಟ 11

**ಶ್ಲೋಕ 23** (ಅನುಷ್ಟುಪ್) — यत्कृते महति क्लेशे (सति) तस्मिन्
ाज्ये मे न मनोरथः । त्वया चतुर्दश वर्षाणि वने वस्तव्यं किल (तत् मे महान्
लेशः)

ಯಾವುದು ನನ್ನ ಹೃದಯದ ಅಪಾರ ಕ್ಲೇಶಕ್ಕೆ ಕಾರಣವೋ ಅದು ನಿನಗೆ ತಿಳಿಯದು. (ಕೇಳು) ರಾಜ್ಯದ ಬಗ್ಗೆ ನನಗೆ ಅಭಿಲಾಷೆಯಿಲ್ಲ. ನೀನು ಹದಿನಾಲ್ಕು ವರ್ಷಗಳ ಕಾಲ ಕಾಡಿನಲ್ಲಿ ವಾಸಮಾಡಬೇಕಾಗಿ ಬಂತಲ್ಲ ಎಂದು ನನ್ನ ದುಃಖ.

ಅಣ್ಣನ ಮೇಲಣ ಲಕ್ಷ್ಮಣನ ಮಮತೆ, ಅನುರಾಗ, ಈ ಶ್ಲೋಕದಲ್ಲಿ ಹೃದಯಸ್ಪರ್ಶಿಯಾಗಿ ಮೂಡಿಬಂದಿದೆ.

**निवेदितमप्रभुत्वम्** — 'ದೌರ್ಬಲ್ಯ ವ್ಯಕ್ತವಾಯಿತು' ಕಾಡಿಗೆ ನಾನು ಹೋಗಬೇಕು ಅಂದ ಇಷ್ಟಕ್ಕೇ ಪೂಜ್ಯ ತಂದೆಯವರಿಗೆ ಜ್ಞಾನ ತಪ್ಪಿತೆ ? ಅಂತಹ ಪ್ರಭುವಿಗೆ ಇಷ್ಟು ದೌರ್ಬಲ್ಯವೇಕೆ ? ಎಂಬ ಅರ್ಥ.

**ಶ್ಲೋಕ 24** (ಅನುಷ್ಟುಪ್) — अनया दत्तान् वल्कलान् मङ्गलार्थं आनय तावत्। अन्यैः नृपैः नैव आप्तं, न उपपादितं धर्मं (अहं अधुना) करोमि।

ಈ ಅವದಾತಿಕೆ ಕೊಟ್ಟ ವಲ್ಕಲಗಳನ್ನು ಶುಭಕಾರ್ಯವೆಸಗುವುದಕ್ಕೋಸ್ಕರ ನನಗೆ ಕೊಡು. ಬೇರೆ ರಾಜರುಗಳಿಂದ ಬಾಲ್ಯದಲ್ಲಿ ಆಚರಿಸಲ್ಪಡದ ಧರ್ಮವನ್ನು ಈಗ ಮಾಡುತ್ತೇನೆ.

**मङ्गलार्थं** — ಪಿತೃವಾಕ್ಯ ಪರಿಪಾಲನೆಗಾಗಿ ಮಾಡುವ ವನವಾಸ ರಾಮನಿಗೆ ಮಂಗಲಾರ್ಥ ಕಾರ್ಯವೇ.

**न उपपादितम्** — ವಾರ್ಧಕ್ಯದಲ್ಲಿ ವನವಾಸಕೈಗೊಳ್ಳಬೇಕಾಗಿತ್ತು. ಆದುದರಿಂದ 'ಬಾಲ್ಯದಲ್ಲಿ ಆಚರಿಸಲ್ಪಡದ' **धर्मम्** ಕಾಡಿಗೆ ಹೋಗುವ ಮೂಲಕ ತಂದೆಯನ್ನು ಸತ್ಯಸಂಧನನ್ನಾಗಿ ಪ್ರತಿಷ್ಠಿಸುವ ಪವಿತ್ರ ಕರ್ತವ್ಯ. ತಂದೆ ಎಂತಹ ಪವಿತ್ರ ಸನ್ನಿವೇಶದಲ್ಲೂ ಸತ್ಯಭ್ರಷ್ಟನಾಗಬಾರದೆಂಬ ರಾಮನ ಶ್ರದ್ಧೆ ಪ್ರಶಂಸನೀಯವಾಗಿದೆ.

**ಶ್ಲೋಕ 25** (ಮಾಲಿನೀ) — तारा राहुदोषेऽपि शशाङ्कं अनुसरति। वनवृक्षे पतति (सति) लता च भूमिं याति। करेणुः पङ्कलग्नं गजेन्द्रं न त्यजति तस्मात् साऽपि (त्वया साकं) व्रजतु, चरतु धर्मम्। हि नार्यः भर्तृनाथाः।

ಗ್ರಹಣಸಮಯದಲ್ಲೂ ತಾರೆ ಶಶಾಂಕನನ್ನು ಬಿಟ್ಟಿರುವುದಿಲ್ಲ. ಹಿಂಬಾಲಿಸುತ್ತಾಳೆ. ವನವೃಕ್ಷ ಬಿದ್ದಾಗ ಕೂಡ ಅದನ್ನು ಆಲಂಗಿಸಿದ್ದ ಬಳ್ಳಿಯೂ ನೆಲಕ್ಕೆ ಬೀಳುತ್ತದೆ. ಕೆಸರಿನಲ್ಲಿ ಹೂತುಹೋದ ಗಂಡಾನೆಯನ್ನು ಹೆಣ್ಣಾನೆ ಪರಿತ್ಯಜಿಸುವುದಿಲ್ಲ. ಹಾಗೆಯೇ ಅತ್ತಿಗೆಯೂ ನಿನ್ನೊಡನೆ ತೆರಳಲಿ. ಅಲ್ಲಿಯೂ ನಿನ್ನ ಸಹಧರ್ಮಿಣಿಯಾಗಿರಲಿ. ಪತಿಗೆ ಪತಿಯೇ ಗತಿ.

**करेणुः** — ಹೆಣ್ಣಾನೆ. पङ्कलग्नम् — ಕೆಸರಿನಲ್ಲಿ ಸಿಕ್ಕಿಕೊಂಡಿರುವ.

ಪುಟ 12

**ಶ್ಲೋಕ 26** (ಅನುಷ್ಟುಪ್) — निर्योगात् भूषणात् माल्यात् (अपि च) सर्वेभ्यः मे अर्धं प्रदाय (त्वया इदानीं) एकाकिना चीरं बद्धं ; चीरे मत्सरी असि खलु ।

ವಸ್ತ್ರ, ಭೂಷಣ, ಮಾಲೆ ಎಲ್ಲದರಲ್ಲಿಯೂ ನನಗೆ ಅರ್ಧವನ್ನೇ ಕೊಡುವ ನೀನು (ಈಗ ನನ್ನನ್ನು ಬಿಟ್ಟು) ಒಬ್ಬನೇ ನಾರುಮಡಿ ಧರಿಸಿದ್ದೀಯಲ್ಲ. ಈ ನಾರುಮಡಿಯ ವಿಚಾರದಲ್ಲಿ ಮಾತ್ರ ಸ್ವಾರ್ಥಿಯೆನಿಸಿದ್ದಿ. (ಅಂದರೆ ನನಗೂ ಕೊಡು. ನಾನೂ ನಿನ್ನೊಡನೆ ವನವಾಸಕ್ಕೆ ಬರುತ್ತೇನೆಂದು ಭಾವ.)

**निर्योग** = ವಸ್ತ್ರವೇ ಮೊದಲಾದ ಉಡುಪು. भूषण = ಆಭರಣ. जातौ एकवचनम् ಎಂದು ತಿಳಿಯಬೇಕು.

**ಶ್ಲೋಕ 27** (ಅನುಷ್ಟುಪ್) — त्वं एका मे गुरोः पादशुश्रूषां कर्तुम् इच्छसि ; (तस्य) दक्षिणः पादः तव एव ; सव्यः पादः मम भविष्यति ।

ನಮ್ಮ ಅಣ್ಣನ ಸೇವೆಯನ್ನು ನೀವೊಬ್ಬರೇ ಮಾಡಬೇಕೇ ? ನೀವು ಬಲಗಾಲಿನ ಸೇವೆ ಮಾಡಿದರೆ ನಾನು ಎಡಗಾಲಿನ ಸೇವೆ ಮಾಡುವೆ. शुश्रूषा — श्रु ಧಾತುವಿನ ಇಚ್ಛಾರ್ಥಕ ರೂಪ. श्रोतुं इच्छा ಅಂದರೆ ಒಬ್ಬರು ಹೇಳಿದ್ದನ್ನು ಕೇಳಿ ಅದರಂತೆ ಶಿರಸಾವಹಿಸಿ ನಡೆಸುವುದು.

ದಕ್ಷಿಣಪಾದ ಸೀತೆಗೆ ; ಸವ್ಯಪಾದ ಲಕ್ಷ್ಮಣನಿಗೆ, ಅಂದರೆ 'ಇಬ್ಬರೂ ಸೇವೆ ಸಲ್ಲಿಸೋಣ' ಎಂಬುದು ತಾತ್ಪರ್ಯಾರ್ಥ.

**ಶ್ಲೋಕ 28** (ಅನುಷ್ಟುಪ್) — तपःसङ्ग्रामकवचं नियमद्विरदाङ्कुशः इन्द्रियाश्वानां खलीनं, धर्मसारथिः (इदं) गृह्यताम् ।

ತಪೋರೂಪ ಸಂಗ್ರಾಮದಲ್ಲಿ ಧರಿಸಬೇಕಾದ ಕವಚ. ನಿಯಮ (ವ್ರತ) ವೆಂಬ ಗಜವನ್ನು ವಶೀಕರಿಸಲು ಬೇಕಾದ ಅಂಕುಶ. ಇಂದ್ರಿಯಗಳೆಂಬ ಅಶ್ವಗಳಿಗೆ ಕಡಿವಾಣ. ಧರ್ಮರಥಕ್ಕೆ ಸಾರಥಿ—ಈ ನಾರುಮಡಿ.

**द्विरदः** — द्वौ रदौ (दन्तौ) यस्य सः (बहुव्रीहि) ಆನೆ. इन्द्रियाश्वानां— ಪಂಚೇಂದ್ರಿಯಗಳನ್ನು ಅಶ್ವಗಳಿಗೆ ಹೋಲಿಸುವುದು ರೂಢಿ. (इन्द्रियाणि हयानाहुः)

**धर्मसारथिः** — धर्मस्य सारथिः ಹೀಗೆ ಸೀತೆಯನ್ನು ಲಕ್ಷ್ಮಣನೂ ಲಕ್ಷ್ಮಣನನ್ನು ಸೀತೆಯೂ ಶಿಫಾರಸುಮಾಡಿಕೊಂಡು ಎಲ್ಲರೂ ನಾರುಮಡಿಯುಟ್ಟು ಒಂದೇ ಜೀವದ ಮೂರು ದೇಹಗಳಂತೆ ತತ್ಕ್ಷಣ ಕಾಡಿಗೆ ಹೊರಡುತ್ತಾರೆ.

**अवगुण्ठनम्**—ಸ್ತ್ರೀಯರು ಮುಖವನ್ನು ಮುಚ್ಚಿಕೊಳ್ಳುವಂತೆ ಹೊದ್ದುಕೊಳ್ಳುವ ತೆಳುವಸ್ತ್ರ.

**ಶ್ಲೋಕ 29** (ಇಂದ್ರವಜ್ರಾ) — (हे जनाः) भवन्तः बाष्पाकुलाक्षैः वदनैः एतत् (मम) कलत्रं स्वैरं पश्यन्तु ; हि नार्यः यज्ञे विवाहे व्यसने च निर्दोषदृश्या भवन्ति ।

ಎಲೈ ಜನರೇ, ಈ ನನ್ನ ಪತ್ನಿಯನ್ನು ಕಣ್ಣೀರಿನ ಮುಖವುಳ್ಳ ನೀವು ಯಥೇಷ್ಟವಾಗಿ ನೋಡಿರಿ. ಏಕೆಂದರೆ ಯಜ್ಞದಲ್ಲಿ ವಿವಾಹದಲ್ಲಿ ವ್ಯಸನದಲ್ಲಿ ಪರಸ್ತ್ರೀದರ್ಶನವು ತಪ್ಪೇನಲ್ಲ.

**ರಾಮಾಯಣ** — व्यसनेषु न कृच्छ्रेषु न युद्धेषु न स्वयंवरे ।
न ऋतौ नो विवाहे वा दर्शनं दुष्यते स्त्रियः ॥

ಪುಟ 13

**ಶ್ಲೋಕ ३० (ಪ್ರಹರ್ಷಿಣೀ)** — वधूसहायं सौभ्रात्रव्यवसितलक्ष्मणानुयात्रं ते वनगमनं श्रुत्वा (महाराजः) उत्थाय क्षितितलरेणुरूषिताङ्गः, जीर्णः कान्तारद्विरद इव (द्रष्टुं) उपयाति ।

ಪತ್ನಿಯೊಡನೆಯೂ ಲಕ್ಷ್ಮಣನೊಡನೆಯೂ ನೀನು ವನವಾಸಕ್ಕೆ ಹೊರಟಿದ್ದನ್ನು ಕೇಳಿ ಮಹಾರಾಜನು ನೆಲದ ಮೇಲೆ ಹೊರಳಿದ್ದ ಕಾರಣ ಧೂಳಿನಿಂದ ಕಶ್ಮಲಗೊಂಡ ಶರೀರದಿಂದ ಕಾಡಾನೆಯಂತೆ ನಿನ್ನನ್ನು ಕಾಣಲು ಬರುತ್ತಿದ್ದಾನೆ.

**सौभ्रात्र. . . .अनुयात्रम्** — शोभनस्य भ्रातुर्भावः सौभ्रात्रम् (भ्रातृप्रेम) तेन व्यवसितः कृतोद्योगः लक्ष्मणः, तस्य अनुयात्रा अनुगमनं यस्मिन् (तथाभूतं ते वनगमनम्) —ಎಂ. ಆರ್. ಕಾಳೆ.

**कान्तारद्विरदः** — ಕಾಡಾನೆ

**ಶ್ಲೋಕ 31** (ಅನುಷ್ಟುಪ್) — चीरमात्रोत्तरीयाणां दृश्यं किम् ? अस्मासु गतेषु (सत्सु) राजा नः शिरःस्थानानि पश्यतु ।

ಕೇವಲ ವಲ್ಕಲಧಾರಿಗಳಾಗಿ ವನವಾಸಕ್ಕೆ ಹೋಗಲಿರುವ ನಮ್ಮನ್ನು ನೋಡುವುದೇನು ? ಆದುದರಿಂದ ನಾವು ರಾಜನು ಬರುವುದನ್ನು ಕಾಯಬೇಕಾಗಿಲ್ಲ. ನಾವು ಹೋದಮೇಲೆ ರಾಜನು ನಮ್ಮ ವಸತಿಸ್ಥಾನಗಳನ್ನು ನೋಡಲಿ.

**शिरःस्थानानि** — प्रधानावसथानि ಎಂದು ಗಣಪತಿಶಾಸ್ತ್ರಿಗಳೂ प्रधाननिवास-स्थानानि ಎಂದು ಎಂ. ಆರ್. ಕಾಳೆಯವರೂ ಅರ್ಥಮಾಡಿದ್ದಾರೆ.

ರಾಮನು ಈ ರೀತಿ ತಂದೆಯನ್ನು ಕಾಣದೇ ಹೊರಡುವುದು ಉಚಿತವೇ. ಅವರ ಚೀರಧಾರಣೆಯನ್ನು ಕಂಡು ರಾಜನ ದುಃಖ ಮಹಾಕಳಿಸುವುದು. ಅಷ್ಟೇ. ಅಪರಿಹಾರ್ಯವಾದ ವನವಾಸಕ್ಕೆ ಮುನ್ನ ರಾಜನ ದುಃಖಸ್ಥಿತಿಯನ್ನು ಮತ್ತೆ ಮತ್ತೆ ಮರಳಿಸಬಾರದೆಂಬುದೇ ರಾಮನ ನಿಲುವು.

ರಾಮಾಯಣದಲ್ಲಿರುವ ಈ ಶ್ಲೋಕಗಳೂ ಮನೋಜ್ಞವಾಗಿವೆ.

तिष्ठेति राजा चुक्रोश याहि याहीति राघवः ।
सुमन्त्रस्य बभूवात्मा चक्रयोरिव चान्तरा ।।
नाश्रौषमिति राजानमुपालब्धोऽपि वक्ष्यसि ।
चिरं दुःखस्य पापिष्ठमिति रामस्तमब्रवीत् ।।

ಅಯೋಧ್ಯಾಕಾಂಡ ಸರ್ಗ 40, ಶ್ಲೋ 46-47—ಶ್ರೀಮದ್ವಾಲ್ಮೀಕಿ ರಾಮಾಯಣದಲ್ಲಿನ ಅಯೋಧ್ಯಾಕಾಂಡದ ಮೊದಲ 40 ಸರ್ಗಗಳ ವಸ್ತುವೇ ಈ ಅಂಕದ ಕಥಾವಸ್ತು. ಆದರೆ ಕವಿ ಇದರಲ್ಲಿ ಹಾಸ್ಯದ ವಲ್ಕಲಪ್ರಸಂಗದಿಂದ ಆರಂಭಿಸಿ ಅದು ಗಂಭೀರ ವನವಾಸಪ್ರಸಂಗಕ್ಕೆ ಸಂಬಂಧ ಪಡೆಯುವಂತೆ ಮಾಡಿ ತನ್ನ ಕಲಾಕೌಶಲವನ್ನು ಮೆರೆಸಿದ್ದಾನೆ. ಒಂದೊಂದು ಪ್ರಸಂಗವೂ ಪರಸ್ಪರ ಪೂರಕವೂ ಮನೋಜ್ಞವೂ ಆಗಿದೆ.

ಪುಟ 14

## ಅಂಕ ೩

**ಸ್ಥಳ** — ದಶರಥಮಹಾರಾಜನ ಅರಮನೆಗೆ ಸೇರಿದ ಸಮುದ್ರಗೃಹ.

**ಕಾಲ**—ಸೀತಾ ರಾಮ ಲಕ್ಷ್ಮಣರು ಅರಣ್ಯಕ್ಕೆ ತೆರಳುವ ಐದು ದಿನಗಳ ನಂತರ—ಚೈತ್ರ ಪೌರ್ಣಿಮಾ.

[ ಸೀತೆ ಮತ್ತು ಲಕ್ಷ್ಮಣರೊಡನೆ ವನಕ್ಕೆ ತೆರಳಲು ಅನುವಾದ ರಾಮನನ್ನು ಹಿಂತಿರುಗಿಸಲೂ ಆಗದ ಮತ್ತು ಅವರನ್ನು ಹಿಂಬಾಲಿಸಿ ಹೋಗಲೂ ಸಾಧ್ಯವಾಗದ ದಶರಥ ಮಹಾರಾಜನು ಪುತ್ರಶೋಕವಿಹ್ವಲನೂ ಮತಿವಿಕಲನೂ ಆಗಿ ಸಮುದ್ರಗೃಹದಲ್ಲಿ ಮರಣಶಯ್ಯೆಯಲ್ಲಿರುತ್ತಾನೆ. ಪೌರರ ಮಾತು ಹಾಗಿರಲಿ. ಆನೆ. ಕುದುರೆ ಮೊದಲಾದ ಪ್ರಾಣಿಗಳೂ ಸಹ ರಾಮನ ವಿರಹದುಃಖದಿಂದ ಕೂಡಿ ತಮ್ಮ ತಮ್ಮ ಆಹಾರಪಾನೀಯಗಳನ್ನೂ ಒಲ್ಲದೆ ಶೋಕತಪ್ತವಾಗಿವೆ. ರಾಮಾದಿಗಳನ್ನು ವನದಲ್ಲಿ ಬಿಟ್ಟು ಬಂದ ಸಾರಥಿ ಸುಮಂತ್ರನೊಡನೆ ನಿರಾಶೆಗೊಂಡು ಜ್ಞಾನಾಜ್ಞಾನದಲ್ಲಿರುವ ದಶರಥನು ಪುತ್ರರಾದ ರಾಮ ಲಕ್ಷ್ಮಣ ಮತ್ತು ಸೊಸೆಯಾದ ಸೀತೆಯ ವಿಚಾರಗಳನ್ನೇ ವಿಚಾರಿಸುತ್ತಾ ತಾನೂ ಅವರ ಹೆಸರುಗಳನ್ನು ಮತ್ತೆ ಮತ್ತೆ ಹೇಳುತ್ತಾ ಕೊನೆಯುಸಿರನ್ನು ಎಳೆದು ಅನ್ಯಾದೃಶ ಪುತ್ರಪ್ರೇಮವನ್ನು ಮೆರೆಸುತ್ತಾನೆ. ಈ ಅಂಕ ಪೂರ್ತಿ ಕರುಣರಸದ ಒಂದು ಹೊನಲಾಗಿದೆ. ]

**प्रतिहारव्यापृताः** — ದ್ವಾರರಕ್ಷಕರು. अप्रमत्ताः — ಎಚ್ಚರಿಕೆಯುಳ್ಳವರಾಗಿ (ಜಾಗರೂಕರಾಗಿ). समुद्रगृहके — ಬೇಸಿಗೆಯ ತೀವ್ರ ತಾಪವನ್ನು ನಿವಾರಿಸಿಕೊಳ್ಳಲು

ಅರಮನೆಗಳ ಉದ್ಯಾನವನದಲ್ಲಿ ನೀರಿನ ಚಿಲುಮೆ ಮೊದಲಾದುವುಗಳಿಂದ ಸಿದ್ಧಪಡಿಸಿರುವ ತಂಪಾದ ಸುಂದರ ಗೃಹ. 'मुद्राभिः सहितं गृहं समुद्रगृहम्—समुद्रगृहं नाम प्रासादारामे निदाघोष्मनिवारणार्थं जलोद्गारयन्त्रसनाथं क्रीडागृहम् ।'

—(ಎಂ. ಆರ್. ಕಾಳೆ)

**ಶ್ಲೋಕ 1** (ವಸಂತತಿಲಕಾ) — युगक्षयसन्निकर्षे चलन् मेरुः इव, शोषं व्रजन् अप्रमेयः महोदधिः इव, मण्डलमात्रलक्ष्यः पतन् सूर्यः इव, शोकात् भृशं शिथिलदेहमतिः नरेन्द्रः ।

ಪ್ರಳಯಕಾಲ ಸನ್ನಿಹಿತವಾಗಲು ಹೊರಳುತ್ತಿರುವ ಮೇರುವಿನಂತೆ, ಬತ್ತಿಹೋಗುತ್ತಿರುವ ಅನಂತಸಾಗರದಂತೆ, (ತೇಜಃಸಂಹಾರದ ದೆಸೆಯಿಂದ) ಮಂಡಲ ಮಾತ್ರ ಕಾಣಿಸುತ್ತಾ ಕೆಳಕ್ಕೆ ಬೀಳುತ್ತಲಿರುವ ಸೂರ್ಯನಂತೆ ಮಹಾರಾಜನು ಶೋಕದಿಂದ ಅತ್ಯಂತ ಶಿಥಿಲವಾದ ಶರೀರ ಮತ್ತು ಬುದ್ಧಿಗಳುಳ್ಳವನಾಗಿದ್ದಾನೆ.

ಈ ಶ್ಲೋಕದಲ್ಲಿ ದಶರಥನ ಮಹಾನ್‌ವ್ಯಕ್ತಿತ್ವವನ್ನೂ, (ಇಂದಿನ) ದಾರುಣ ಸ್ಥಿತಿಯನ್ನೂ ವರ್ಣಿಸಲು ಕವಿ ಗಂಭೀರವಾದ ಉಪಮಾನಗಳನ್ನು ಹೇಳಿದಿದ್ದಾನೆ.

**युगक्षयसन्निकर्षे** — ಪ್ರಳಯಕಾಲ ಸಮೀಪಿಸಲು. अप्रमेयः — ಇಷ್ಟೇ ಎಂದು ಅಳೆಯಲಸಾಧ್ಯವಾದ प्रमातुं शक्यः प्रमेयः न प्रमेयः अप्रमेयः।

**महोदधिः** — ಸಮುದ್ರ — "उदकानि अस्मिन् धीयन्त इति उदधिः" ('ಉದಕ' ಶಬ್ದಕ್ಕೆ 'ಉದ' ಆದೇಶವಾಗಿ ಬಂದಿದೆ). महांश्चासौ उदधिश्च — महोदधिः (ಕರ್ಮಧಾರಯ).

**अप्रमेयः** ಮತ್ತು **मण्डलमात्रलक्ष्यः** — ಈ ಎರಡೂ नरेन्द्रः ಎಂಬುದಕ್ಕೂ ವಿಶೇಷಣಗಳನ್ನಾಗಿ ತೆಗೆದುಕೊಂಡರೆ ಚೆನ್ನ. ಅಪ್ರಮೇಯನಾಗಿದ್ದ ದಶರಥ ಇಂದು ಭಗ್ನತೇಜನಾಗಿ ಬಿದ್ದಿದ್ದಾನೆ. चलन्, व्रजन् ಮತ್ತು पतन् ಇವು ಕ್ರಮವಾಗಿ चल् व्रज् ಮತ್ತು पत् ಧಾತುಗಳ ವರ್ತಮಾನ ಕೃದಂತ, ಪುಲ್ಲಿಂಗ, ಏಕವಚನ ರೂಪ. ಈ ಶ್ಲೋಕದಲ್ಲಿ महोदधिः ಎನ್ನುವುದಕ್ಕೆ अप्रमेयः ಎಂದೂ, सूर्यः ಎನ್ನುವುದಕ್ಕೆ मण्डलमात्रलक्ष्य, ಎಂದೂ ವಿಶೇಷಣವಿದೆ. ಆದರೆ मेरुः ಎನ್ನುವುದಕ್ಕೆ ಇಲ್ಲ. ಇದು ಕ್ರಮಭಂಗದೋಷ.

**ಶ್ಲೋಕ 2** (ಶಾರ್ದೂಲವಿಕ್ರೀಡಿತ) — नागेन्द्राः यवसाभिलाषविमुखाः वाजिनः सास्रेक्षणाः हेषाशून्यमुखाः, त्यक्ताहारकथाः सुदीनवदनाः सवृद्धवनिताबालाश्च अमी पौराः जनाः उच्चैः क्रन्दन्तः सदारसहजः रामः यया दिशा याति तामेव पश्यन्ति ।

ಆನೆಗಳು ಹುಲ್ಲನ್ನು ತಿನ್ನವು, ಕುದುರೆಗಳು ಕಣ್ಣೀರು ತುಂಬಿ ಕೆನೆಯವು. ಊಟ ತಿಂಡಿಗಳ ಮಾತೇ ಇಲ್ಲದೆ ದೈನ್ಯವದನರಾಗಿರುವ ಈ ಪೌರರು — (ವೃದ್ಧರೂ, ಹೆಂಗ

ಯರೂ, ಬಾಲಕರೂ) ಎಲ್ಲರೂ — ಗಟ್ಟಿಯಾಗಿ ಅಳುತ್ತಲಿರುವವರಾಗಿ ಸೀತಾ ಲಕ್ಷ್ಮಣ ರೊಡಗೂಡಿ ಯಾವ ದಿಕ್ಕಿನಿಂದ ರಾಮನು ಅರಣ್ಯಕ್ಕೆ ತೆರಳಿದನೋ ಅದೇ ದಿಕ್ಕನ್ನೇ ನೋಡುತ್ತಲಿದ್ದಾರೆ.

ರಾಮನಿಲ್ಲದ ಅಯೋಧ್ಯೆ ಶೋಕಗ್ರಸ್ತವಾಗಿದೆ. ಆನೆ ಕುದುರೆಗಳೂ ದುಃಖ ಮಗ್ನವಾಗಿವೆ. ಪ್ರಜೆಗಳಂತೂ ರಾಮನು ಹೋದ ದಿಕ್ಕನ್ನೇ ನೋಡಿ ನೋಡಿ ಪರಿತಪಿಸುತ್ತಿದ್ದಾರೆ. ಗಟ್ಟಿಯಾಗಿ ಅಳುತ್ತಿದ್ದಾರೆ.

**यवसाभिलाषविमुखाः** — (i) घासग्रासपराङ्मुखाः —ಡಾ॥ ಗಣಪತಿಶಾಸ್ತ್ರಿ.

ಹುಲ್ಲನ್ನು ತಿನ್ನುವ ಆಸೆಯನ್ನು ತೊರೆದು. (ii) तृणग्रासेच्छया विमुखाः ।

—ಎಂ. ಆರ್. ಕಾಳೆ.

सास्रेक्षणाः — ಕಣ್ಣೀರಿನಿಂದ ಕೂಡಿರುವ. अस्रैः सहिते सास्रे, सास्रे ईक्षणे येषां ते (सास्रनयनाः). हेषाशून्यमुखाः — ಕೆನೆಯದ. हेषा — ಕುದುರೆಯ ಕೆನೆಯುವ ಶಬ್ದ. त्यक्ताहारकथाः — त्यक्ता आहारकथा यैस्ते — ಊಟ, ತಿಂಡಿಯ ಮಾತನ್ನೇ ಬಿಟ್ಟು. सदारसहजः—दारैः (सीतया) सहजेन (भ्रात्रा लक्ष्मणेन) च सहितः । दाराः — ಹೆಂಡತಿ. (ಪುಲ್ಲಿಂಗ ನಿತ್ಯಬಹುವಚನ ಶಬ್ದ) " दारा स्यास्तु कुटुम्बिनी (ಅಮರ).

**पुत्रविरहः. . . .अन्वास्यमानः** — ತಮ್ಮ ಶೋಕವೇ ಅಗಾಧವಾಗಿದ್ದರೂ ಹೇಗೋ ತಡೆದುಕೊಂಡಿರುವ ಸುಮಿತ್ರಾ, ಕೌಸಲ್ಯೆಯರಿಂದ ಸಮಾಧಾನಗೊಳಿಸಲ್ಪಡು ತ್ತಿರುವವನಾಗಿ (संस्थापयन्तीभ्यां—समाश्वासयन्तीभ्यां ।)

**ಶ್ಲೋಕ 3** (ಅನುಷ್ಟುಪ್) — उत्थाय च उत्थाय च मुहुः हा हा इति उच्चैः विलपन् पतति । यया (दिशा) रघूद्वहः यातः तां दिशां एव पश्यति ।

(ಕೈಲಾಗದೆ) ಮತ್ತೆ ಮತ್ತೆ ಏಳುತ್ತಾನೆ : ಅಯ್ಯೋ ಅಯ್ಯೋ ಎಂದು ಗಟ್ಟಿಯಾಗಿ ಅಳುತ್ತಾ ಮತ್ತೆ ಮತ್ತೆ ಬೀಳುತ್ತಾನೆ. ರಾಮನು ಯಾವ ಮಾರ್ಗವಾಗಿ ಹೋದನೋ ಅದೇ ದಿಕ್ಕನ್ನೇ ನೋಡುತ್ತಾನೆ.

**रघूद्वहः** — ರಘು ಶ್ರೇಷ್ಠ — (रघूणां उद्वहः) ।

**मिश्रविष्कम्भक** — ಪ್ರಧಾನವಲ್ಲದ ಪಾತ್ರಗಳ ಸಂಭಾಷಣೆಯ ಮೂಲಕ ನಾಟಕದ ಪೂರ್ವವೃತ್ತಾಂತಕ್ಕೂ ಮುಂದಿನ ವೃತ್ತಾಂತಕ್ಕೂ ಸಂಬಂಧವನ್ನು ಸೂಚಿಸುವ ಒಂದು ನಾಟಕಾಂಶ. ಪಾತ್ರಗಳು ಮಧ್ಯಮವಾದರೆ ಇಬ್ಬರೂ ಸಂಸ್ಕೃತದಲ್ಲಿ ಸಂಭಾಷಣೆ ನಡೆಸುವರು. ಆಗ ಅದು **शुद्धविष्कम्भक**ವೆನಿಸುವುದು. ಎರಡೂ ನೀಚಪಾತ್ರ ಗಳಾದರೆ ಅವರು ಪ್ರಾಕೃತದಲ್ಲಿ ಸಂಭಾಷಣೆ ನಡೆಸುವರು. ಆಗ ಅದು **प्रवेशक**

ವಾಗುವುದು. ಒಂದು ಪಾತ್ರ (ಮಧ್ಯಮ ಪಾತ್ರವಾಗಿ) ಸಂಸ್ಕೃತದಲ್ಲೂ ಇನ್ನೊಂದು (ನೀಚಪಾತ್ರವಾಗಿ) ಪ್ರಾಕೃತದಲ್ಲೂ ಸಂಭಾಷಣೆ ನಡೆಸಿದರೆ ಅದು **मिश्रविष्कम्भक.**

वृत्तवर्तिष्यमाणानां कथांशानां निदर्शकः।
संक्षिप्तार्थस्तु विष्कम्भो मध्यपात्रप्रयोजितः।
एकानेककृतः शुद्धः संकीर्णो नीचमध्यमैः॥

—ಧನಂಜಯನ ದಶರೂಪಕ.

ಪುಟ 15

**ಶ್ಲೋಕ 4** (ವಸಂತತಿಲಕಾ) — हा जगतां नयनाभिराम वत्स राम, हा सलक्ष्मणसर्वगात्र, वत्स लक्ष्मण, हा पतिस्थितचित्तवृत्ते साध्वि मैथिलि, हा हा बत, मे तनूजाः वनं गताः किल।

ಅಯ್ಯೋ! ನಯನರಮಣೀಯನಾದ ಮಗು, ರಾಮ: ಅಯ್ಯೋ ಉತ್ತಮ ಪುರುಷಲಕ್ಷಣಯುಕ್ತನಾದ ಮಗು, ಲಕ್ಷ್ಮಣ. ಅಯ್ಯೋ ಪತಿವ್ರತೆಯಾದ ಸೀತೆ. ಅಯ್ಯೋ, ಕಷ್ಟ ನನ್ನ ಮಕ್ಕಳೆಲ್ಲಾ ಕಾಡುಪಾಲಾದರಲ್ಲಾ !

ಈ ಶ್ಲೋಕದಲ್ಲಿನ ಪದವಿನ್ಯಾಸ ಕರುಣರಸಪೋಷಕವಾಗಿ ಮನೋಜ್ಞವಾಗಿದೆ.

बत—कष्टम्, तनूजाः ಮಕ್ಕಳು. (ಇಲ್ಲಿ ಸೀತೆಯೂ ಸೇರುತ್ತಾಳೆ), मैथिली—ಸೀತೆ — मिथिलायाः राजा—मैथिलः तस्य अपत्यं स्त्री मैथिली — (मैथिलि—ಸಂಬೋಧನ ಪ್ರಥಮೈಕವಚನ).

पत्यौ स्थिता चित्तवृत्तिः यस्याः, तस्याः सम्बुद्धिः।

**चित्रमिदं भोः....द्रष्टुमिच्छामि** — ತನ್ನ ಅಣ್ಣನ ಮೇಲಿನ ಪ್ರೇಮದಿಂದ ತಂದೆಯಾದ ನನ್ನನ್ನೂ ನಿರ್ಲಕ್ಷಿಸಿರುವ ಲಕ್ಷ್ಮಣನನ್ನು ನೋಡಬೇಕೆನ್ನುವ ಆಸೆ ನನಗೆ ಇನ್ನೂ ಇದೆಯಲ್ಲ — ಏನಿದು ಆಶ್ಚರ್ಯ.

**ಶ್ಲೋಕ 5** (ಅನುಷ್ಟುಪ್) — रामेण अपि परित्यक्तः, लक्ष्मणेन च गर्हितः, लोके अयशोभाजनं अहं त्वया अपि परित्यक्तः (अस्मि)।

ರಾಮನಿಂದ ತ್ಯಕ್ತನಾದ, ಲಕ್ಷ್ಮಣನಿಂದ ದೂಷಿಸಲ್ಪಟ್ಟ, ಲೋಕದಲ್ಲೇ ಅಪಕೀರ್ತಿಯ ಪಾತ್ರನಾದ ನನ್ನನ್ನು ನೀನೂ ದೂರಮಾಡಿದೆಯಾ ?

**ಶ್ಲೋಕ 6** (ಅನುಷ್ಟುಪ್) — हे सत्यसन्ध, जितक्रोध, विमत्सर, जगत्प्रिय, गुरुशुश्रूषणे युक्त, मे प्रतिवाक्यं प्रयच्छ।

ರಾಮನ ಗುಣಗಳನ್ನು ನೆನೆಯುತ್ತಾನೆ. ನನ್ನ ಕೂಗಿಗೆ ಉತ್ತರ ಕೊಡು ಎಂದು ಹಲುಬುತ್ತಾನೆ ದಶರಥ. ಕಾಡಿನಲ್ಲಿರುವವರನ್ನು ಊರಿನಲ್ಲಿ ಕೂಗಿದರೆ ಏನು

ಪ್ರಯೋಜನ ! ವಾಲ್ಮೀಕಿರಾಮಾಯಣದ ಬಾಲಕಾಂಡದ ಮೊದಲನೇ ಸರ್ಗದಲ್ಲೂ, ಅಯೋಧ್ಯಾಕಾಂಡದ ಮೊದಲನೆಯ ಸರ್ಗದಲ್ಲೂ ಶ್ರೀರಾಮನ ಗುಣಗಳು ಪ್ರಧಾನವಾಗಿ ವರ್ಣಿತವಾಗಿವೆ.

**मयि गुर्वनुवृत्तिः** — ವಿನಯಶಾಲಿ. ವಿಧೇಯ. गुर्वी अनुवृत्तिः यस्य सः अथवा गुर्वी च असौ अनुवृत्तिश्च। तृणवदगणितराज्यैश्वर्यः—तृणवत् अगणितः राज्यैश्वर्यं येन सः (ಬಹುವ್ರೀಹಿ)।

**वृद्धं पितरं परित्यज्य....ते कृत्यम्** — 'ವೃದ್ಧಪಿತೃಪರಿತ್ಯಾಗದಲ್ಲಿ ಪರಿಣಾಮಗೊಂಡ, ಪಿತೃವಾಕ್ಯಪರಿಪಾಲನಾಧರ್ಮ' ಅಸಂಬದ್ಧ : ಅದು ನಿನ್ನನ್ನು ಹೇಗೆ ಧನ್ಯನನ್ನಾಗಿ ಮಾಡೀತು ? ಆದರಿಂದ ನೀನು ಕೃತಕೃತ್ಯನಾಗಲಾರೆ ಎಂಬ ಭಾವ.

**ಶ್ಲೋಕ 7** (ಆರ್ಯಾ) — रामः सूर्य इव गतः, दिवसः सूर्य इव लक्ष्मणः (रामं) अनुगतः। सूर्यदिवसावमाने छाया इव सीता न दृश्यते।

ರಾಮನು ಸೂರ್ಯನಂತೆ (ಕಣ್ಣುಗಳಿಗೆ) ಅಗೋಚರನಾಗಿ ಹೋದ ; ಹಗಲು ಸೂರ್ಯನ ಹಿಂದೆಯೇ ಹೋಗುವಂತೆ. ಲಕ್ಷ್ಮಣನು ರಾಮನ ಹಿಂದೆ ಹೋದ. ಸೂರ್ಯ ಹಗಲು ಅಗೋಚರವಾಗಿ ಹೋದಾಗ ಛಾಯೆ (ನೆರಳು) ಕಾಣದಾಗವಂತೆ, ರಾಮ ಲಕ್ಷ್ಮಣರು ಹೊರಟುಹೋಗಲು ಸೀತೆಯೂ ಕಾಣದಾದಳು — (ಉಪಮಾಲಂಕಾರ).

ಭಾಷಾಲಾಲಿತ್ಯಕ್ಕೂ, ಶೈಲಿಯ ಸರಳತೆಗೂ ಈ ಶ್ಲೋಕ ಉಚಿತ ಉದಾಹರಣೆಯಾಗಿದೆ.

**कृतान्तहतक** — ಪಾಪಿ ವಿಧಿಯೇ.

**ಶ್ಲೋಕ 8** (ಅನುಷ್ಟುಪ್) — वयं अनपत्याः, रामः अन्यस्य महीपतेः पुत्रः, कैकेयी वने व्याघ्री च—त्वया (एतत्) त्रयं किं न कृतम् ?।

(ಅಯ್ಯೋ ವಿಧಿಯೇ), ನಾನು ಅಪುತ್ರನಾಗುವಂತೆ, ರಾಮನು ಮತ್ತಾರಾದರೂ ರಾಜನ ಹೊಟ್ಟೆಯಲ್ಲಾದರೂ ಹುಟ್ಟುವಂತೆ, ಈ ಕೈಕೇಯಿ ಹೆಣ್ಣು ಹುಲಿಯಾಗಿ ಹುಟ್ಟಿ ಕಾಡಿನಲ್ಲಿರುವಂತೆ—ಈ ಮೂರನ್ನೂ ನೀನೇಕೆ ಮಾಡದೇ ಹೋದೆ ?

ಇದು ದಶರಥನ ಆಶಂಸೆ. अनपत्याः — ಮಕ್ಕಳಿಲ್ಲದವರು. नास्ति अपत्यं येषां — ते (ಬಹುವ್ರೀಹಿ). ಮಕ್ಕಳೇ ಇಲ್ಲದವರು ಇಂತಹ ಸಂಕಟಕ್ಕೆ ಬೀಳಬೇಕಾದುದಿಲ್ಲವೆಂದು ದಶರಥನ ಅಭಿಪ್ರಾಯ.

**रामः पुत्रो अन्यस्य महीपतेः** — ನಾನು ದೌರ್ಭಾಗ್ಯಶಾಲಿ, ರಾಮ ಭಾಗ್ಯಶಾಲಿಯಾದ ಯಾರಾದರೂ ಬೇರೆ ರಾಜನ ಮಗನಾಗಿರಬಾರದಾಗಿತ್ತೆ ! ಎಂದು ರಾಮನ ವಿಚಾರದಲ್ಲಿ ಮರುಕ.

**अपि व्याप्ता च कैकेयी** — ಕೈಕೇಯಿಯಿಂದ ಪ್ರಿಯರಿಗೆ ತಕ್ಕ ವಾಸಸ್ಥಳ ಅರಮನೆಯಲ್ಲ; ಕಾಡು. (ಪರ್ಯಾಯೋಕ್ತಿ ಅಲಂಕಾರ): ಕೈಕೇಯಿಯನ್ನು ದೂಷಿಸುವ ವ್ಯಂಗ್ಯವಿದು

ಪುಟ 16

**ಶ್ಲೋಕ 9** (ಅನುಷ್ಟುಪ್) — मुषितेन्द्रियः अहं हि ज्वलनोपमं (अत एव) अत्यन्तं असह्यं दुःखं सोढुं एव वा संहर्तुं वा न शक्नोमि।

ದುರ್ಬಲೇಂದ್ರಿಯನಾದ ನನಗಾದರೆ ಬೆಂಕಿಯಂತೆ ತೀವ್ರವಾಗಿ ದಹಿಸುತ್ತಲಿರುವ ಈ ಪುತ್ರವಿರಹದ ಶೋಕವನ್ನು ಸಹಿಸಲೂ ಸಾಧ್ಯವಿಲ್ಲ ; ನಿಗ್ರಹಿಸಲೂ (ಗೆಲ್ಲಲೂ) ಸಾಧ್ಯವಿಲ್ಲ

**मुषितेन्द्रियः** — ಸಾಮರ್ಥ್ಯವನ್ನು ಕಳೆದುಕೊಂಡ ಜ್ಞಾನ ಹಾಗೂ ಕರ್ಮ ಇಂದ್ರಿಯಗಳು ಉಳ್ಳವನು. मुषितानि (उपहतशक्तीनि) इन्द्रियाणि (ज्ञानकर्मेन्द्रियाणि) यस्य सः (तथाभूतः)। —ಡಾ॥ ಗಣಪತಿಶಾಸ್ತ್ರಿ.

**ಶ್ಲೋಕ 10** (ಅನುಷ್ಟುಪ್) — रघुकुलश्रेष्ठः रामः येन (लक्ष्मणेन) वने नक्तंदिवं छायया इव अनुगम्यते, सः तव पुत्रः (लक्ष्मणः) एव सत्पुत्रः।

ಕಾಡಿನಲ್ಲಿ ಹಗಲೂ ರಾತ್ರಿಯೂ ಎಡಬಿಡದೆ, ರಘುವಂಶಶ್ರೇಷ್ಠನಾದ ರಾಮನನ್ನು ನೆರಳಿನಂತೆ ಹಿಂಬಾಲಿಸುತ್ತಿರುವ ನಿನ್ನ ಮಗನೇ 'ಸತ್ಪುತ್ರ'.

**नक्तंदिवं** — ರಾತ್ರಿ ಹಗಲು. नक्तं च दिवा च। ಎರಡು ಅವ್ಯಯಗಳು ಸೇರಿ ಆಗಿರುವ ಸಮಾಸ.

**ईदृग्विधा . . . . विधिरनतिक्रमणीयः** — ಇಂತಹ ಮಹಾಪುರುಷರೂ ಇಂತಹ ಆಪತ್ತಿಗೆ ಸಿಕ್ಕುತ್ತಾರೆ, ಎಂದಮೇಲೆ ವಿಧಿಯನ್ನು ಮೀರಲಾಗದೆಂಬುದೇ ಸಿದ್ಧಾಂತ. ("सुव्यक्तं प्रभवामीति मूले दैवेन ताडितः" ಅಂಕ 1, ಶ್ಲೋಕ 11) ಎಂದು ಆಗಲೇ ರಾಮನು ಹೇಳಿದ್ದಾನೆ. ಈ ಮಾತನ್ನು ಕಂಚುಕಿ ತಾನೇ ಹೇಳಿಕೊಳ್ಳುತ್ತಾನೆ.

ಪುಟ 17

**अथ किम्** — ಹೌದು.

**ಶ್ಲೋಕ 11** (ಅನುಷ್ಟುಪ್) — यदि रथः शून्यः प्राप्तः (तर्हि) मम मनोरथः भग्नः, (अभूत्), स रथः नूनं (दशरथं) मां नेतुं कालेन प्रेषितः (इति मन्ये)।

ರಥವು ರಾಮಾದಿಗಳನ್ನು ಕರೆತರದೆ ಬರಿದಾಗಿಯೇ ಬಂದಿದ್ದರೆ ನನ್ನ ಆಸೆಯೆಲ್ಲ ಪುಡಿಯಾಯಿತು. ಅಷ್ಟೇ ಅಲ್ಲ, ಆ ರಥ ಹಾಗೆ ಬರಿದಾಗಿ ಬಂದಿರಬೇಕಾದರೆ ನನ್ನನ್ನು ಮೃತ್ಯುಲೋಕಕ್ಕೆ ಒಯ್ಯಲು ಯಮನೇ ಅದನ್ನು ಕಳುಹಿಸಿರಬೇಕೆಂಬುದು ಸ್ಪಷ್ಟ.

**ಶ್ಲೋಕ 12** (ಅನುಷ್ಟುಪ್) — वने विचरन्तं रामं ये यथासुखं स्पृशन्ति, वने तटाकपरिवर्तिनः ते वाताः धन्याः खलु ।

ಅರಣ್ಯದಲ್ಲಿ ಸಂಚರಿಸುತ್ತಲಿರುವ ರಾಮನನ್ನು ಸುಖಕರವಾಗಿ ಆಲಂಗಿಸುತ್ತಾ, ಕಮಲಗಳಿಂದ ತುಂಬಿದ ಸರೋವರಗಳ ಸಮೀಪದಲ್ಲಿ ಸುಳಿದಾಡುವ ತಂಗಾಳಿಯೇ 'ಧನ್ಯ'. (ತನಗೆ ಅವಕಾಶ ತಪ್ಪಿದುದರಿಂದ ದಶರಥನ ಅಭಿಪ್ರಾಯವಿದು.)

स्पृशन्ति — ಆಲಂಗಿಸುತ್ತಾ 'आलिङ्गन्ति' (ಗಣಪತಿಶಾಸ್ತ್ರಿ).

**ಶ್ಲೋಕ 13** (ಶಾಲಿನೀ) — रामे स्नेहात् जातबाष्पाकुलेक्षाः चिन्तादीनाः शोकमंदग्धदेहाः एते भृत्याः स्वानि कर्माणि हित्वा विक्रोशन्तं पार्थिवं गर्हयन्ति ।

ರಾಮನಲ್ಲಿದ್ದ ತಮ್ಮ ಪ್ರೇಮದಿಂದ ಕಣ್ಣೀರು ತುಂಬಿದ ಕಣ್ಣುಗಳುಳ್ಳ, ಚಿಂತೆಯಿಂದ ದೀನರಾದ, ಶೋಕಸಂತಪ್ತರಾದ ಈ ಸೇವಕರೆಲ್ಲ ತಮ್ಮ ತಮ್ಮ ನಿಯಮಿತ ಉದ್ಯೋಗವನ್ನು ಬಿಟ್ಟು ಅಳುತ್ತಿರುವ ರಾಜನನ್ನೇ ನಿಂದಿಸುತ್ತಿದ್ದಾರೆ.

**जात....ईक्षाः** — जातेन बाष्पेण आकुले ईक्षे येषां ते (ಬಹುವ್ರೀಹಿ). 'क्व मे ज्येष्ठो रामः....' 'ನನ್ನ ಹಿರಿಯ ಮಗ ರಾಮನೆಲ್ಲಿ?' ಹೀಗೆ ಕೇಳು ತ್ತಿದ್ದಂತೆಯೇ, ಅವನನ್ನು "ನನ್ನ ಪುತ್ರ" ನೆಂದು ಕರೆದುಕೊಳ್ಳುವ ಅರ್ಹತೆ ತನಗಿಲ್ಲ ವೆಂದು ಭಾವಿಸಿ—'क्व ते ज्येष्ठो रामः' ಎಂದು ಮಾತನ್ನು ಬದಲಾಯಿಸಿ ಮುಂದು ವರಿಸುತ್ತಾನೆ.

**ಶ್ಲೋಕ 14** (ಶಿಖರಿಣೀ) — हे प्रियसुत, ते ज्येष्ठः सुतः रामः क्व? गुरुजने निरतिशयभक्तिः विदेहानां भर्तुः दुहिता सा क्व? सौमित्रिः वा क्व? आसन्नमरणं सकलजनशोकार्णवकरं हतपितृकं मां ते किमपि आहुः किम्?

ಎಲೈ ಪುತ್ರಪ್ರಿಯನೆ, ನಿನ್ನ ಜ್ಯೇಷ್ಠಪುತ್ರ ರಾಮನೆಲ್ಲಿ? ಪಾತಿವ್ರತ್ಯದಿಂದ ಶೋಭಿಸುವವಳೂ, ಹಿರಿಯರಲ್ಲಿ ಗೌರವ ತುಂಬಿರುವವಳೂ ಆದ ವಿದೇಹರಾಜಸುತೆ ಸೀತೆ ಎಲ್ಲಿ? ಲಕ್ಷ್ಮಣನೆಲ್ಲಿ? ಮೃತ್ಯುವನ್ನು ಸಮೀಪಿಸಿರುವ ಎಲ್ಲರನ್ನೂ ಶೋಕಸಮುದ್ರಕ್ಕೆ ದೂಡಿರುವ ನಿರ್ಭಾಗ್ಯನಾದ ಈ ತಂದೆಗೆ ಅವರು ಏನಾದರೂ ಹೇಳಿಕಳುಹಿಸಿದ್ದಾರೆಯೇ?

**प्रियः सुतः यस्य सः** — तत्सम्बुद्धिः (ಬಹುವ್ರೀಹಿ).

**गुरुजने निरतिशयभक्तिः** — ಅತ್ತೆ ಮಾವಂದಿರಲ್ಲಿ ಪೂರ್ಣಭಕ್ತಿಯುಳ್ಳವಳು (ಸೀತೆಗೆ ವಿಶೇಷಣ). हतपितृकं—'ಅಯೋಗ್ಯನಾದ ತಂದೆ'—'ನಿರ್ಭಾಗ್ಯ ತಂದೆ'—ಇಲ್ಲಿ 'क' ಕುತ್ಸಿತಾರ್ಥದ್ಯೋತಕವಾಗಿದೆ. 'कुत्सायां कन्' सौमित्रिः वा क्व? ಮತ್ತು ಲಕ್ಷ್ಮಣನೆಲ್ಲಿ? '**वा**' ಎಂಬ ಪದಕ್ಕೆ ಇಲ್ಲಿ '**च**' ಎಂಬ ಅರ್ಥ. (—वा विकल्पोपमानयोः समुच्चये च). मा मैवममङ्गलवचनानि भाषिष्टाः—'आसन्नमरणं' ಎಂದು ಹೇಳಿದ ದಶರಥನ ವಚನ 'ಅಮಂಗಲ'ವೆಂದು ಸುಮಂತ್ರನ ಅಭಿಪ್ರಾಯ.

ಪುಟ 18

**नायं तपस्विनामुचितः प्रश्नः** — ಇದು (ಹೌದು. ಅಸಂಗತವಾದ ಮಾತಾಡಿದೆ) ತಪಸ್ವಿಗಳ ವಿಚಾರದಲ್ಲಿ ಉಚಿತವಾದ ಪ್ರಶ್ನೆಯಲ್ಲ. ದಶರಥನು ಶೋಕಭರದಲ್ಲಿ ಸನ್ನಿ ಹಿಡಿದವನಂತೆ, ಮಾತಿನ ರೀತಿಯನ್ನು ಬದಲಾಯಿಸುತ್ತಾನೆ. 'अपि तपस्विनां तपो वर्धते' (ನಗರ ಭೋಗಗಳನ್ನು ತೊರೆದು ಅರಣ್ಯದಲ್ಲಿ) ತಪಸ್ವಿಗಳಾದ ಅವರ ತಪಸ್ಸು ವೃದ್ಧಿಗೊಳ್ಳುತ್ತಿದೆಯೆ ? ಎಂದು ಯಾರೋ ಋಷಿಗಳ ವಿಚಾರವನ್ನು—ಪ್ರಶ್ನೆ ಮಾಡುವಂತೆ ಗಂಭೀರವಾಗಿ ಕೇಳುತ್ತಾನೆ. 'अपि' ಶಬ್ದವು ವಾಕ್ಯದ ಪ್ರಾರಂಭದಲ್ಲಿ ಬಂದಾಗ ಪ್ರಶ್ನೆಯನ್ನು ಸೂಚಿಸುವ किम् ಎಂಬ ಅರ್ಥವನ್ನು ಪಡೆಯುತ್ತದೆ.

श्रोत्ररसायनः — ಕಿವಿಗೆ ಅಮೃತ ಸೂಸುವ. बहुवल्कलाशरीरालंकृतः — ಇಲ್ಲಿ ಬಹು ಎಂಬ ಪದಕ್ಕೆ ಏನೂ ಅಂತಹ ವಿಶಿಷ್ಟಾರ್ಥವಿಲ್ಲ. हृदयातुरौषधैः—ಹೃದಯದ ಪೀಡೆಗೆ ಔಷಧವಾಗುವ (ಅವರ ಹೆಸರುಗಳು). ಅವರ ಹೆಸರುಗಳನ್ನು ಎಷ್ಟೋ ಸಲ ಕಿವಿಯಿಂದ ಕೇಳಿ ಎಷ್ಟು ಸಾರಿ ಬಾಯಿನಲ್ಲಿ ಹೇಳಿದರೂ ಅಷ್ಟು ಸಂತೋಷವೆಂಬ ಭಾವ

**तथाम . . . . मे प्रतिभाति** — ರಾಮನ ಹೆಸರನ್ನು ಕೇಳಿದುದರಿಂದ ರಾಮನನ್ನು ಆಲಂಗಿಸಿಕೊಂಡಂತೆ ತೋರುವುದು.

**रामो लक्ष्मणो वैदेहीत्ययक्रमः** — 'ರಾಮ, ಲಕ್ಷ್ಮಣ, ಸೀತೆ' ಎಂದು ಹೇಳುವ ಕ್ರಮ ಸರಿಯಾಗಿಲ್ಲ. ಇಲ್ಲಿಯವರೆಗಾಗಲೇ ದಶರಥನು ನಾಲ್ಕು ಸಲ ಈ ಅಂಕದಲ್ಲಿ 'ರಾಮ, ಲಕ್ಷ್ಮಣ, ಸೀತೆ' ಎಂಬ ಕ್ರಮದಲ್ಲೇ ಅವರನ್ನು ನೆನೆದಿದ್ದಾನೆ. ಈಗ ಈ ಕ್ರಮ ಸರಿಯಲ್ಲವೆಂದು ಹೇಳಲು 'ಸೀತೆಯ ರಕ್ಷಣೆ'ಯನ್ನು ಮನಸ್ಸಿನಲ್ಲಿಟ್ಟು ಕೊಂಡು ಎಂದು ಭಾವಿಸಬೇಕು. ಕೋಮಲೆಯೂ, ಮುಗ್ಧೆಯೂ ಆದ ಸೀತೆ ಕಾಡಿ ನಲ್ಲಿ ಕೊನೆಯಲ್ಲಿರಬಾರದು. ರಾಮ ಮೊದಲಲ್ಲಿ. ಲಕ್ಷ್ಮಣ ಕೊನೆಯಲ್ಲಿ. ಸೀತೆ ಮಧ್ಯದಲ್ಲಿ ಇರುವುದು ಹೆಚ್ಚು ಕ್ಷೇಮಕರವೆಂದು ಅವನ ಅಭಿಪ್ರಾಯ. ವಾಲ್ಮೀಕಿ ರಾಮಾಯಣದಲ್ಲಿ ಮುಂದೆ ಲಕ್ಷ್ಮಣ. ಹಿಂದೆ ರಾಮ, ಮಧ್ಯೆ ಸೀತೆ ಹೋದರೆಂದು ಹೇಳಲಾಗಿದೆ.

अग्रतो गच्छ सौमित्रि सीता त्वामनुगच्छतु ।
पृष्ठतोऽनुगामिष्यामि सीतां त्वां चानुपालयन् ।।

(ಅಯೋಧ್ಯಾಕಾಂಡ ಸರ್ಗ 52, ಶ್ಲೋಕ 96)

ಕ್ರಮವನ್ನು ಹಿಡಿದು ಹೇಳುವ ಸನ್ನಿವೇಶ ಪಂಚರಾತ್ರದಲ್ಲೂ ಬಂದಿದೆ.

**ಶ್ಲೋಕ 15** (ಅನುಷ್ಟುಪ್) — **अरण्यानि बहुदोषाणि ; अत्रापि राम-लक्ष्मणयोः मध्ये मैथिली तिष्ठतु, (तदा) एषा सनाथा भविष्यति ।।**

ಅರಣ್ಯಗಳಲ್ಲಿ ಅಪಾಯ ಸಂಭವ ಬಹು ಹೆಚ್ಚು. ಆದುದರಿಂದ ಅರಣ್ಯದ ಮಾತಾಡುವ ಈ ಸಂದರ್ಭದಲ್ಲೂ ಸೀತೆಯು ರಾಮ ಲಕ್ಷ್ಮಣರ ಮಧ್ಯದಲ್ಲೇ ಇರಲಿ; ಆಗ ಅವಳು ಸುರಕ್ಷಿತಳಾಗುತ್ತಾಳೆ.

अत्रापि — ವನವಾಸದ ವಿಷಯ ಪ್ರಸ್ತಾಪಿಸುತ್ತಿರುವ ಈ ಸಂದರ್ಭದಲ್ಲೂ.

**ಶ್ಲೋಕ 16** (ಅನುಷ್ಟುಪ್) — यदि रामं सकृत् स्पृशामि, वा यदि रामं सकृत् पश्यामि, गतायुः अहं अमृतेन इव पुनः जीवामि इति मम मतिः।

ಒಮ್ಮೆ ರಾಮನನ್ನು ಆಲಂಗಿಸಿಕೊಂಡೆನಾದರೆ, ಅಥವಾ ಒಮ್ಮೆ ರಾಮನನ್ನು ನೋಡಿದೆನಾದರೆ ಮೃತಪ್ರಾಯನಾದ ನಾನು ಅಮೃತದಿಂದಲೋ ಎಂಬಂತೆ ಮತ್ತೆ ಜೀವ ಪಡೆದೇನೆಂದು ಭಾವಿಸುತ್ತೇನೆ.

गतायुः — गतप्रायायुः (ಮೃತಪ್ರಾಯನಾಗಿರುವ), अमृतेनेव—ರಾಮನ ದರ್ಶನವೇ ಅವನಿಗೆ ಅಮೃತ.

ಪುಟ 19

**ಶ್ಲೋಕ 17** (ಅನುಷ್ಟುಪ್) — कमपि अर्थं चिरं ध्यात्वा वक्तुं प्रस्फुरिताधराः। बाष्पस्तम्भितकण्ठत्वात् अनुक्त्वा एव वनं गताः।

(ಶೃಂಗಿಬೇರಪುರದಲ್ಲಿ ಅವರನ್ನು ನಾನು ಬಿಟ್ಟಾಗ ರಥದಿಂದ ಇಳಿದ) ಅವರು ಬಹುಕಾಲ ಯೋಚಿಸಿ ಯೋಚಿಸಿ ಏನನ್ನೋ ಹೇಳಬೇಕೆಂದು ಪ್ರಯತ್ನಿಸಿದರು. ತುಟಿಗಳೂ ಅಲುಗಿದವು; ಆದರೆ ಕಣ್ಣೀರಿನಿಂದ ಕಂಠ ಬಿಗಿಯಿತು. ಮಾತೇ ಹೊರಡಲಿಲ್ಲ. ಏನನ್ನೂ ಹೇಳದೆಯೇ ಹಾಗೆಯೇ ಮುಂದಕ್ಕೆ ಹೊರಟುಹೋದರು.

**अनुक्त्वा एव** — 'ಏನನ್ನೂ ಹೇಳದೆಯೇ'. ರಾಮಾಯಣದಲ್ಲಿ ರಾಮ ಲಕ್ಷ್ಮಣರು ಸಂದೇಶ ಕಳುಹಿಸಿದರೆಂದೂ, ಸೀತೆ ಮಾತ್ರ ಮಾತನಾಡಲು ಯತ್ನಿಸಿ ಶಕ್ತಿಗೆಯ ಸರಳು ಬಿಗಿದು ಮಾತನಾಡಲಿಲ್ಲವೆಂದೂ ವರ್ಣಿತವಾಗಿದೆ. ಇಲ್ಲಿ ರಾಮ ಲಕ್ಷ್ಮಣರಿಗೂ ಇದೇ ಭಾವವಾಯಿತೆಂದು ಹೇಳಿದೆ. ಈ ಮೌನ ಮಾತಿಗಿಂತಲೂ ಹೆಚ್ಚು ಪ್ರಭಾವಶಾಲಿಯಾಗಿದೆ. ರಸಕ್ಕೆ ಪುಷ್ಟಿ ಕೊಟ್ಟಿದೆ. ಮೊದಲನೆಯ ಅಂಕದ ಕೊನೆಯಲ್ಲಿ ತಂದೆ ಓಡಿಬರುತ್ತಿದ್ದರೂ ಲೆಕ್ಕಿಸದೆ ಅವನಿಗೆ ಮುಖವನ್ನೂ ತೋರಿಸದೆ ಹೊರಟುಬಿಟ್ಟರೂ ರಾಮಾದಿಗಳಿಗೆ ದುಃಖವಿಲ್ಲದಿರಲಿಲ್ಲ: ಒಳಗೆ ನಿಗೂಢವಾಗಿತ್ತು. ಈಗ ಅದು ವ್ಯಕ್ತವಾಗುವುದು.

**(इति द्विगुणं मोहमुपगतः)** — ಸುಮಂತ್ರನ ಮಾತನ್ನು ಕೇಳಿ ಅದರಿಂದ ಧ್ವನಿತವಾದ ರಾಮಾದಿಗಳ ದುಃಖವನ್ನು ನೆನೆದು ದಶರಥನು ಮತ್ತೆ ಮೂರ್ಛೆಹೋಗುವನು.

**ಶ್ಲೋಕ 18** (ಅನುಷ್ಟುಪ್) — हे कौसल्ये, त्वां चक्षुषा न पश्यामि। अतः मे अङ्गं स्पृश। रामं प्रति गता मे बुद्धिः अद्यापि न निवर्तते।

ಕೌಸಲ್ಯೆ, ನಿನ್ನನ್ನು ನೋಡಲೂ ಆಗುತ್ತಿಲ್ಲ ; ಆದುದರಿಂದ ನನ್ನನ್ನು ಮುಟ್ಟು. ರಾಮನ ಬಳಿಗೆ ಹೋದ ನನ್ನ ಬುದ್ಧಿ ಇನ್ನೂ ಹಿಂದಕ್ಕೆ ಬಂದಿಲ್ಲ.

**त्वां चक्षुषा न पश्यामि** -- ಇಂದ್ರಿಯಗಳು ಆಗಲೇ ಸ್ವಾಧೀನ ತಪ್ಪುತ್ತ ಬಂದು, ಪ್ರಾಣದೀಪ ಆರುತ್ತಲಿತ್ತು. ಆದುದರಿಂದ ಅವಳು ಹತ್ತಿರದಲ್ಲೇ ಇದ್ದರೂ ಕಣ್ಣಿಗೆ ಬೀಳುತ್ತಿರಲಿಲ್ಲ.

**'अङ्गं मे स्पृश'** — ನನ್ನ ದೇಹವನ್ನು ಸ್ಪರ್ಶಿಸು. ರಾಮನಿಲ್ಲದಿರಲು ರಾಮ ಮಾತೆಯ ಸಾನ್ನಿಧ್ಯ ಮತ್ತು ಸ್ಪರ್ಶ ತನಗೆ ಮತ್ತೆ ಜ್ಞಾನ ತರಬಹುದೆಂಬ ಆಸೆ ದಶರಥನಿಗೆ.

**रामं प्रति गता बुद्धिः** — ರಾಮನ ಬಳಿಗೇ ನನ್ನ ಮನಸ್ಸು ಹೋಗಿದೆ. ಆದುದರಿಂದ ಇಲ್ಲಿನ ವಿಚಾರವೇ ನನಗೆ ಒಂದೂ ತಿಳಿಯುತ್ತಿಲ್ಲ ಎಂಬ ಭಾವ. ವಾಲ್ಮೀಕಿ ರಾಮಾಯಣದಲ್ಲೂ ಇದೇ ಭಾವ ಅಭಿವ್ಯಕ್ತವಾಗಿದೆ.

न त्वां पश्यामि कौसल्ये साधु मा पाणिना स्पृश ।
रामं मेऽनुगता दृष्टिः अद्यापि न निवर्तते ॥

(ಅಯೋಧ್ಯಾಕಾಂಡ, ಸರ್ಗ 42, ಶ್ಲೋಕ 3)

**ಶ್ಲೋಕ 19** (ಶಾರ್ದೂಲವಿಕ್ರೀಡಿತ) — त्वां राज्ये अभिषिच्य, मन्नरपतेः लाभात् प्रजाः कृतार्थाः कृत्वा त्वत् सहजान् सततं आत्मनः समानविभवान् कुरु इति ते आदिश्य, इतो तपोवनं गन्तव्यं इति च मया चिन्तितम्, अहो! तत् निःशेषं एतया कैकेय्या एकक्षणे अन्यथाकृतं हि ।

ರಾಜ್ಯಕ್ಕೆ ನಿನ್ನನ್ನು ಅಭಿಷೇಕವಾಗಿ ಯೋಗ್ಯ ದೊರೆ ದೊರೆತ ಕಾರಣ ಪ್ರಜೆಗಳು ಧನ್ಯರಾಗುವಂತೆ ಮಾಡಿ 'ನಿನ್ನ ಸಹೋದರರನ್ನು ಸರಿಸಮಾಗಿ ನೋಡಿಕೋ' ಎಂದು ನಿನಗೆ ತಿಳಿಸಿ ನಾನು ಇಲ್ಲಿಂದ ವನಕ್ಕೆ ತೆರಳಬೇಕೆಂದು ಸಂಕಲ್ಪಿಸಿದ್ದೆ. ಅಯ್ಯೋ! ಅದೆಲ್ಲವೂ ಕ್ಷಣಮಾತ್ರದಲ್ಲೇ ಈ ಕೈಕೇಯಿಯಿಂದ ಅಸ್ತವ್ಯಸ್ತಗೊಳಿಸಲ್ಪಟ್ಟಿತಲ್ಲ! (ಎಂದು ದಶರಥ ಮರುಗುತ್ತಾನೆ).

**तत् निःशेषं . . . अन्यथाकृतं हि** -- ರಾಮ, ನಿನಗೆ ರಾಜ್ಯವನ್ನು ಒಪ್ಪಿಸಿ ನಾನು ಕಾಡಿಗೆ ಹೋಗಬೇಕೆಂದಿದ್ದೆ ; ಆದರೆ ರಾಜ್ಯವನ್ನು ನನಗೇ ಬಿಟ್ಟು ನೀನೇ ಕಾಡಿಗೆ ಹೋಗಬೇಕಾಯಿತಲ್ಲ ಎಂದು ದಶರಥನ ಶೋಕ. ಅಭಿಷೇಕ ನಿಂತಿದ್ದು ಒಳ್ಳೆಯದಾಯಿತು ಎಂದು ಅದಕ್ಕೆ ತನ್ನ ಕಾರಣಗಳನ್ನು ಕೊಟ್ಟಾಗ ರಾಮ ಕೊಟ್ಟ ಮೊದಲನೆಯ ಕಾರಣ—'ದಶರಥ ಮಹಾರಾಜನು ಕಾಡಿಗೆ ಹೋಗುವುದು ತಪ್ಪಿತು' ಎಂದು (ಅಂಕ 1, ಶ್ಲೋಕ 14).

**ಶ್ಲೋಕ 20** (ಅನುಷ್ಟುಪ್)—रामः (वनं) गतः अहमपि जीवितैः त्यक्तः, ते प्रियं अस्तु, क्षिप्रं पुत्रः आनीयताम्, पापं सफलं अस्तु इति (उच्यताम्)।

'ರಾಮನು (ವನಕ್ಕೆ) ತೆರಳಿದ ; ನನ್ನ ಪ್ರಾಣವೂ ಹೋಯಿತು. ನಿನಗೆ ಸಂತೋಷವಾಗಲಿ ; ಬೇಗ ಮಗನನ್ನು ಬರಮಾಡಿಕೊ ; ಪಾಪಕೃತ್ಯವು ಫಲಗೊಳ್ಳಲಿ' (ಎಂದು ಕೈಕೇಯಿಗೆ ತಿಳಿಸು ಎಂದು ದಶರಥನು ಸುಮಂತ್ರನಿಗೆ ಹೇಳುತ್ತಾನೆ).

**मामाश्वासयितुमागताः पितरः** — ದಶರಥನಿಗೆ ಪ್ರಾಣೋತ್ಕ್ರಮಣಕಾಲದಲ್ಲಿ ಪಿತೃಗಳು ಗೋಚರವಾಗುವ ಸನ್ನಿವೇಶ ಗಂಭೀರವಾಗಿದ್ದು, ಹೃದ್ಯವೂ ಆಗಿದೆ. ರಾಮನ ವನಗಮನ ವಿಚಾರವನ್ನು ಕೇಳಿ ಕೇಳಿ ಶೋಕತಪ್ತನಾದ ದಶರಥನನ್ನು ಸಂತೈಸಿ ಅವನನ್ನೂ ತಮ್ಮ ಜೊತೆಗೆ ಕರೆದುಕೊಂಡು ಹೋಗಲು ಬಂದಿರುವರೆಂದು ವರ್ಣಿತವಾಗಿದೆ. ಇಂತಹ ಸುಂದರ ಕಲ್ಪನೆಗಳು ಕವಿಯ ಉತ್ತಮ ಪ್ರತಿಭೆಗೆ ದ್ಯೋತಕವಾಗಿವೆ. ವಾಲಿಯ ಮರಣಕಾಲ, ದುರ್ಯೋಧನನ ಮರಣಕಾಲದಲ್ಲೂ ಇಂತಹ ವರ್ಣನೆಯೇ ಬಂದಿದೆ.

**आपस्तावत्** — 'ನೀರು ಕೊಡು' ಪ್ರತಿಜ್ಞೆ ತೆಗೆದುಕೊಳ್ಳುವವರು ಅನ್ಯದಲ್ಲಿ ಮಂತ್ರಶಕ್ತಿಯನ್ನು ಆಹ್ವಾನಿಸುವರು. ಮರಣಸನ್ನದ್ಧರಾಗಿರುವವರು ಆಚಮನ ಮಾಡುವಂತೆ ಕವಿ ಕಲ್ಪಿಸುತ್ತಾನೆ. ಇಂತಹ ಎಲ್ಲ ಸಂದರ್ಭಗಳಲ್ಲೂ ನೀರನ್ನು ಕೇಳುವಾಗ आपस्तावत् ಎಂಬ ಮಾತೂ, ನೀರು ತಂದಾಗ 'इमा आपः' ಎಂದು ಹೇಳುವುದೂ ಭಾಸನ ರೂಪಕಗಳ ಒಂದು ವೈಶಿಷ್ಟ್ಯ. ಪ್ರತಿಜ್ಞಾಯೌಗಂಧರಾಯಣ, ಮಧ್ಯಮವ್ಯಾಯೋಗ, ಪಂಚರಾತ್ರ, ಊರುಭಂಗ—ಈ ನಾಟಕಗಳಲ್ಲೂ ಈ ವಾಕ್ಯವೇ ಬಂದಿದೆ. "पूज्यानां देवपित्रादीनां दर्शनावसरे आचमनस्य विहितत्त्वात्." —ಎಂ. ಆರ್. ಕಾಳೆ

ಪುಟ 20

**ಶ್ಲೋಕ 21** —अयं अमरपतेः सखा दिलीपः; अयं अत्रभवान् रघुः; अयं मे पिता अत्रभवान् अजः; [हे पितरः] यदा मम अपि भवद्भिः सह वसने समयः उपस्थितः तदा भवद्भिः अत्र अभिगमनकारणं किम् ?

ಇಕೋ, ಇವನು ಸುರಪತಿಯ ಮಿತ್ರ ದಿಲೀಪ ; (ನನ್ನ ಮುತ್ತಾತ). ಇಕೋ, ಇವನು ಪೂಜ್ಯನಾದ ರಘು ; (ನನ್ನ ತಾತ) ; ಇಕೋ, ಇವನು ನನ್ನ ತಂದೆ ಅಜ ; ಪಿತೃವರ್ಯರೇ, ನನಗೂ ನಿಮ್ಮೊಡನೆ ಅಲ್ಲಿಯೇ ವಾಸಮಾಡುವ ಕಾಲ ಒದಗಿರುವಾಗ ನೀವು ಇಲ್ಲಿಗೆ ಆಗಮಿಸಲು ಕಾರಣವೇನು ?

**अमरपतेः सखा** = ದೇವೇಂದ್ರನ ಮಿತ್ರ. ದಿಲೀಪನು ನೂರನೆಯ ಅಶ್ವಮೇಧ ಮಾಡಲು ಅಶ್ವವನ್ನು ಕಳುಹಿಸಿರಲು, 'ಶತಮಖ—ಶತಕ್ರತು'— ನೂರು ಅಶ್ವಮೇಧಗಳನ್ನು ಮಾಡಿದವ ಎಂಬ ಕೀರ್ತಿ ತನಗೆ ಮಾತ್ರ ಬರಬೇಕೆಂದು ಅಸೂಯೆಯಿಂದ

ಇಂದ್ರನು ಅಶ್ವವನ್ನು ಅಪಹರಿಸಿದ. ಅಶ್ವರಕ್ಷಣೆಗೆ ಹೊರಟದ್ದ ದಿಲೀಪನ ಪುತ್ರ ರಘು ತನ್ನನ್ನು ಎದುರಿಸಿ ಹೋರಾಡಿದುದನ್ನು ನೋಡಿ ಮೆಚ್ಚಿ ಅಶ್ವವನ್ನು ಹಿಂತಿರುಗಿಸಿ, ದಿಲೀಪನೊಡನೆ ಮೈತ್ರಿ ಬೆಳಸಿದ. ಆದುದರಿಂದಲೇ ದಿಲೀಪನನ್ನು 'अमरपतेः सखा' ಎಂದು ಹೇಳಿರುವುದು.

**किमभिगमन....भवद्भिः** — ನೀವೇ ಏಕೆ ಇಲ್ಲಿಯವರೆಗೆ ಬಂದಿರಿ ?

**ममापि....समयः** — ನನಗೂ ನಿಮ್ಮೊಡನೆ ಸ್ವರ್ಗದಲ್ಲೇ ವಾಸಿಸುವ ಕಾಲ ಬಂದಿದೆ.

**राम वैदेहि लक्ष्मण** — ಪಿತೃಗಳು ದರ್ಶನವಿತ್ತು, ತನ್ನನ್ನು ಕರೆದುಕೊಂಡು ಹೋಗಲು ಬಂದ ಕೊನೆ ಘಳಿಗೆಯಲ್ಲೂ ಅವನ ಬಾಯಲ್ಲಿ ಬಂದ ಕೊನೆ ಮಾತುಗಳು ಇವು. ದಶರಥನ ಪುತ್ರವಾತ್ಸಲ್ಯ ಅಸ್ಮಾದೃಶ.

**(मूर्च्छया परामृष्टः)** — 'ಇದು ರಂಗಸೂಚನೆ' ಇದನ್ನು 'स्वर्यातः' ಅಥವಾ 'स्वर्गं गतः' ಎಂದು ಅರ್ಥಮಾಡಿಕೊಳ್ಳಬೇಕು.

ಭರತನ ನಾಟ್ಯಶಾಸ್ತ್ರದ ನಿಯಮಕ್ಕೆ ವಿರುದ್ಧವಾಗಿ ರಂಗಭೂಮಿಯ ಮೇಲೇ ಇಲ್ಲಿ ಮರಣದೃಶ್ಯ ಬಂದಿದೆ. ಇಂತಹ ದೃಶ್ಯ ಅಭಿಷೇಕ ಮತ್ತು ಊರುಭಂಗ ನಾಟಕಗಳಲ್ಲೂ ಇದೆ.

**(यवनिकास्तरणं करोति)** — (ದಶರಥನ ಕಳೇಬರದ ಮೇಲೆ) ಒಂದು ಬಟ್ಟೆಯನ್ನು ಹೊದಿಸುತ್ತಾನೆ. 'ಯವನಿಕಾ' ಅಂದರೆ ಇಲ್ಲಿ 'ತೆರೆ' ಎಂದು ಅರ್ಥಮಾಡಬಾರದು.

ಎರಡನೆಯ ಅಂಕ ಸಂಪೂರ್ಣವಾಗಿ ಶೋಕಮಯವಾಗಿದೆ. ಬರಿಯ ಶೋಕವನ್ನೂ, ಅಳುವನ್ನೂ ಒಂದು ಅಂಕದ ತುಂಬ ತುಂಬುವುದು ಅಸಾಧ್ಯವಾದ ಕೆಲಸ. ತನ್ನ ಉತ್ತಮ ಕಲ್ಪನೆಗಳಿಂದಲೂ, ಸಂವಿಧಾನ ಕೌಶಲದಿಂದಲೂ ಭಾಸಕವಿ ಈ ಅಸಾಧ್ಯವನ್ನು ಸಾಧಿಸಿದ್ದಾನೆ. ಹೀಗೆ ಸಮಗ್ರ ದ್ವಿತೀಯಾಂಕ ಕರುಣರಸದ ಒಂದು ಮಡು.

ಪುಟ 21

## ಅಂಕ ೩

**ಸ್ಥಳ** — ಅಯೋಧ್ಯೆಯ ಹೊರಗೆ ಪ್ರತಿಮಾಗೃಹ ಮತ್ತು ಅದರ ಪರಿಸರ.

**ಕಾಲ** — ದಶರಥನ ಮರಣವಾಗಿ ಸುಮಾರು 15 ದಿನಗಳು ಕಳೆದಿವೆ ಅಂದರೆ ಚೈತ್ರ ಅಮಾವಾಸ್ಯೆ ಅಥವಾ ವೈಶಾಖ ಶುದ್ಧ ಪಾಡ್ಯ.

**सुधाकारः** — ಸುಣ್ಣ ಬಣ್ಣ ಬಳಿಯುವವ ಇವನನ್ನೇ ಮುಂದೆ 'चेट' ಎಂದೂ ಕರೆದಿರುವುದು. आर्यसम्भवकस्य आज्ञप्तं — ಸಂಭವಕನು ಹೇಳಿದ್ದ ಕೆಲಸ ಮುಗಿಸಿ

ದ್ದೇನೆ. 'ಸಂಭವಕ' ಅರಮನೆಯ ಒಬ್ಬ ಭಟ ಇರಬಹುದು. स्वप्स्यामि (स्वपिति)—ಕೊಟ್ಟಿದ್ದ ಕೆಲಸ ಮುಗಿಸಿ, ಬಿಸಿಲಿನ ತಾಪ ಹೆಚ್ಚಾಗಿದ್ದುದರಿಂದ ವಿಶ್ರಾಂತಿಗಾಗಿ 'ಕೊಂಚಕಾಲ ಮಲಗುತ್ತೇನೆ' ಎಂದು ಹೇಳಿ ಮಲಗುತ್ತಾನೆ.

अङ्घो — ಕೋಪದಿಂದ ಯಾರನ್ನಾದರೂ ಕೆಳದರ್ಜೆಯವರನ್ನು ಸಂಬೋಧಿಸುವಾಗ ಉಪಯೋಗಿಸುವ ಅವ್ಯಯ.

**अधन्यस्य मम....बाहुसहस्रं नास्ति** — 'ನಿರ್ಭಾಗ್ಯನಾದ ನನಗೆ ಕಾರ್ತವೀರ್ಯನಂತೆ ಸಾವಿರ ತೋಳಿಲ್ಲ.' : ಕಾರ್ತವೀರ್ಯ ಹೈಹಯ ದೇಶದ ದೊರೆ ಕೃತವೀರ್ಯ ಎನ್ನುವವನ ಮಗ. ಮಾಹಿಷ್ಮತೀ ಅವನ ರಾಜಧಾನಿ. ಭಗವಾನ್ ದತ್ತಾತ್ರೇಯನ ಅನುಗ್ರಹದಿಂದ ಅವನು ಸಾವಿರ ತೋಳುಗಳನ್ನು ಪಡೆದು ಮಹಾ ಪರಾಕ್ರಮಿಯಾದನು ಎಂದು ಪುರಾಣಕಥೆ. ಅವನನ್ನು 'ಸಹಸ್ರಾರ್ಜುನ' ಎಂದೂ ಕರೆಯುತ್ತಾರೆ. ನನಗೂ ಹಾಗೇ ಒಂದು ಸಾವಿರ ತೋಳು ಇದ್ದಿದ್ದರೆ, ನಿನ್ನ ಒರಟುತನಕ್ಕೆ ತಕ್ಕ ಶಿಕ್ಷೆ ಮಾಡುತ್ತಿದ್ದೆ ಎಂದು ಅರ್ಥ.

**दशरथस्य प्रतिमागेहं** — ದಶರಥನ ಪ್ರತಿಮೆ ಇರುವ ಗೃಹ ಎಂಬ ಅರ್ಥ. ಅಲ್ಲಿ ದಿಲೀಪ, ರಘು, ಅಜನ ಪ್ರತಿಮೆಗಳು ಇದ್ದರೂ ನಾಟಕದ ಪ್ರಧಾನ ವಿಷಯ ದಶರಥನ ಪ್ರತಿಮೆ ಆದುದರಿಂದಲೇ ದಶರಥನ ಪ್ರತಿಮೆ ಇರುವ ಗೃಹವೆಂದು ಹೇಳಿರಬೇಕು.

**अपनीतकपोतसन्दानकं....गर्भगृहम्** — ಗರ್ಭಗೃಹದಲ್ಲಿ ಪಾರಿವಾಳಗಳು ಹಳೆ-ಪಳೆ ಚೂರು-ಪಾರು ಬಟ್ಟೆಗಳಿಂದ ಕಟ್ಟಿದ್ದ ಗೂಡನ್ನೆಲ್ಲಾ ತೆಗೆದುದಾಯಿತು. ಅಥವಾ ಪಾರಿವಾಳಗಳೂ (ಗುಬ್ಬಚ್ಚಿಗಳೂ) ಒಳಗೆ ಬರದಂತೆ ಕಟ್ಟಿದ್ದ ಬಂಧನಗಳನ್ನು ತೆಗೆದುದಾಯಿತು. 'सन्दान' ವೆಂದರೆ बन्धनरज्जुः ಎಂದು ಕ್ಷೀರಸ್ವಾಮಿಯ ವ್ಯಾಖ್ಯಾನವಿದೆ.

**सौधवर्णकदत्तचन्दनपञ्चाङ्गुलाः** — ಸುಣ್ಣದ ಶುಭ್ರವರ್ಣದ ಮೇಲೆ (ಶುಭ ಸೂಚಕಗಳಾದ) ಚಂದನ (ಶ್ರೀಗಂಧದ) ರಸದಲ್ಲಿ ಅದ್ದಿದ ಐದು ಬೆರಳುಗಳನ್ನೂ ಒಳಗೊಂಡಂತೆ ಅಂಗೈಮುದ್ರೆಯನ್ನು ಒತ್ತಿದ್ದಾಯಿತು. ಚಟ್ಟು ಬಡಿಯುವುದು ಎಂದು ಇದನ್ನು ಕರೆಯುತ್ತಾರೆ.

**अवसक्तमाल्यदाम....द्वाराणि** — ಬಾಗಿಲುಗಳನ್ನು ಮಾಲಿಕೆಗಳಿಂದ ಅಲಂಕರಿಸಿದ್ದೂ ಆಯಿತು. प्रकीर्णा वालुका—ಸಣ್ಣ ಸಣ್ಣ ಮರಳನ್ನು ಹರಡಿದ್ದೂ ಆಯಿತು.

ಪುಟ 22

**प्रवेशकः** — (ಮೇಲೆ ವಿಷ್ಕಂಭಕದ ವಿವರಣೆಯನ್ನು ನೋಡಿ.) ನೀಚಪಾತ್ರಗಳಾದ ಸುಧಾಕರ ಮತ್ತು ಭಟ ಇಬ್ಬರೂ ಪ್ರಾಕೃತದಲ್ಲಿಯೇ ಈ ಪ್ರವೇಶಕದಲ್ಲಿ

ಮಾತಾಡುತ್ತಾ, ಪ್ರತಿಮಾಗೃಹದ ವಿಚಾರವನ್ನೂ ರಾಣಿಯರು ಅಲ್ಲಿಗೆ ಬರುವ ಕಾರಣ ಅದನ್ನು ಸಜ್ಜುಗೊಳಿಸಿದ ವಿಷಯವನ್ನೂ ಸಂಕ್ಷೇಪವಾಗಿ ತಿಳಿಸುತ್ತಾರೆ. ದಶರಥನ ಮರಣಾನಂತರ ಹಾಗೂ ಭರತನ ಆಗಮನಕ್ಕೆ ಮುನ್ನ ಬರುವ ಈ 'ಸುಧಾಕಾರ ಮತ್ತು ಭಟ'ರ ದೃಶ್ಯ ದ್ವಿತೀಯಾಂಕದಲ್ಲಿ ನಮ್ಮ ಭಾವನೆಯ ತೀವ್ರತೆಯನ್ನು ಹಗುರಗೊಳಿಸುತ್ತದೆ. ಜೊತೆಗೆ ಮುಂದೆ 'ಉಸಿರು ಬಿಗಿಯುವ ದೃಶ್ಯ'ಕ್ಕೆ ನಮ್ಮನ್ನು ಸಿದ್ಧಗೊಳಿಸುತ್ತದೆ. ಭಾಸಕವಿಯ ನೈಪುಣ್ಯಕ್ಕೆ ಇದೊಂದು ದೃಷ್ಟಾಂತ. ಕಾಳಿದಾಸನ ಶಾಕುಂತಲದಲ್ಲಿ ಬರುವ ಮನೋಹರವಾದ ಬೆಸ್ತರವನ ದೃಶ್ಯದಲ್ಲಿ ಇದರ ಛಾಯೆಯನ್ನು ಕಾಣಬಹುದು.

**चिरं मातुलपरिचयात्**—मातुल:–ಸೋದರಮಾವ (मातु: भ्राता तु मातुल:) ನಾಲ್ಕುಜನ ಸೋದರರ ವಿವಾಹವೂ ಒಟ್ಟಿಗೇ ಆಯಿತು. ಅನಂತರ ಭರತನು ಸೋದರ ಮಾವ ಯುಧಾಜಿತನ ರಾಜ್ಯವಾದ ಕೈಕಯ ರಾಜ್ಯಕ್ಕೆ ಹೋಗಿ ಸುಮಾರು 12 ವರ್ಷಗಳ ಕಾಲ ಸುಖವಾಗಿ ಅಲ್ಲಿಯೇ ಇದ್ದುಬಿಡುತ್ತಾನೆ. ಆದುದರಿಂದ ಇತ್ತೀಚಿನ ಅಯೋಧ್ಯೆಯ ವಿಷಯಗಳು ಅವನಿಗೆ ತಿಳಿಯದಾಗಿವೆ.

**अकल्यशरीर:**— ಅಸ್ವಸ್ಥ. ವ್ಯಾಧಿಗ್ರಸ್ತ (ಶರೀರ) (ಸೂತನು ದಶರಥ ಅಸ್ವಸ್ಥ ನಾಗಿದ್ದಾನೆಂದೂ ತಾವು ಬರಬೇಕೆಂದು ಹಿರಿಯರು ಹೇಳಿಕಳಿಸಿದ್ದಾರೆಂದೂ ಭರತನಿಗೆ ತಿಳಿಸಿದ್ದಾನಷ್ಟೆ: ದಶರಥನ ಮರಣವಾರ್ತೆಯನ್ನು ತಿಳಿಸಿಲ್ಲ).

**(सावेगम्)** — ಉದ್ವೇಗ (ಕಳವಳ)ದಿಂದ ಕೂಡಿ (ಇದು ರಂಗ ಸೂಚನೆ).

**ಶ್ಲೋ೧೮ 1** (ಶಿಖರಿಣೀ)—मे पितु: क: व्याधि:? महान् हृदयपरिताप: खलु; वैद्या: तं किमिति आहु:? भिषज: तत्र न निपुणा: खलु; (स:) आहारं भुङ्क्ते? किम्? शयनमपि? (स:) भूमौ निरशन:; कि आशा स्यात्? दैवम्; (मम) हृदयं स्फुरति, रथं वाहय।

ನಮ್ಮ ತಂದೆಗೆ ಬಂದಿರುವ ವ್ಯಾಧಿ ಯಾವುದು ? ಅಪಾರ ಹೃದಯತಾಪ. ವೈದ್ಯರ ಅಭಿಪ್ರಾಯವೇನು ? ವೈದ್ಯರು ಆ ವ್ಯಾಧಿಯ ವಿಷಯದಲ್ಲಿ ಅಸಮರ್ಥರು ; ಆಹಾರ ವನ್ನು ಏನಾದರೂ ಸೇವಿಸುತ್ತಾನೆಯೇ ? ನಿದ್ದೆ ಬರುತ್ತದೆಯೆ ? ಆಹಾರ ಸೇವಿಸದೆ ನೆಲದ ಮೇಲೇ ಮಲಗಿದ್ದಾನೆ. ಜೀವಕ್ಕೆ ಏನೂ ಮೋಸವಿಲ್ಲವೆ ? ದೈವಾಧೀನ ಅಷ್ಟೆ ! ನನ್ನ ಹೃದಯ ನಡುಗುತ್ತಿದೆ ; ಆದುದರಿಂದ ಬೇಗನೆ ರಥವನ್ನು ಬಿಡು.

ಈ ಶ್ಲೋಕ ಭರತ ಮತ್ತು ಸೂತರ ಪ್ರಶ್ನೋತ್ತರಗಳಿಂದ ಸಂಭಾಷಣಾ ರೂಪದಲ್ಲಿದೆ. ಭರತನು ಕದಕ ಕೆದಕಿ ಪ್ರಶ್ನೆಗಳನ್ನು ಕೇಳುತ್ತಿದ್ದರೂ ಸೂತನ ಉತ್ತರ ಗಳು ನೇರವಾಗಿರದ ಬೇಕೆಂದೇ ಮುಚ್ಚಿಕೊಳ್ಳುವಂತೆ ಸಂಶಯಗ್ರಸ್ತವಾಗಿವೆ. ಈ ರೀತಿ ಶ್ಲೋಕಗಳ ಭಾಗಗಳನ್ನು ಪ್ರಶ್ನೋತ್ತರರೂಪವಾಗಿ ಮಾಡುವುದು ಅಥವಾ ಬೇರೆ ಬೇರೆ

ಪಾದಗಳನ್ನು ಬೇರೆ ಬೇರೆಯವರಿಂ ಹೇಳುವಂತೆ ಮಾಡುವುದು ಭಾಸನ ರೂಪಕಗಳಲ್ಲಿನ ಇನ್ನೊಂದು ವೈಶಿಷ್ಟ್ಯ.

**ಆಯುಷ್ಮನ್** — ಸಂಸ್ಕೃತ ನಾಟಕಗಳಲ್ಲಿ ಸೂತ (ಸಾರಥಿಯು) ನು ರಾಜಪುತ್ರನನು 'ಆಯುಷ್ಮನ್' ಅಂದರೆ 'ಚಿರಂಜೀವಿ' ಎಂದೇ ಸಂಬೋಧಿಸುವನು.

**ಶ್ಲೋಕ 2** (ಶಿಖರಿಣೀ) — द्रुतरथगतिक्षीणविषयाः द्रुमाः धावन्ति इव, मही उद्वृत्ताम्बुः नदी इव नेमिविवरे निपतति। अरव्यक्तिः नष्टा; जवात चक्रवलयं स्थितं इव; अश्वोद्धूतं रजः पुरतः पतति च न अनुपतति च।

ರಥದ ವೇಗವಾದ ಓಟದ ಕಾರಣದಿಂದ ಪರಸ್ಪರ ಅಲ್ಪಾವಕಾಶ ಪಡೆದಂತಿರುವ ಮರಗಳು ಓಡುತ್ತಿವೆಯೋ ಎಂಬಂತೆ ಕಾಣಿಸುತ್ತಿವೆ. ನೀರುಕ್ಕಿ ಹರಿಯುವ ತುಂಬು ನದಿಯಂತೆ ಭೂಮಿಯು ಚಕ್ರಗಳ ನೇಮಿಗಳ ರಂಧ್ರದೊಳಭಾಗಕ್ಕೆ ಬೀಳುತ್ತಿರುವಂತೆ ಕಾಣುತ್ತಿದೆ. ಅರೆಗಳು (spokes) ಇಲ್ಲವಾಗಿವೆ; ವೇಗದ ಪರಿಣಾಮವಾಗಿ ಚಕ್ರದ ಸುತ್ತು ಚಲಿಸದೆ ನಿಂತಂತೆ ಕಾಣಿಸುತ್ತಿದೆ. ಕುದುರೆಗಳಿಂದೆದ್ದ ಧೂಳು ರಥದ ಮುಂದೆ ಬೀಳುತ್ತಿದೆ. ಹಿಂಭಾಗವನ್ನು ಅನುಸರಿಸಲಾರದಾಗಿದೆ.

ಕಾಳಿದಾಸನ ಶಾಕುಂತಲಾ ನಾಟಕದಲ್ಲಿ ಹರಿಣವನ್ನು ಅಟ್ಟಿಸಿಕೊಂಡು ಹೊರಟ ದುಷ್ಯಂತನ ರಥವೇಗದ ವರ್ಣನೆಯಲ್ಲಿಯೂ ವಿಕ್ರಮೋರ್ವಶೀಯದಲ್ಲಿ ಕೇಶಿಯನು ಅಟ್ಟಿಸಿಕೊಂಡು ಹೋದ ಪುರೂರವನ ರಥವೇಗದ ವರ್ಣನೆಯಲ್ಲಿಯೂ ಈ ಶ್ಲೋಕದ ಮನೋಜ್ಞ ಛಾಯೆಯನ್ನು ಕಾಣಬಹುದು.

**द्रुत....विषयाः** — द्रुता या रथगतिः, तया क्षीणः विषयः येषां ते। **द्रुमाः** ಎಂಬುದಕ್ಕೆ ವಿಶೇಷಣ. ರಥದ ವೇಗವಾದ ಓಟದ ಪರಿಣಾಮವಾಗಿ ಒಂದು ಮರಕ್ಕೂ ಇನ್ನೊಂದು ಮರಕ್ಕೂ ಇದ್ದ ಅಂತರ ಅಲ್ಪಗೊಂಡಂತೆ ಕಾಣಿಸುತ್ತದೆ. ಆದುದರಿಂದ ದೂರದಲ್ಲಿರುವ ಮರಗಳು ಒಂದರ ಹಿಂದೆ ಒಂದು ಬೇಗ ಬೇಗ ಓಡಿದಂತೆ ಭಾಸವಾಗುತ್ತದೆ.

**रजश्च ...नानुपतति** — ಕುದುರೆಗಳ ಗೊರಸುಗಳಿಂದೆದ್ದ ಧೂಳು ಮುಂದೆ ಕಾಣಿಸುತ್ತಿತ್ತು. ಆದರೆ ಅದು ಹಿಂಬಾಲಿಸುವ ಮುನ್ನ ರಥ ಅದೆಷ್ಟೋ ಮುಂದೆ ಓಡಿಬಿಟ್ಟಿದ್ದು ಧೂಳಿನ ಕಣ ಅನುಸರಿಸಿ ಬರಲು ಅಶಕ್ಯವಾಗಿತ್ತು. ಕಾಳಿದಾಸನು आत्मोद्धतैरपि रजोभिः अलङ्घनीयाः (रथ्याः) ಎಂದು ಶಾಕುಂತಲದಲ್ಲಿ ಮನೋಜ್ಞವಾಗಿ ವರ್ಣಿಸಿದ್ದಾನೆ.

ಈ ಶ್ಲೋಕದಲ್ಲಿ ಪ್ರಧಾನವಾಗಿ ಸ್ವಭಾವೋಕ್ತಿ ಅಲಂಕಾರವಿದೆ

**सोपस्नेहतया वृक्षाणां... भवितव्यम्** — ಸುತ್ತಲೂ ವೃಕ್ಷಗಳು ತೇವಗೂಡಿ ಒತ್ತಾದ ಮಿಣುಗುತ್ತಿರುವ ಹಸಿರಿನಿಂದ ಇರುವ ಕಾರಣ ಎದುರಿಗೆ ಅಯೋಧ್ಯೆಯೇ

ಇರಬೇಕು. ನಗರದ ಬಳಿಯಾದರೆ ಗಿಡಗಳಿಗೆ ನೀರು ಹಾಕಿ ರಕ್ಷಿಸಿರುತ್ತಾರೆ. ಸೂತನು ರಥವನ್ನು ಬಹು ವೇಗದಲ್ಲಿ ನಡೆಸುತ್ತಿದ್ದುದರಿಂದ ಕೆಲಕಾಲ ಎಷ್ಟು ದೂರ ಬಂದೆ ಎಂಬುದೂ ಅವನಿಗೆ ಅರಿವಿರಲಿಲ್ಲ. ಈಗ ಒತ್ತಾಗಿ ಬೆಳೆದು ಮಿನುಗುತ್ತಿರುವ ಹಸಿರಿನಿಂದ ಕೂಡಿದ ವೃಕ್ಷಗಳನ್ನು ನೋಡಿ—ಆಗಲೇ ಅಯೋಧ್ಯೆಯ ಬಳಿಗೆ ಬಂದೆವು—ಎಂದು ಗುರುತು ಹಿಡಿಯುತ್ತಾನೆ.

**ಶ್ಲೋಕ 3** ಮತ್ತು **4** (ಪ್ರಭಾ ಮತ್ತು ಸ್ರಗ್ವಿಣೀ ಸೇರಿದ ಉಪಜಾತಿ ಛಂದಸ್ಸು) — (सम्प्रति) पितुः पादयोः (मे) शिरः पतितं इव; स्निह्यता राज्ञा समुत्थापितः इव; भ्रातरः त्वरितं उपगताः इव; मातरः मां अश्रुभिः क्लेदयन्ति इव।

(अयं) 'सदृशः' इति, 'महान्' इति, 'व्यायतः' च इति भृत्यैः सेवया स्तुतः इव, तत्र (भवने), सौमित्रिणा आत्मनः वेषं च भाषां च परिहसितं इव पश्यामि।

ಈಗಾಗಲೇ ಅರಮನೆಯಲ್ಲಿ ನಾನು ನಮ್ಮ ತಂದೆಯ ಪಾದಗಳಿಗೆ ತಲೆ ಬಾಗಿಸಿ ನಮಸ್ಕರಿಸುತ್ತಲಿರುವಂತೆ; ನನ್ನಲ್ಲಿ ವಾತ್ಸಲ್ಯವನ್ನು ತೋರಿಸುತ್ತಲಿರುವ ಮಹಾರಾಜ ದಶರಥನಿಂದ ನಾನು ಮೇಲಕ್ಕೆ ಎಬ್ಬಿಸಲ್ಪಡುತ್ತಿರುವಂತೆ; ಸಹೋದರರೆಲ್ಲರೂ ಓಡೋಡಿ ನನ್ನ ಬಳಿಗೆ ಬಂದಂತೆ; ಮಾತೆಯರು ನನ್ನನ್ನು ಆನಂದಾಶ್ರುಗಳಿಂದ ನೆನೆಸುತ್ತಿರುವಂತೆ: 'ಇವನು ವಯಸ್ಸಿಗೆ (ಅಥವಾ ತಂದೆಗೆ) ತಕ್ಕವನಾಗಿದ್ದಾನೆ', 'ಇವನು ಎಷ್ಟು ದೊಡ್ಡವನಾಗಿದ್ದಾನೆ' ಎಂತಹ ಮೈಕಟ್ಟು ಪಡೆದಿದ್ದಾನೆ'—ಹೀಗೆ ಸೇವಕರು ಪ್ರೀತಿಯಿಂದ ನನ್ನನ್ನು ಕುರಿತ ಮಾತುಗಳನ್ನಾಡುತ್ತಿರುವಂತೆ'—ಲಕ್ಷ್ಮಣನು ನನ್ನ ವಾತನ್ನೂ ಉಡುಪನ್ನೂ ಪರಿಹಾಸ್ಯ ಮಾಡುತ್ತಿರುವಂತೆ ಕಾಣುತ್ತಿದ್ದೇನೆ. ಇದೆಲ್ಲ ಭರತನ ಕಲ್ಪನೆ.

ಪುಟ 23

**सौमित्रिणा . . . परिहसितं इव** — ಲಕ್ಷ್ಮಣನಿಂದ ನನ್ನ ಕೇಕೆಯ ದೇಶದ ವೇಷ ಭಾಷೆಗಳ ವಿಚಾರದಲ್ಲಿ ಪರಿಹಾಸ ಮಾಡಲ್ಪಡುತ್ತಿರುವಂತೆ ಲಕ್ಷ್ಮಣನು ಹೆಚ್ಚು ಸಲಿಗೆಯಿಂದ ಇದ್ದನೆಂದು ಕಾಣುತ್ತದೆ. सुमित्रायाः अपत्यं पुमान्, तेन। ಭರತನ ಸುಂದರ ಕಲ್ಪನೆಗಳನ್ನೊಳಗೊಂಡ ಈ ವಾಕ್ಯವೃಂದ ಮುಂದೆ ಭರತನಿಗೆ ಕಾದಿರುವ ನಿರಾಶೆಯನ್ನು ತೀವ್ರಗೊಳಿಸಲು ಉಚಿತವಾಗಿದೆ. ಡಾ॥ ಗಣಪತಿಶಾಸ್ತ್ರಿಗಳೂ, ವರಂಜಪೆಯವರೂ ಈ ಎರಡು ಶ್ಲೋಕಗಳನ್ನೂ ಒಂದನ್ನಾಗಿ ತೆಗೆದುಕೊಂಡಿದ್ದಾರೆ.

**जानद्भिरपि अस्माभिः न निवेद्यते** — ಗೊತ್ತಿದ್ದರೂ ನಾವು ಹೇಳುವಂತಿಲ್ಲ.

**ಶ್ಲೋಕ 5** (ಅನುಷ್ಟುಪ್) — पितुः प्राणपरित्यागं मातुः ऐश्वर्यलुब्धताम् । ज्येष्ठभ्रातुः प्रवासं च इति त्रीन् दोषान् च कः अभिधास्यति ।

ತಂದೆಯ ಸಾವು, ತಾಯಿಯ ರಾಜ್ಯೈಶ್ವರ್ಯಲೋಭ, ಅಣ್ಣನ ವನವಾಸ— ಈ ಮೂರೂ ಅನರ್ಥಗಳನ್ನು ಯಾರು ಹೇಳಿಯಾರು?

ಹಿರಿಯರೂ ದಶರಥನ ಮರಣವನ್ನು ಹೇಳದಿರಲು ಆಜ್ಞೆಮಾಡಿರಬಹುದು. ಜೊತೆಗೆ ಒಂದು ಹೇಳಿದರೂ ಒಂದರ ಹಿಂದೆ ಒಂದರಂತೆ ಈ ಮೂರನ್ನೂ ತಿಳಿಸಬೇಕು. ಆದುದರಿಂದ ಸೂತನಿಗೆ ಹೇಳಲು ಮನಸ್ಸು ಬರದು.

**भद्र, किं शत्रुघ्नो मामभिगतः** — ಎಲೈ ಮಂಗಳಕರನೆ, ಶತ್ರುಘ್ನ ನನ್ನನ್ನು ಎದುರುಗೊಳ್ಳಲು ಬಂದಿದ್ದಾನೆಯೇ? ಈ ಮಾತಿನಿಂದಲೂ, "**भ्रातरः** त्वरितं उपगताः" ಎಂಬ ಭರತನ ಕಲ್ಪನೆಯಿಂದಲೂ ಶತ್ರುಘ್ನ ಅಯೋಧ್ಯೆಯಲ್ಲಿಯೇ ಇದ್ದನೆಂದು ಮೂಲಕಥೆಯನ್ನು ಕವಿ ಬದಲಾಯಿಸಿರಬೇಕು (ಅಂಕ 1 ರಲ್ಲಿರುವ 7 ನೆಯ ಶ್ಲೋಕದ ಟಿಪ್ಪಣಿಯನ್ನು ನೋಡಿ). ವಾಲ್ಮೀಕಿ ರಾಮಾಯಣದಲ್ಲಾಗಲೀ, ಇಲ್ಲಾಗಲೀ ಶತ್ರುಘ್ನನ ಪಾತ್ರ ಯಾವ ಮಹತ್ವದ್ದೂ ಅಲ್ಲ. ಆದುದರಿಂದ ಕವಿ ಅವನನ್ನು ಅಯೋಧ್ಯೆಯಲ್ಲೇ ಉಳಿಸಿ, ಭರತನು ಮಾತ್ರ 'ಪ್ರತಿಮಾಗೃಹ' ಪ್ರವೇಶಿಸುವಂತೆ ಮಾಡಿರಬೇಕು. ಎದುರುಗೊಳ್ಳಲು ಯಾರಾದರೂ ಬಂದರೆ ಅವನು ಶತ್ರುಘ್ನ ಮಾತ್ರ. ತಂದೆಯ ಬಳಿ ಇರಬೇಕಾದುದರಿಂದ ರಾಮನಾಗಲೀ ಲಕ್ಷ್ಮಣನಾಗಲೀ ಬಂದಿರಲಾರ ರೆಂಬುದೂ ಅವನಿಗೆ ಸ್ಪಷ್ಟವಾಗಿದೆ.

**एकनाडिकावशेषः कृत्तिकाविषयः** — ಕೃತ್ತಿಕಾ ನಕ್ಷತ್ರದ ಅವಧಿ ಇನ್ನೂ ಒಂದು ಘಳಿಗೆಯಷ್ಟು ಉಳಿದಿದೆ. ಕೃತ್ತಿಕಾ ನಕ್ಷತ್ರವಿದ್ದಾಗ ಪುರಪ್ರವೇಶ ಶುಭವಲ್ಲ. ಆದುದರಿಂದ ರೋಹಿಣೀ ನಕ್ಷತ್ರ ಬರುವವರೆಗೆ ನಗರದ ಹೊರಗೇ ಇರಬೇಕೆಂದು ವಸಿಷ್ಠರ ಆಶಯ. ಈ ಆದೇಶವನ್ನು ಉಪಯೋಗಿಸಿಕೊಂಡು ಕವಿ ಭರತನಿಗೆ ಪ್ರತಿಮಾ ಗೃಹಕ್ಕೆ ಹೋಗುವ ಸಂದರ್ಭವನ್ನು ತಂದಿದ್ದಾನೆ. ಭಟನನ್ನು ಭರತ ಹಿಂದಕ್ಕೆ ಕಳುಹಿಸು ವುದೂ ಗಮನಾರ್ಹವಾಗಿದೆ.

**वृक्षान्तराविष्कृते** — ಮರಗಳ ಸಂದಣಿಯಲ್ಲಿ ಗೋಚರಿಸುತ್ತಿರುವ. उपोप-विश्य . . . . समुदाचारः — ಊರನ್ನು ಪ್ರವೇಶಿಸುವ ಮುನ್ನ ಹೊರಗೆ ಕೊಂಚಕಾಲ ಕುಳಿತುಕೊಂಡು ಆಮೇಲೆ ಪ್ರವೇಶಿಸಬೇಕೆಂಬುದು ಒಂದು ಪದ್ಧತಿ. उप + उपविश्य — ಅಪರೂಪ ಪ್ರಯೋಗ.

**तद्भयं भविष्यति** . . . . — ಈ ದೇವಾಗಾರಕ್ಕೆ ಹೋಗುವುದರಿಂದ ದೇವತಾ ಪೂಜೆ ಮತ್ತು ವಿಶ್ರಾಂತಿ ಎರಡೂ ಆಗುವುವು. ಇದು ಭರತನ ಆಸೆ. ಆದರೆ ಎರಡ ರಲ್ಲಿ ಯಾವುದೂ ಅವನಿಗೆ ಸಿದ್ಧಿಸದು. ಅಷ್ಟೇ ಅಲ್ಲ. ಅವನ ಆಸೆ ಬಂಡೆಗಪ್ಪಳಿಸಿ ಬಿದ್ದು ಪುಡಿ ಪುಡಿಯಾಗುತ್ತದೆ. साधु . . . . बलयः — ಹೂಗಳಿಂದಲೂ, ಅರಳು

ಗಳಿಂದಲೂ ಚೆನ್ನಾಗಿ ಪೂಜೆಮಾಡಿರುವರು. दत्तचन्दन....भित्तयः — ಗೋಡೆಗಳ ಮೇಲೆ ಐದು ಬೆರಳುಗಳ ಗಂಧದ ಚಿಟ್ಟನ್ನು ಬಡಿದಿರುವರು. अवसक्त....द्वाराणि— ಬಾಗಿಲುಗಳಲ್ಲಿ ಹೂವಿನ ಹಾರಗಳನ್ನು ಇಳಿಬಿಟ್ಟಿರುವರು. अवकीर्णा वालुकाः — ಮರಳನ್ನು ಹರಡಿರುವರು. 'किन्नु खलु पार्वणोऽयं विशेषः अथवा आह्निकमास्तिकयम्' —ಇಂದು ಪರ್ವಕಾಲವೆಂದು ವಿಶೇಷ ಪೂಜೆಯೋ ? ಅಥವಾ ನಿತ್ಯದ ಪೂಜೆಯೋ ಹೀಗೆ ಪ್ರವ್ಯಾಪೂರ್ಣವೋ. पर्वणि पर्वणि भवः—पार्वणः· नेह....दृश्यते — ಇಲ್ಲಿ (ಪ್ರಹರಣ) ಆಯುಧ ಅಥವಾ ಧ್ವಜವೇ ಮುಂತಾದ ಹೊರಗಣ ಚಿಹ್ನೆ ಯಾವುದೂ ಕಾಣಿಸುತ್ತಿಲ್ಲ. ಸಾಧಾರಣವಾಗಿ ವಿಷ್ಣುದೇವಸ್ಥಾನವಾದರೆ ಗರುಡ, ಶಂಖ, ಚಕ್ರ, ಈಶ್ವರ ದೇವಸ್ಥಾನವಾದರೆ ವೃಷಭ, ಡಮರುಗ, ತ್ರಿಶೂಲ ಮುಂತಾದ ಹೊರಚಿಹ್ನೆ ಗಳಿರುತ್ತವೆ. ಇಲ್ಲಿ ಅವು ಯಾವುವೂ ಇಲ್ಲ.

**अहो क्रियामाधुर्यं पाषाणानाम्** — ಅಬ್ಬ ! ಈ ಶಿಲೆಗಳಲ್ಲಿನ ಶಿಲ್ಪ (ಕಲ್ಲಿನಲ್ಲಿ ಮೂರ್ತಿಗಳ ಕೆತ್ತನೆ) ಎಷ್ಟು ಸುಂದರವಾಗಿದೆ. अहो भावगतिः आकृतीनाम्—ಈ ಪ್ರತಿಮೆಗಳ ಮುಖಭಾವ ಎಷ್ಟು ಸೊಗಸಾಗಿದೆ.

**दैवतोद्दिष्टानामपि....प्रतिमानाम्** — ಈ ಪ್ರತಿಮೆಗಳು ದೇವತೆಗಳಾಗಿರ ಬೇಕೆಂಬ ಉದ್ದೇಶವಿದ್ದರೂ ಇವುಗಳಲ್ಲಿ ಮನುಷ್ಯವಿಶ್ವಾಸವುಂಟಾಗುತ್ತಿದೆ.

ಪುಟ 24

**अस्ति तावन्मे मनसि प्रहर्षः** — ನನ್ನ ಮನಸ್ಸಿಗೆ ತುಂಬ ಸಂತೋಷ ಆಗು ತ್ತಿದೆ. ಪ್ರತಿಮಾಗೃಹದ ಮೂರ್ತಿಗಳನ್ನು ಕಂಡು, ಈ ಮಾತುಗಳನ್ನು ಭರತನು ತನ್ನಷ್ಟಕ್ಕೆ ತಾನೇ ಆಡಿಕೊಳ್ಳುತ್ತಾನೆ. ಇಲ್ಲಿನ ಮಾತುಗಳು ಪ್ರತಿಮೆಗಳು ದೇವತೆ ಗಳಲ್ಲವೆಂದೂ ಮನುಷ್ಯರವೆಂದೂ ಅಭಿಪ್ರಾಯ ಮೂಡಿಸಲು ಸಹಾಯಕವಾಗಿವೆ. ಅಂದರೆ, ಹಿಂದೆ ಭರತನು ಅಯೋಧ್ಯೆಯಲ್ಲಿದ್ದಾಗ ಯಾವಾಗಲೂ ಈ ಪ್ರತಿಮಾಗೃಹಕ್ಕೆ ಬಂದಿರಲಿಲ್ಲವೆಂಬುದು ಸ್ಪಷ್ಟ. 'ಕಪೋತ ಸಂಧಾನಕಗಳಿದ್ದವು; ಅವನ್ನು ತೆಗೆಯ ಲಾಯಿತು' ಎಂದು ಹೇಳಿರುವುದರಿಂದ ಅದರ ನಿರ್ಮಾಣವಾಗಿ ಸುಮಾರುಕಾಲ ಕಳೆದಿರಬೇಕು. ದಶರಥನ ಪ್ರತಿಮೆ ಮಾತ್ರ ಈ ಹತ್ತು ದಿನಗಳಲ್ಲಿ ರಚಿತವಾಗಿ ಇಲ್ಲಿ ಸ್ಥಾಪಿಸಲ್ಪಟ್ಟಿರಬೇಕು.

**ಶ್ಲೋಕ 6** (ಅನುಷ್ಟುಪ್) — दैवतं इति एव शिरः नमयितुं कामं युक्तम्। तु अमन्त्रार्चितदैवतः (मम) प्रणामः वार्षलः प्रणामः स्यात्।

ಯಾವುದೋ ದೇವತೆಯೆಂದೇ ಭಾವಿಸಿ ಇಲ್ಲಿ ತಲೆ ಬಾಗಿಸುವುದು ಯುಕ್ತವೇನೋ ಹೌದು; ಆದರೆ ಉಚಿತ ಮಂತ್ರವಿಲ್ಲದ ದೇವತೆಗೆ ಮಾಡಿದ ಪ್ರಣಾಮ ಶೂದ್ರನ ಪ್ರಣಾಮವಾಗಿಬಿಡಬಹುದು.

ಒಂದೊಂದು ದೇವತೆಯ ಅರ್ಚನೆ ಪ್ರಣಾಮಕ್ಕೂ ಉಚಿತ ಮಂತ್ರಗಳಿವೆ. ಈಗ ಈ ಮೂರ್ತಿಗಳು ಯಾವ ದೇವತೆಯೆಂಬುದೇ ತಿಳಿಯದಿರುವುದರಿಂದ ಇವನ್ನು ಯಾವ ಮಂತ್ರಪುರಸ್ಸರ ಸ್ತುತಿಸಿ ನಮಿಸಬೇಕೋ ತಿಳಿಯದು. ಆದರೆ ನಮಿಸಬೇಕೆಂಬುದೇನೋ ನಿಜ. ಹಾಗೆ ಮಂತ್ರವಿಲ್ಲದೆ ನಮಿಸಿದರೆ ಮಂತ್ರಾಧಿಕಾರವಿಲ್ಲದ ಶೂದ್ರ ಮಾಡುವ ನಮನದಂತೆ ಆಗುತ್ತದೆ ಎಂದು ಭರತನ ಚಿಂತೆ.

**वार्षल:** — वृषलस्य अयम् (प्रणाम: ಎಂಬುದಕ್ಕೆ ವಿಶೇಷಣ).

**नैत्यकावसाने . . . प्रतिमागृहं प्रविष्ट:** — ಏನಿದು. ನನ್ನ ನಿತ್ಯಪೂಜಾ ಕರ್ಮಾದಿಗಳನ್ನು ಮುಗಿಸಿ ಊಟಮಾಡಲು ಹೋಗಿರುವಷ್ಟರಲ್ಲಿಯೇ ಇಲ್ಲಿಗೆ ಪ್ರವೇಶಿಸಿರುವ ಪ್ರತಿಮಾಸಾದೃಶ್ಯಾಕೃತಿಯನ್ನು ಸ್ವಲ್ಪಮಟ್ಟಿಗೆ ಪಡೆದಿರುವ ಈ ವ್ಯಕ್ತಿ ಯಾರು? ತಂದೆ–ಮಕ್ಕಳು. ಅಣ್ಣ–ತಮ್ಮ. ರೂಪದಲ್ಲಿ ಆಕಾರದಲ್ಲಿ ಮತ್ತು ಧ್ವನಿಯಲ್ಲಿ ಸದೃಶರಾಗಿರುತ್ತಾರೆಂಬುದು ಭಾಸಕವಿಯ ಒಂದು ಸಿದ್ಧಾಂತ. ಮಧ್ಯಮವ್ಯಾಯೋಗ, ಪಂಚರಾತ್ರಗಳಲ್ಲೂ ಅಲ್ಲಲ್ಲೇ ಈ ವಿಷಯ ಅಭಿವ್ಯಕ್ತವಾಗಿದೆ. ಈ ನಾಟಕದಲ್ಲಿ ಮುಂದೆ ಭರತನನ್ನು ರಾಮನೆಂದು ಭ್ರಮಿಸುತ್ತಾಳೆ ಸೀತೆ.

**प्राणिधर्म:** — अन्नमेवनादि: (ಎಂ. ಆರ್. ಕಾಳೆ) ಇದರಿಂದ ಮಧ್ಯಾಹ್ನದ ಸಮಯವೆಂದು ಸೂಚಿತವಾಗುವುದು.

**नमोऽस्तु** — ಭರತ ನಮಸ್ಕರಿಸುವುದು ಪ್ರತಿಮೆಗಳಿಗೆ.

**ಶ್ಲೋಕ 7** (ಅನುಷ್ಟುಪ್) — अस्मासु किञ्चित् वक्तव्यं (किम्?) अथवा कोऽपि विशिष्ट: प्रतिपाल्यते किम्? नियमप्रभविष्णुता वा? अयं प्रतिषेध: किं कृत:?

ನಮ್ಮಲ್ಲಿ ದೋಷವೇನಾದರೂ ಇದೆಯೋ? ಅಥವಾ ನಮಗಿಂತಲೂ ದೊಡ್ಡ ವ್ಯಕ್ತಿ ಇಲ್ಲಿಗೆ ಬರುವ ನಿರೀಕ್ಷಣೆ ಉಂಟೋ? ಅಥವಾ ಇವನು ನಮಸ್ಕರಿಸಬಹುದು ಇವನು ಬಾರದು ಎಂಬ ನಿಯಮವೇನಾದರೂ ಉಂಟೋ? ಅಥವಾ ನಿಮ್ಮ ಅಧಿಕಾರ ವಿಶೇಷವೋ—ಏಕೆ ನಾನು ನಮಸ್ಕರಿಸುವುದನ್ನು ಪ್ರತಿಷೇಧಿಸಿದಿರಿ? ತಿಳಿಸಿರಿ.

**वक्तव्यं** — दूषणम्

**प्रभविष्णुता** — ಅಧಿಕಾರ ಚಲಾವಣೆಯೋ? 'आत्मगता तपोनुष्ठानप्रीति: किम—ಎಂದು ಟಿ. ಗಣಪತಿಶಾಸ್ತ್ರಿಗಳ ವ್ಯಾಖ್ಯಾನ.

**किन्तु देवताशङ्कया . . . . परिहरामि** — 'ಆದರೆ ದೇವತೆಯೆಂಬ ಭಾವನೆಯಿಂದ ಬ್ರಾಹ್ಮಣರು ವಂದಿಸಬಾರದೆಂದು ತಡೆದೆನು.'

**ಕಿರ್ತ್ಕಿಕ 8** (ಸ್ವಾವದನಾವೃತ್ತ)—एते ते (इक्ष्वाकवः) ये असुरपुरवधे दैवतानां अभिसरीं गच्छन्ति, एते ते ये स्वसुकृतैः स्वपुरजनपदा शक्रलोके यान्ति। एते ते ये स्वभुजबलर्जितां कृत्स्नां वसुमतीं प्राप्नुवन्तः; एते ते ये छन्दं मृगयता मृत्युना चिरं अनवसिताः।

ರಾಕ್ಷಸರ ವಧೆ ಮತ್ತು ಅವರ ಪಟ್ಟಣಗಳ ನಾಶದ ಸಂದರ್ಭದಲ್ಲಿ ದೇವತೆಗಳ ಬೆಂಬಲವಾಗಿ ಮುಂದೆ ಹೋಗುವ ಇಕ್ಷ್ವಾಕು ರಾಜರುಗಳು ಇವರು. ತಮ್ಮ ಪುಣ್ಯಗಳಿಂದ ಪೌರರು ಹಾಗೂ ಪ್ರಜೆಗಳೊಡನೆ ಇಂದ್ರಲೋಕಕ್ಕೆ ತೆರಳಬಲ್ಲವರು ಇವರು; ತಮ್ಮ ಭುಜಬಲದಿಂದ ಸಮಗ್ರ ಭೂಮಿಯನ್ನು ಅಧೀನಕ್ಕೆ ಗಳಿಸಿದವರಿವರು; ಸ್ವೇಚ್ಛಾ ಮರಣ ಪಡೆಯಬಲ್ಲ ಇವರ ಇಚ್ಛೆಯನ್ನು ಕಾಯಬೇಕಾದ ಮೃತ್ಯುವಿನಿಂದ ಬಹುಕಾಲ ನಾಶಗೊಳ್ಳದವರು ಇವರು.

**असुरपुरवध** — ಅಸುರರ ವಧೆ ಮತ್ತು ಅವರ ಪುರಗಳ ನಾಶ ಸಂದರ್ಭದಲ್ಲಿ असुराणां वधे तेषां पुराणां नाशे (कर्तव्ये), अभिसरीं गच्छन्ति—ಯುದ್ಧದಲ್ಲಿ ಮುಂದೆ ಹೋಗುತ್ತಾರೆ. प्राप्नुवन्तः=प्राप्तवन्तः ಅಥವಾ प्राप्नुवन्ति ಎಂಬ ಅರ್ಥ. छन्दं=इच्छां, चिरमनवसिताः = ದೀರ್ಘಕಾಲ ನಾಶಪಡೆಯದವರು (ಬಹುಕಾಲ ಬಾಳಿದವರು) ಅವರಿಗಿಷ್ಟ ಬಂದಾಗ ಸಾವು ಬರಬಹುದಾಗಿತ್ತೆ ವಿನಾ ಅದಕ್ಕೆ ಇಷ್ಟ ಬಂದಾಗ ಅಲ್ಲ. ಭರತನು ತನ್ನ ವಂಶದಲ್ಲಿ ಎಂತಹ ಉದಾತ್ತ ಭಾವನೆಯಿಂದ ಅಭಿಮಾನದಿಂದ ಕೂಡಿದ್ದನೆಂಬುದು ಇದರಿಂದ ವ್ಯಕ್ತವಾಗುತ್ತದೆ.

**संवेशनोत्थापनयोः**.... — ಮಲಗುವಾಗಲೂ ಏಳುವಾಗಲೂ.

ಪುಟ 25

**अवभृतस्नान** — ಯಜ್ಞದ ದೀಕ್ಷಾಂತದಲ್ಲಿ ಮಾಡುವ ಸ್ನಾನ

**धरमाणानामपि....स्थाप्यन्ते** — ಜೀವಿಸಿರುವವರ ಪ್ರತಿಮೆಗಳನ್ನು ಇಲ್ಲಿ ಪ್ರತಿಷ್ಠಿಸುತ್ತಾರೆಯೇ? ಈ ಸಂಭಾಷಣೆ ಗಂಭೀರವೂ ಅರ್ಥಗರ್ಭಿತವೂ ಆಗಿದೆ. ಭಯ-ಕುತೂಹಲ ಹೆಚ್ಚುತ್ತಾ ಬಂದು ಕ್ರಮೇಣ ದಶರಥನ ಮರಣದ ಶೋಕವಾರ್ತೆ ಭರತನಿಗೆ ತಿಳಿಯುವಂತೆ ಕವಿ ಕಲ್ಪಿಸಿದ್ದಾನೆ. ಸನ್ನಿವೇಶ, ಶಬ್ದಾರ್ಥ ಸಂಪತ್ತಿ, ಸಂವಿಧಾನ, ಚಿತ್ತವೃತ್ತಿಯ ನಿರೂಪಣೆ ಯಾವ ದೃಷ್ಟಿಯಿಂದ ನೋಡಿದರೂ ಈ ದೃಶ್ಯ ಶ್ಲಾಘನೀಯವೇ ಆಗಿದೆ.

**आपृच्छे** ... — ನಾನಿನ್ನು ಹೊರಡುವೆ. ಅನುಮತಿ ಕೊಡಿ. ವಿಷಯ ... ಬಂದ ಕೂಡಲೇ ಭರತ... ಅಲ್ಲಿರಲು ಆಗದಾಯಿತು.

**ಶ್ಲೋಕ 9** (ಅನುಷ್ಟುಪ್)—येन राज्यं च प्राणा: च स्त्रीशुल्कार्थे विसर्जिता: (तस्य) दशरथस्य इमां प्रतिमां त्वं किं न पृच्छसे ?

ಯಾವನಿಂದ, ತನ್ನ ವಿವಾಹಕಾಲದಲ್ಲಿ ಭಾರ್ಯಾಶುಲ್ಕವೆಂದು ಮಾತುಕೊಟ್ಟಿದ್ದ ರಾಜ್ಯವನ್ನೂ (ಅಲ್ಲದೆ) ಪ್ರಾಣವನ್ನೂ ಬಿಟ್ಟ, ದಶರಥನ ಈ ಪ್ರತಿಮೆಯ ವಿಷಯವನ್ನು ಏಕೆ ನೀನು ಕೇಳುತ್ತಿಲ್ಲ ?

**पृच्छसे–पृच्छसि** ಎಂದು ಪರಸ್ಮೈಪದದಲ್ಲಿ ಇದ್ದಿದ್ದರೆ ಚೆನ್ನ.

**ಶ್ಲೋಕ 10** (ಮಾಲಿನೀ) — हे हृदय स कामं भव यत्कृते त्वं शङ्कसे तत् पितृनिधनं श्रुणु। धैर्यं तावत् गच्छ च। यदि अयं नीच: शुल्कशब्द: मां स्पृशति अथ सत्यं तत्र (मम) देह: विशोध्य: च।

ಎಲೈ ಹೃದಯವೆ, ನಿನ್ನ ಶಂಕೆ ಸಫಲವಾದ್ದರಿಂದ ಇಷ್ಟವನ್ನು ಪಡೆದವನಾಗು : ಯಾವ ವಿಷಯದಲ್ಲಿ ಶಂಕಿಸುತ್ತಿದ್ದೆಯೋ ಅಂತಹ ಪಿತೃಮರಣವಾರ್ತೆಯನ್ನು ಕೇಳು. ಕೊಂಚ ಧೈರ್ಯವನ್ನು ತಾಳು ; ಈ ತುಚ್ಛ 'ಶುಲ್ಕ' ಪದ ನನಗೆ ಸಂಬಂಧಿಸಿದ್ದ ಪಕ್ಷದಲ್ಲಿ ನನ್ನ ಶರೀರವನ್ನು ತಪ್ಪದೆ ಶುದ್ಧಿಗೊಳಿಸಬೇಕು.

**यदि . . . . मां स्पृशति** — ನನ್ನಿಂದ ಪ್ರೇರಿತಳಾಗಿ ನನ್ನ ಮಾತೆ ರಾಜ್ಯವನ್ನು ನನಗೆ ಕೇಳಿದಳೆಂಬ ದೂರು ನನ್ನ ಮೇಲೆ ಇದ್ದರೆ. अथ=यदि तत्र, देहो विशोध्य:—ಅಗ್ನಿಧಾರಣೆ. ಅಗ್ನಿಪ್ರವೇಶವೇ ಮುಂತಾದುವುಗಳಿಂದ ನಾನು ನಿರ್ದೋಷಿ ಎಂದು ನಿಜವಾಗಿ ಸ್ಥಾಪಿಸತಕ್ಕದ್ದು.

**आर्येति . . . . सत्वयम्** — 'ಆರ್ಯ'—ಈ ಮಾತು ಇಕ್ಷ್ವಾಕು ಕುಲದವರ ಬಾಯಲ್ಲಿ ಬರತಕ್ಕದ್ದು. ಆಕಾರ. ಆಚಾರ. ಉಚ್ಚಾರ ಎಲ್ಲದರಲ್ಲಿಯೂ ಒಂದು ವಂಶದವರಲ್ಲಿ ಸಾದೃಶ್ಯವಿರುತ್ತದೆ ಎಂಬ ಭಾವನೆ ಮತ್ತೆ ಧ್ವನಿತವಾಗಿದೆ.

ಪುಟ 26

**उपरत:**—ಮೃತನಾದನು.

**ಶ್ಲೋಕ 11** (ಅನುಷ್ಟುಪ್) — पित्रा भ्रात्रा च वर्जितां (अतएव) अटवीभूतां अयोध्यां पिपासार्त: क्षीणतोयां नदीं इव अनुधावामि।

ಬಾಯಾರಿಕೆಯಿಂದ ಬಳಲಿದವನು ನೀರು ಬತ್ತಿಹೋದ ನದಿಯನ್ನು ಆತುರದಿಂದ ತಲುಪುವಂತೆ ತಂದೆ ಹಾಗೂ ಸಹೋದರರನಿಲ್ಲದೆ ಕಾಡಿನಂತಿರುವ ಅಯೋಧ್ಯೆಯನ್ನು ಅವರ ದರ್ಶನಕಾತುರನಾದ ನಾನು ತಲುಪುತ್ತಿದ್ದೇನೆ (ಉಪಮಾಲಂಕಾರ).

**अटवीभूतां = अटवीसमां।** **'भूतं प्राप्यतीते समे त्रिषु'** (ಅಮರ).

ಪ್ರತಿಮಾಗೃಹಕ್ಕೂ ಅರಮನೆಗೂ ಇರುವ ವ್ಯತ್ಯಾಸಗಳನ್ನು ಕವಿ ಬೇಕೆಂದೇ ಚಿತ್ರಿಸಿದ್ದಾನೆ. ಇಲ್ಲಿ—ಸ್ವಾತಂತ್ರ್ಯ, ಅಲ್ಲಿ ಪಾರತಂತ್ರ್ಯ.

**ಶ್ಲೋಕ 15** (ಅನುಷ್ಟುಪ್) — हि, कोऽपि अयं वयस्थः पार्थिवः इव पतितः। परशङ्कां कर्तुं अलं ; अयं हि भरतः (इति) गृह्यताम्।

(ಸುಮಂತ್ರ—ಒಳಗೆ ಪ್ರವೇಶಿಸಬೇಡಿ) ಏಕೆಂದರೆ ಯಾರೋ ಒಬ್ಬ ತರುಣ ವಯಸ್ಸಿನ ರಾಜನಂತೆಯೇ ಮಲಗಿರುವಂತಿದೆ ; (ದೇವಕುಲಿಕ)—ಬೇರೆ ಯಾರೋ ಎಂಬ ಶಂಕೆ ಬೇಡ : ಇವನನ್ನು ಭರತನೆಂದೇ ತಿಳಿಯಿರಿ.

ಶ್ಲೋಕದ ಮೊದಲನೆಯ ಭಾಗವನ್ನು ಸುಮಂತ್ರನು ಮುಗಿಸುತ್ತಿರುವಂತೆಯೇ ಅಲ್ಲಿಯೇ ಇದ್ದ ದೇವಕುಲಿಕ ಉಳಿದ ಭಾಗವನ್ನೂ ಹೇಳಿ ವಿಷಯವನ್ನು ಸ್ಪಷ್ಟಗೊಳಿಸುತ್ತಾನೆ. ಇಂತಹ ಶ್ಲೋಕರಚನೆ ಭಾಸನ ನಾಟಕಗಳಲ್ಲಿ ಅಪೂರ್ವವಲ್ಲ.

**वयस्थः** — वयसि तिष्ठतीति (ತರುಣ) 'वयस्थस्तरुणो युवा' (ಅಮರ).

27

**'जयतु....। ....महाराजो व्याहरतीति'** — ಜಯವಾಗಲಿ. ಮಹಾ— ....ಅವಹ. ಸ್ವರದ ಹೋಲಿಕೆ. ಪ್ರತಿಮಾಸ್ಥಿತನಾದ ಮಹಾರಾಜನೇ ಮಾತನಾಡುವನೆಂದು ಭಾವಿಸಿದ್ದೆ. ಮೂರ್ಛೆಹೋದ ಭರತನಿಗೆ ಮಾತೆಯರ ಆಗಮನ ತಿಳಿಯಲಿಲ್ಲ. ಎಚ್ಚರಗೊಂಡು ಉಳಿದ ವಿಷಯ ತಿಳಿಯಲು ದೇವಕುಲಿಕನನ್ನು ಆರ್ಯ ಎನ್ನುವನು. ಆ ಶಬ್ದವನ್ನು ಕೇಳಿದ ಸುಮಂತ್ರನಿಗೆ ದಶರಥನ ಧ್ವನಿಯ ಸಾದೃಶ್ಯ ಕಾಣುತ್ತದೆ. ಈ ಸಾದೃಶ್ಯದ ಸಿದ್ಧಾಂತ ಮತ್ತೆ ಮತ್ತೆ ಪ್ರತಿಪಾದಿತವಾಗಿದೆ.

**अथ मातृणां....का** — ಮುಂದೆ ತಾಯಿಯರ ಅವಸ್ಥೆಯೇನು? ಇದು ದೇವಕುಲಿಕನಿಗೆ ಹಾಕಿದ ಪ್ರಶ್ನೆ.

**जात, एषा नः अवस्था** — ಮುಸುಕನ್ನು ತೆಗೆದು ಮಂಗಳದ್ರವ್ಯಗಳಿಲ್ಲದ ಮುಖ ತೋರಿಸುತ್ತಾರೆ. ತಾಯಿಯರೇ ಪ್ರತ್ಯಕ್ಷರಾಗಿ ಉತ್ತರ ಕೊಡುತ್ತಾರೆ.

**गर्वसमुदाचारसन्निकर्षः** — ಸಮಸ್ತ ಆಚಾರಸನ್ನಿಹಿತ (ಪಡೆದವ). ರಾಣಿಯರು ಮುಖದ ಮುಸುಕನ್ನು ತೆಗೆದಾಗಲೂ ಅವನು ಅಲ್ಲೇ ಇರುವ ಕಾರಣ ಅವನು ವೃದ್ಧ ಸುಮಂತ್ರನೆಂದು ಭರತನು ಊಹಿಸುತ್ತಾನೆ. ಬಹುಕಾಲದ ನಂತರ ನೋಡುತ್ತಿರುವ ಕಾರಣ ಭರತನಿಗೆ ಸುಮಂತ್ರನ ಗುರುತೂ ಸುಲಭವಾಗಿ ಸಿಕ್ಕದಾಗಿರಬಹುದು.

**ಶ್ಲೋಕ 16** (ಉಪಜಾತಿ) — चिरजीवदोषैः अन्वास्यमानः कृतघ्नभावेन विडम्ब्यमानः तस्मिन् नृपतौ विपन्ने (सति) शून्यस्य रथस्य सूतः अहं जीवामि हि।

ಬಹುಕಾಲ ಬದುಕಿದುದರ ಸಂಕಟಗಳನ್ನು ಅನುಭವಿಸುತ್ತಾ, ಕೃತಘ್ನಭಾವದಿಂದ ಪರಿಹಾಸಗೊಳಿಸಲ್ಪಡುತ್ತಾ ಆ ಮಹಾರಾಜನು ಮೃತನಾಗಲಿಕ್ಕಾಗಿ ಶೂನ್ಯರಥದ ಸೂತನಾಗಿ ನಾನಿನ್ನೂ ಬದುಕಿದ್ದೇನೆ.

**कृतघ्नभावेन विडम्ब्यमानः** — ನಿಜವಾಗಿಯೂ ನಾನು ರಾಜಭಕ್ತನೇ ಆಗಿದ್ದರೆ ಅವನ ಮರಣದಿಂದ ನಾನೂ ಮರಣವನ್ನಪ್ಪಬೇಕಾಗಿತ್ತು. ಹಾಗೆ ಮಾಡದಿರುವುದರಿಂದ 'ಕೃತಘ್ನತೆ' ನನ್ನನ್ನು ನೋಡಿ ನಗುತ್ತಿದೆ ಎಂಬ ಭಾವ.

**शून्यस्य रथस्य सूतः** — (ರಾಜನಿಲ್ಲದೆ) ಶೂನ್ಯವಾದ ರಥಕ್ಕೆ ಇನ್ನೂ ನಾನು ಸೂತ! (ಸಾರಥಿ).

**अभि . . . . इच्छामि** — ವಾಕ್ಯರಚನೆ ಉದ್ದಿಷ್ಟ ಅರ್ಥವನ್ನು ತರುವಂತಿಲ್ಲ. 'भवता उपदिष्टं अभिवादनक्रमं श्रोतुमिच्छामि' (ಪರಾಂಜಪೆ) ಎಂದಿದ್ದರೆ ಸರಿಯಾಗಿರುತ್ತಾ. ಸುಮಂತ್ರನಿಗೆ ನಡವಳಿಕೆ ಚೆನ್ನಾಗಿ ಗೊತ್ತಿತ್ತು. ಆದುದರಿಂದ ಮಾತೆಯರನ್ನು ಹೇಗೆ ಕಾಣಬೇಕು ? ಯಾರಿಗೆ ಮೊದಲು, ಹೇಗೆ ಅಭಿವಂದನೆ ಮಾಡಬೇಕೆಂಬುದನ್ನು ತಿಳಿಸಬೇಕೆಂದು ಭರತನು ಸುಮಂತ್ರನನ್ನು ಕೇಳುತ್ತಾನೆ. ಏಕೆಂದರೆ, ಅವರು ಒಂದಿನಂತಿಲ್ಲ: ಪತಿಯನ್ನು ಕಳೆದುಕೊಂಡಿದ್ದಾರೆ.

**अम्ब अनपराद्धः. . . .अभिवादये** — 'ಅಮ್ಮ. ನಿರಪರಾಧಿಯಾದ ನಾನು ವಂದಿಸುತ್ತೇನೆ.' 'ನಿರಪರಾಧಿ' ಎಂದು ತಿಳಿಸಿ 'ಈ ವಿಪತ್ತಿಗೆ ನಾನು ಕಾರಣನಲ್ಲ. ಈ ವಿಚಾರದಲ್ಲಿ ನಾನೇನೂ ಅರಿಯದವ' ಎಂದು ಭರತನು ತಿಳಿಸುತ್ತಾನೆ. ಭರತನ ಸಂತಾಪದ ತೀವ್ರತೆಯನ್ನು ಅರಿತ ಅವಳು 'ಸಂತಾಪರಹಿತನಾಗು' ಎಂದು ಆಶೀರ್ವದಿಸುತ್ತಾಳೆ.

**'आकृष्ट इव अस्मि'** — ನನ್ನನ್ನು **ನಿಂದಿಸುವಂತಿದೆ?** ತಾಯಿ ಕೈಕೇಯಿ ಮಾಡಿದ ಅಕೃತ್ಯದ ಹಿನ್ನೆಲೆಯಲ್ಲಿ ಇದು ಭರತನ ಭಾವನೆ.

**लक्ष्मणेन अतिसन्धितोऽहं** — ಲಕ್ಷ್ಮಣನಿಂದ ವಂಚಿಸಲ್ಪಟ್ಟ ನಾನು ನಮಸ್ಕರಿಸುವೆ. अतिसन्धानं=वञ्चना. ನಾನು ರಾಮನ ಸೇವೆಗೆ ಕಾಡಿಗೆ ಹೋಗಬೇಕಾಗಿತ್ತು. ನನಗೆ ಅವಕಾಶ ಕೊಡದೆ ಲಕ್ಷ್ಮಣ ಹೊರಟುಹೋದ. ಅದೇ ವಂಚನೆ. ಭರತನು ಮನಸ್ಸಿನ ಸಂತಾಪದಿಂದ ತನ್ನನ್ನೇ ದೂಷಿಸಿಕೊಳ್ಳುವ ಬಗೆ ಇದು.

ಪುಟ 28

**ಶ್ಲೋಕ 17** (ಅನುಷ್ಟುಪ್) — गङ्गायमुनयोः मध्ये प्रवेशिता कुनदी इव त्वं मम मातुः च (मम) मातुः च मध्यस्था न शोभसे।

ಗಂಗಾ ಯಮುನೆಯರ ಮಧ್ಯೆ ಸೇರಿಕೊಂಡ ಕ್ಷುದ್ರ ನದಿಯಂತೆ ನೀನು ನನ್ನ ಆ ತಾಯಿ ಮತ್ತು ಈ ತಾಯಿಯ ಮಧ್ಯೆ ಸೇರಿಕೊಂಡಿರುವುದು ಯೋಗ್ಯವಲ್ಲ.

ಗಂಗಾ ಯಮುನೆಯರು ಪವಿತ್ರ ನದಿಗಳು. ಅದರ ಮಧ್ಯೆ ಹರಿಯುವಂತೆ ಮಾಡಲ್ಪಟ್ಟ ಕಲುಷ ಜಲದ ತೊರೆ ಶೋಭಿಸಲಾರದು. ಹಾಗೆಯೇ ಕೌಸಲ್ಯೆ ಮತ್ತು ಸುಮಿತ್ರೆಯರಂತಹ ಪತಿವ್ರತೆಯರ ಮಧ್ಯೆ ಪತಿಘಾತಿನಿಯಾದ ನೀನು ಇರುವುದು ಯೋಗ್ಯವಲ್ಲ—ಎಂದು ಭರತನ ಅಭಿಪ್ರಾಯ. 'ಅವರಿಬ್ಬರನ್ನೂ 'ಮಾತೆ' ಎಂದು ಸಂಬೋಧಿಸಿದ ಭರತ ಕೈಕೇಯಿಯ ಹೆಸರನ್ನು ಹೇಳಿದ ಕೂಡಲೇ ಕೋಪದಿಂದ ಮೇಲೆದ್ದು ಅವಳನ್ನು ನಿಂದಿಸುತ್ತಾನೆ. ಪ್ರಸನ್ನ ಶೈಲಿ. ಸುಂದರವಾದ ಭ್ರಾವಕ್ಕೆ ಈ ಶ್ಲೋಕ ಸಮೀಚೀನ ಉದಾಹರಣೆ (ಉಪಮಾಲಂಕಾರ).

**ಶ್ಲೋಕ 18** (ಹರಿಣೀ) — 'अयशसा सह वयम्, चीरेण सह आर्यः, गृहमृत्युना सह नृपः, प्रततरुदितैः सह कृत्स्ना अयोध्या, मृगैः सह लक्ष्मणः, शोकेन सह दयिततनयाः अम्बाः, अध्वपरिश्रमैः सह स्नुषा, धिक्' इति उग्रेण वचसा सह आत्मा च ननु योजिताः ?

ನನಗೆ ಅಪಕೀರ್ತಿ. ರಾಮನಿಗೆ ನಾರುಮಡಿ (ವನವಾಸ). ಮಹಾರಾಜನಿಗೆ ಅರಮನೆಯಲ್ಲಿಯೇ ಮರಣ. ಸಮಗ್ರ ಅಯೋಧ್ಯೆಗೆ ಅಳುವಿಕೆ, ಲಕ್ಷ್ಮಣನಿಗೆ ಮೃಗಸಹವಾಸ. ಪುತ್ರವಾತ್ಸಲ್ಯ ತುಂಬಿದ ಮಾತೆಯರಿಗೆ ಶೋಕ. ಸೊಸೆಗೆ ಕಾಡುದಾರಿಯು ಬಳಲಿಕೆ. ನಿನಗೆ ಕಟುವಾದ 'ಛೀ' ಕಾರ—ಎಲ್ಲವನ್ನೂ ನೀನು ತರಲಿಲ್ಲವೇ ?

**नृपो गृहमृत्युना** — 'ರಾಜನು ಮನೆಯಲ್ಲೇ ಮರಣಪಡೆಯುವಂತೆ.' ವಾನಪ್ರಸ್ಥಾಶ್ರಮದಲ್ಲಿದ್ದು ಯೋಗದಿಂದ ಕೊನೆಯಲ್ಲಿ ಪ್ರಾಣವನ್ನು ತ್ಯಜಿಸುವುದು ಇಕ್ಷ್ವಾಕು ವಂಶದವರ ಉಚ್ಚ ಸಂಪ್ರದಾಯ. ತದ್ವಿರುದ್ಧವಾಗಿ ವಾನಪ್ರಸ್ಥಾಶ್ರಮವನ್ನು ಪ್ರವೇಶಿಸುವ ಮೊದಲೇ ಮನೆಯಲ್ಲಿಯೇ ರಾಜ ದಶರಥನ ಮರಣವಾಯಿತು. ಇದು ಅಸದೃಶ ಮರಣ—'वार्धके मुनिवृत्तीनां योगेनान्ते तनुत्यजाम्' (ರಘುವಂಶ—ಸರ್ಗ 1. ಶ್ಲೋಕ 8). ಹಾಗೆಯೇ ಈ ನಾಟಕದ ಪ್ರಥಮಾಂಕದ 14ನೆಯ ಶ್ಲೋಕದ ಮೊದಲನೆಯ ಪಾದ. ದ್ವಿತೀಯ ಅಂಕದ 19ನೆಯ ಶ್ಲೋಕದ ಮೂರನೆಯ ಪಾದವನ್ನೂ ನೋಡಿ.

**सर्वसमुदाचारमध्यस्तः त्वं किं न वन्दसे मातरम् ?** — ಎಲ್ಲ ಉತ್ತಮ ಆಚಾರವನ್ನು ಅನುಸರಿಸುವ ನೀನು ಆದೇಕೆ ತಾಯಿಯನ್ನು ವಂದಿಸದಿರುವೆ.

**ಶ್ಲೋಕ 19** (ಶಾಲಿನೀ) — शीलसङ्क्रान्तदोषैः स्नेहं त्यक्त्वा पुत्राः अपुत्राः तावत् क्रियन्ते। एषः अहं—'भर्तृद्रोहात् मातापि अमाता अस्तु' इति अपूर्वं लोके स्थापयामि।

(ಮಾತೆಯಲ್ಲಿನ) ಸ್ವಭಾವ ದೋಷಗಳ ಕಾರಣ ಮಕ್ಕಳು ತಮ್ಮ ಮಾತೃಪ್ರೇಮವನ್ನು ತ್ಯಜಿಸಿ ಅವಳ ಮಕ್ಕಳಲ್ಲವೆಂಬಂತೆ ಆಗಿಬಿಡುತ್ತಾರೆ. (ಆದರೆ) ಈ ನಾನು

ಪತಿಗೆ ದ್ರೋಹವೆಸಗಿದ ಕಾರಣ—ಮಾತೆಯೂ ಅಮಾತೆಯಾಗಲಿ' ಎಂಬುವ ಅಪೂರ್ವವಾದ ಧರ್ಮವನ್ನು ಲೋಕದಲ್ಲಿ ಸ್ಥಾಪಿಸುತ್ತೇನೆ.

**शीलसंक्रान्तदोषैः**—ಎಂಬುದಕ್ಕೆ सहवासिपरिजनगत दुस्स्वभावसंक्रमदोषैः— ದಾಸಿ ಮಂಥರೆಯ ಕೆಟ್ಟಸ್ವಭಾವ ಇವಳಿಗೆ ವರ್ಗಗೊಂಡಿತೆಂದೂ. अपुत्राः क्रियन्ते — पुत्रानर्हे कर्मणि (पुत्राः) प्रवर्त्यन्ते ಎಂದೂ ಗಣಪತಿಶಾಸ್ತ್ರಿಗಳು ವ್ಯಾಖ್ಯಾನ ಮಾಡಿದ್ದಾರೆ. मातापि अमाता अस्तु — ತಾಯಿಯು ತಾಯಿಯ ಗೌರವಕ್ಕೆ ಅನರ್ಹಳಾಗಲಿ ಎಂಬ ಭಾವ.

**ಶ್ಲೋಕ 20** (ಅನುಷ್ಟುಪ್) — (आर्यः) मे पितुः औरसः न ? क्रमेण न अभिषिच्यते ? (तस्मिन्) भ्रातरः दयिताः न स्युः ? प्रकृतीनां न रोचते ?

ಆರ್ಯನು ನಮ್ಮ ತಂದೆಯ ಮಗನಲ್ಲವೇ ? ಜ್ಯೇಷ್ಠನಾದ ಅವನಿಗೆ ಅಭಿಷೇಕವಾಗುವುದು ಕ್ರಮವಾಗಿರಲಿಲ್ಲವೇ ? (ಅವನಲ್ಲಿ) ಸೋದರರು ಪ್ರೀತಿ ತೋರುತ್ತಿರಲಿಲ್ಲವೇ ? ಪ್ರಜೆಗಳು (ಅಭಿಷೇಕವನ್ನು) ಒಪ್ಪುತ್ತಿರಲಿಲ್ಲವೇ ? ಭರತನು ಕೇಳುವ ಈ ಪ್ರಶ್ನೆಗಳ ಶೈಲಿ ಮನೋಜ್ಞವಾಗಿದೆ.

**जात शुल्कलुब्धा ननु प्रष्टव्या** — 'ಮಗು, ಶುಲ್ಕಲುಬ್ಧಳನ್ನು ಕೇಳು' ಎಲ್ಲರೂ 'ಶುಲ್ಕ—ಕನ್ಯಾಶುಲ್ಕ' ವೆಂದು ತಪ್ಪುಭಾವಿಸಿ ಕೈಕೇಯಿಯನ್ನು ನಿಂದಿಸಿ ಮಾತನಾಡುತ್ತಾರೆ. ಅವಳಿಗೆ ಈ ಅಭಿಪ್ರಾಯವೇ ಇಲ್ಲ. ಅವಳ ಬಾಯಿಂದ ಕವಿ ಆ ಮಾತನ್ನು ಅನರ್ಥಕಾರಣವಾಗಿ ಆಡಿಸಿಯೂ ಇಲ್ಲ. ದಶರಥನನ್ನು ಸತ್ಯಸಂಧನನ್ನಾಗಿ ಮಾಡುವುದೂ, ರಾಮನಿಗೆ ಅಪಾಯವನ್ನು ತಪ್ಪಿಸುವುದೂ ಅವಳ ಉದ್ದೇಶ.

**ಶ್ಲೋಕ 21** (ಅನುಷ್ಟುಪ್) — हृतराज्यश्रीः आर्यः वल्कलैः सहितः पदातिः भार्यया सह वनवासं त्वया आज्ञप्तः एतत् अपि शुल्के उदाहृतम् ।

'ರಾಜ್ಯ ಕಳೆದುಕೊಂಡ ಆರ್ಯನು ನಾರುಮಡಿ ಧರಿಸಿ, ಕಾಲ್ನಡಿಗೆಯಲ್ಲಿ ಪತ್ನಿಯೊಡನೆ ವನವಾಸ ಮಾಡುವಂತೆ ನಿನ್ನಿಂದ ಆಜ್ಞಾಪಿಸಲ್ಪಟ್ಟನಲ್ಲ—ಇದೂ ಶುಲ್ಕದಲ್ಲಿ ಹೇಳಿತ್ತೋ ?

**हृतराज्यश्रीः** — हृता राज्यश्रीः यस्मात् (तथाभूतः) (ಬಹುವ್ರೀಹಿ).

पुरा भ्रातः पिता नः स मातरं ते समुद्वहन् ।
मातामहे समाश्रौषीद्राज्यशुल्कमनुत्तमम् ।।

(ರಾಮಾಯಣ, ಅಯೋಧ್ಯಾಕಾಂಡ ಸರ್ಗ 107, ಶ್ಲೋಕ 3)

**जात देशकाले निवेदयामि** — ಪುತ್ರ, ಉಚಿತ ಜಾಗದಲ್ಲಿ ಉಚಿತ ಕಾಲದಲ್ಲಿ ವಿವರಿಸುತ್ತೇನೆ. ಎಂದು, ಎಲ್ಲಿ ಹೇಳಬೇಕೋ ಅಂದು, ಅಲ್ಲಿ ಇದನ್ನು ಹೇಳುವೆ ಎಂಬ ಅರ್ಥ. ನಾಟಕಕ್ಕೆ ತಿರುವನ್ನು ಕೊಡುವ ಮುಖ್ಯ ವಾಕ್ಯವಿದು.

ಪುಟ 29

**ಶ್ಲೋಕ 22** (ಮಾಲಿನೀ) — यदि अयशसि ते लोभः (तर्हि) अस्मान् कीर्तयित्वा किं (प्रयोजनम्?) अयं नृपफलतर्षः किम्? (एवं चेत्) नरेन्द्रः किं न दद्यात्? अथ तु नृपतिमाता इति शब्दः तव इष्टः चेत्, भवति सत्यं वदतु आर्यः तव पुत्रः न (किम्)?

ಅಪಕೀರ್ತಿ ಪಡೆಯುವ ಆಸೆ ಇದ್ದರೆ ನನ್ನ ಹೆಸರನ್ನು ಉದ್ಘೋಷಿಸುವ ಪ್ರಯೋಜನವೇನು? ಇದೇನು ರಾಜ್ಯಸುಖವನ್ನು ಅನುಭವಿಸುವ ಆಸೆಯೋ? ಹಾಗಿದ್ದರೆ ರಾಜನು ಅದನ್ನು ಒದಗಿಸಲಾರದಾಗಿದ್ದನೇ? ಒಂದು ವೇಳೆ 'ರಾಜಮಾತೆ' ಎಂಬ ಹೆಸರು ನಿನಗೆ ಇಷ್ಟವಾಗಿದ್ದರೆ, ಸತ್ಯವಾಗಿ ಹೇಳು, ಆರ್ಯನು ನಿನ್ನ ಪುತ್ರನಲ್ಲವೇ?

तर्षः — ತೃಷ್ಣೆ ; ದಾಹ ; ಅತ್ಯಾಸೆ.

**ಶ್ಲೋಕ 23** (ಶಿಖರಿಣೀ ವೃತ್ತ) — राज्यैषिण्या त्वया असुभिः वियुज्यमानः नृपतिः न गणितः एव, त्वं ज्येष्ठसुतं 'वनं व्रज' इति प्रेषितवती च, हे भवति वल्कलवतीं जनकतनयां दृष्ट्वा यत् तव हृदयं न शीर्णं, अहो! तव तत् हृदयं धात्रा वज्रकठिनं सृष्टम्।

ರಾಜ್ಯಕಾಂಕ್ಷಿಣಿಯಾದ ನೀನು ಮಹಾರಾಜನ ಪ್ರಾಣವನ್ನೂ ಲೆಕ್ಕಿಸಲಿಲ್ಲ! ಮತ್ತು ಹಿರಿಯ ಪುತ್ರ (ಆರ್ಯ) ನನ್ನು 'ನೀನು ಕಾಡಿಗೆ ಹೋಗು' ಎಂದು ಕಳಿಸಿದೆ. ನಾರುಡೆ ಧರಿಸಿದ ಸೀತೆಯನ್ನು ನೋಡಿಯೂ ಅಯ್ಯೋ ನಿನ್ನ ಹೃದಯ ಸೀಳಲಿಲ್ಲವಲ್ಲ! ಬ್ರಹ್ಮನು ನಿನ್ನ ಹೃದಯವನ್ನು ವಜ್ರದಂತೆ ಕಠಿಣವಾಗಿ ಸೃಷ್ಟಿಸಿದ್ದಾನೆ.

**कुमार . . . . विज्ञापयतः** — ಕೈಕೇಯಿಯನ್ನು ಒಂದೇ ಸಮನೆ ನಿಂದಿಸುತ್ತಿದ್ದ ಭರತನ ಮನಸ್ಸನ್ನು ಸುಮಂತ್ರನು ಬೇರೆ ವಿಷಯಕ್ಕೆ ತಿರುಗಿಸಲು ಈ ಮಾತನ್ನು ಹೇಳುವನು.

**ಶ್ಲೋಕ 24** (ಅನುಷ್ಟುಪ್) — यथा गोपहीनाः गावः अपालिताः विलयं यान्ति। एवं हि नृपतिहीनाः प्रजाः अपालिताः विलयं यान्ति वै।

ಯಾವ ರೀತಿ ರಕ್ಷಕನಿಲ್ಲದ ಗೋವುಗಳು ರಕ್ಷಣೆ ತಪ್ಪಿ ವಿನಾಶಗೊಳ್ಳುವವೋ ಹಾಗೆಯೇ ರಾಜನಿಲ್ಲದ ಪ್ರಜೆಗಳೂ ಸಹ ರಕ್ಷಣೆ ತಪ್ಪಿ ವಿನಾಶಗೊಳ್ಳುವರು.

**ಶ್ಲೋಕ 25** (ಅನುಷ್ಟುಪ್) — यत्र असौ लक्ष्मणप्रियः वर्तते तत्र अहं यास्यामि। तं विना अयोध्या न अयोध्या, यत्र राघवः वर्तते सा अयोध्या।

ಎಲ್ಲಿ ಲಕ್ಷ್ಮಣನಿಗೆ ಪ್ರೀತಿಪಾತ್ರನಾದ ರಾಮನಿದ್ದಾನೆಯೋ ಅಲ್ಲಿಗೇ ಹೋಗುತ್ತೇನೆ; ಅವನಿಲ್ಲದ ಅಯೋಧ್ಯೆ ಅಯೋಧ್ಯೆಯಲ್ಲ. ಎಲ್ಲಿ ರಾಮನಿದ್ದಾನೆಯೋ ಅದೇ ಅಯೋಧ್ಯೆ.

**लक्ष्मणप्रियः** — लक्ष्मणः प्रियः यस्य सः (ಬಹುವ್ರೀಹಿ). तं विना .... **अयोध्या** — ರಾಮನಿಲ್ಲದ ಅಯೋಧ್ಯೆ ಕಾಡು. ರಾಮನಿರುವ ಕಾಡೂ ಅಯೋಧ್ಯೆ ಎಂದು ಅಯೋಧ್ಯೆಯೊಳಕ್ಕೆ ಪ್ರವೇಶಿಸದೆ ಹಾಗಿಂದ ಹಾಗೆ ಹೊರಟುಬಿಡುತ್ತಾನೆ.

ಕರುಣರಸಸ್ಯಂದಿಯಾದ ಈ ಅಂಕ ನಾಟಕದ ಉತ್ತಮ ಭಾಗವಾಗಿದೆ. ಇಲ್ಲಿನ ಕಲ್ಪನಾವೈಭವವೂ ಪದಪ್ರಯೋಗವೂ ವಾಕ್ಯವಿನ್ಯಾಸವೂ ಭಾಸನ ಕೀರ್ತಿಯನ್ನು ಅಮರವಾಗಿಸಿವೆ.

ಪುಟ 30

## ಅಂಕ ೪

**ದೃಶ್ಯ** — ಮೊದಲು ಪ್ರವೇಶಕದಲ್ಲಿ—ಅಯೋಧ್ಯೆಯ ಅರಮನೆ. ಅನಂತರ ಚಿತ್ರಕೂಟದಲ್ಲಿನ ರಾಮನ ಆಶ್ರಮ.

**ಕಾಲ** — ಮೂರನೆಯ ಅಂಕದ ಪ್ರಸಂಗಗಳ ಅನಂತರ ಕೆಲ ದಿನಗಳು ಕಳೆದ ಮೇಲೆ.*

**प्रवेशकः** — ಈ ಪ್ರವೇಶಕದಲ್ಲಿ ಚೇಟಿಯರ ಸಂಭಾಷಣೆಯಿಂದ—ಅರಮನೆಯಲ್ಲಿ ಮತ್ತು ಹೊರಗೆ—ಎಲ್ಲರೂ ಕೈಕೇಯಿಯನ್ನು ನಿಂದಿಸುತ್ತಿದ್ದರೆಂಬುದೂ ಭರತನು ಪ್ರಜೆಗಳು ತಂದ ' ಅಭಿಷೇಕ ' ವನ್ನು ಒಪ್ಪದೆ ರಾಮ ತಪೋವನಕ್ಕೆ ಹೊರಟುಹೋದನೆಂಬುದೂ ತಿಳಿಯುತ್ತದೆ.

ಪುಟ 31

**ಶ್ಲೋಕ 1** (ವಸಂತತಿಲಕ) — सुकृतानुयात्रे नरपतौ स्वर्गं गते (सति) पौराश्रुपातसलिलैरनुगम्यमानः अहं अकृपणेषु तपोवनेषु रामाभिधानं जगतः अपरं शशाङ्कं द्रष्टुं प्रयामि ।

ಪುಣ್ಯದಿಂದೊಡಗೂಡಿದ ರಾಜನು ಸ್ವರ್ಗಕ್ಕೆ ತೆರಳಲು ಪ್ರಜೆಗಳ ಕಣ್ಣೀರಿನಿಂದ ಹಿಂಬಾಲಿಸಲ್ಪಡುತ್ತಿರುವವನಾದ ನಾನು ಉದಾರವಾದ ತಪೋವನಗಳಲ್ಲಿ ರಾಮನೆಂಬ ಹೆಸರಿನ ಜಗತ್ತಿನ ಇನ್ನೊಬ್ಬ ಚಂದ್ರನನ್ನು ಕಾಣಲು ಹೊರಟಿದ್ದೇನೆ (ರೂಪಕಾಲಂಕಾರ).

---

* ಪರಾಂಜಪೆಯವರು 14–15 ದಿನಗಳಾದರೂ ಕಳೆದ ಮೇಲೆ ಎನ್ನುತ್ತಾರೆ. ಅಷ್ಟೇ ಅಲ್ಲ; ಅವರ ಪ್ರಕಾರ ಒಂದು ತಿಂಗಳು ಕಳೆದ ಮೇಲೆ. ರಾಮಾಯಣದಲ್ಲಿಯೂ ಹೀಗೆಯೇ ಹೇಳಿದೆ. ‘ಓಪರೋಟ’ ಯವರು ಪ್ರಯಾಣಕ್ಕೆ ಬೇಕಾಗಿದ್ದ ಕೇವಲ 1½ ಅಥವಾ 2 ದಿನಗಳ ಅನಂತರ ಈ ಅಂಕದ ಮುಖ್ಯ ದೃಶ್ಯ ಆರಂಭವಾಗುತ್ತದೆಂದೂ ಅಭಿಪ್ರಾಯ ಪಡುತ್ತಾರೆ. ಇವರು ಶತ್ರುಘ್ನನೇ ದಶರಥನ ಉತ್ತರಕ್ರಿಯಾದಿಗಳನ್ನು ಮಾಡಿರಬೇಕೆಂದು ಊಹಿಸುತ್ತಾರೆ. ಭಾಸನ ರೀತ್ಯ ಶತ್ರುಘ್ನನು ಎಲ್ಲಿದ್ದನೆಂಬುದೂ ಚರ್ಚೆಯ ವಿಷಯವಾಗಿದೆ.

**सुकृतानुयात्रे** — सुकृतं पुण्यं अनुयात्रा यस्य तस्मिन् । **अकृपणम्**—ಉದಾರವಾದ—ವಿಸ್ತಾರವಾದ ನಗರವು ರಾಮನನ್ನು ಬಿಟ್ಟುಕೊಳ್ಳಲಿಲ್ಲ. ತಪೋವನಕ್ಕೆ ಆ ಔದಾರ್ಯವಿದೆ ಎಂಬ ಅರ್ಥವೂ ಧ್ವನಿತ.

**ಶ್ಲೋಕ 2** (ವಸಂತತಿಲಕ) — दैत्येन्द्रमानमथनस्य नृपस्य पुत्रः यज्ञोपयुक्तविभवस्य नृपस्य पौत्रः, पितुः प्रियकरस्य जगत्प्रियस्य रामस्य भ्राता (एषः भरतः) रामसदृशेन पथा प्रयाति ।

ಅಸುರೇಂದ್ರರ ಗರ್ವವನ್ನು ಮುರಿದ ರಾಜನ (ದಶರಥನ) ಮಗ, ಯಜ್ಞದಲ್ಲಿ ತನ್ನ ಸರ್ವಸ್ವವನ್ನೂ ತ್ಯಾಗಮಾಡಿದ ರಾಜನ (ಅಜನ) ಮೊಮ್ಮಗ; ತಂದೆಗೆ ಅಚ್ಚುಮೆಚ್ಚಾದ ಜಗತ್ಪ್ರಿಯನಾದ ರಾಮನ ತಮ್ಮ—ಈ ಭರತನು ರಾಮನಿಗೆ ಸದೃಶವಾದ ಮಾರ್ಗದಲ್ಲೇ ನಡೆಯುತ್ತಿದ್ದಾನೆ.

**दैत्येन्द्रमानमथनस्य** — दैत्याणां मानस्य मथनः (ध्वंसकः) तस्य । **यज्ञोपयुक्तविभवस्य**—यज्ञेषु उपयुक्तो विभवः येन सः, तस्य—ಅಜ. ಇದನ್ನು ದಿಲೀಪ ಅಥವಾ ರಘುವಿಗೆ ಹೇಳಿದ್ದರೆ ಹೆಚ್ಚು ಒಪ್ಪುತ್ತಿತ್ತು.

**प्रतिनिधिः** — ज्येष्ठभ्राता पितुः समः ಎಂಬ ಮಾತನ್ನು ನೆನೆಯಬೇಕು. **सन्निदर्शनं सारवताम्** — ಮನಃಸ್ಥೈರ್ಯದ ಉತ್ತಮ ನಿದರ್ಶನ. **प्रत्यादेश**—ನಿರಾಕೃತಿ.

**ಶ್ಲೋಕ 3** (ಅನುಷ್ಟುಪ್) — येन मम मातुः प्रियं कर्तुं लक्ष्मीः विसर्जिता तं मम परमं दैवतं द्रष्टुम् इच्छामि ।

ನನ್ನ ಮಾತೆಗೆ ಪ್ರೀತಿಯುಂಟುಮಾಡುವುದಕ್ಕಾಗಿ ಯಾರಿಂದ ರಾಜ್ಯಲಕ್ಷ್ಮಿಯು ತ್ಯಜಿಸಲ್ಪಟ್ಟಳೋ ಆ ನನ್ನ ಶ್ರೇಷ್ಠದೇವತೆಯನ್ನು ನೋಡಬಯಸುತ್ತೇನೆ.

**मम परमं दैवतं** — ಆಗಲೇ ರಾಜನ ಪ್ರತಿಸಿಧಿ ಎಂದ; ಈಗ ನನ್ನ ಶ್ರೇಷ್ಠ ದೇವತೆ ಎಂದು ರಾಮನನ್ನು ಕುರಿತು ಹೇಳುತ್ತಾನೆ. ಭರತನ ಭಕ್ತಿ ಕ್ಷಣ ಕ್ಷಣಕ್ಕೆ ಹೆಚ್ಚುತ್ತಿದೆ.

**ಶ್ಲೋಕ 4** (ಅನುಷ್ಟುಪ್) — येषु सत्यं शीलं भक्तिः च विग्रहवत् स्थिता (ते) महायशाः रामः च लक्ष्मणः च सीता च (वसन्ति)।

ಯಾರಲ್ಲಿ ಸತ್ಯ, ಶೀಲ ಮತ್ತು ಭಕ್ತಿ ಮೂರ್ತಿವೆತ್ತಿದೆಯೋ ಆ ಮಹಾಯಶ ರಾಮ, ಲಕ್ಷ್ಮಣ ಮತ್ತು ಸೀತೆ ಇಲ್ಲಿ ವಾಸಿಸುತ್ತಾರೆ.

**विग्रहवत्** — ಮೂರ್ತಿವೆತ್ತಿದಂತೆ (ಮೈ ತಳೆದಂತೆ) ಇಲ್ಲಿ ಸತ್ಯ, ಶೀಲ ಮತ್ತು ಭಕ್ತಿ ಕ್ರಮವಾಗಿ ರಾಮ, ಲಕ್ಷ್ಮಣ ಮತ್ತು ಸೀತೆಯ ರೂಪ ತಾಳಿದೆ—ಎಂದೂ ಅರ್ಥ

ಮಾಡಬಹುದು. ಭಾಸನು 'च' ಕಾರವನ್ನು ಹೀಗೆ ಅನೇಕ ಬಾರಿ ಉಪಯೋಗಿಸುತ್ತಾನೆ. ಇವನು ಪ್ರಾಚೀನ ಕವಿ ಎನ್ನಲು ಇದೂ ಒಂದು ಕಾರಣ.

ಪುಟ 32

**व्यङ्गभूतः** — ಕಳಂಕನಾದ.

**किं ब्रह्मघ्नानामपि....क्रियते** — ಬ್ರಹ್ಮಹತ್ಯೆ ಮಾಡಿದವರ ಹೆಸರನ್ನು ಬೇರೆಯವರು ಹೇಳುವುದು ಉಚಿತವೇ ?—ತನ್ನನ್ನು ಬ್ರಹ್ಮಹತ್ಯಾಪಾತಕಿ ಎಂದು ದೂಷಿಸಿಕೊಳ್ಳುವ ಭರತನ ಮಾತಿದು. ತನ್ನ ತಾಯಿಯ ಅಪರಾದ ತನ್ನ ಅಪರಾಧವೆಂದೇ ಈಗ ಅವನ ಭಾವ.

**ಶ್ಲೋಕ 5** (ಅನುಷ್ಟುಪ್) — **कश्चित् निर्घृणः कृतघ्नः च प्राकृतः प्रियसाहसः च (किंतु) भक्तिमान् आगतः, सः कथं तिष्ठतु (उत) यातु इति (निवेद्यताम्)।**

ನಿರ್ದಯಿಯೂ ಅಕೃತಜ್ಞನೂ ಅಸಂಸ್ಕೃತನೂ ಸಾಹಸಪ್ರಿಯನೂ ಆದರೆ—ನಿನ್ನಲ್ಲಿ ಭಕ್ತಿಭಾವಪೂರ್ಣನೂ ಆದ ಯಾರೋ ಒಬ್ಬನು ನಿನ್ನ ದರ್ಶನಕ್ಕಾಗಿ ಬಂದಿದ್ದಾನೆ. ಅವನು ನಿಲ್ಲಬಹುದೋ ಹೋಗಬಹುದೋ (ದಯೆಮಾಡಿ ಅಪ್ಪಣೆಸು) ಎಂದು ತಿಳಿಸಲ್ಪಡಲಿ.

**निर्घृणः** — घृणा–ದಯೆ ; न विद्यते घृणा यस्मिन् सः ಬಹುವ್ರೀಹಿ.

**कृतघ्नः** — कृतं हन्तीति ; कृतज्ञः ಎನ್ನುವುದರ ವಿರುದ್ಧಾರ್ಥ ಶಬ್ದ.

**प्रियसाहसः** — ಸಾಹಸಪ್ರಿಯ. ರಾಮನು **ದರ್ಶನ** ನೀಡುವನೋ ಇಲ್ಲವೋ ಒಂದೂ ಯೋಚಿಸದೆ ಅರಣ್ಯಕ್ಕೆ ಓಡಿಬಂದಿರುವುದೇ ಸಾಹಸ.

**भक्तिमान्** — ತಾನು ಮೇಲೆ ಹೇಳಿದ ನಾಲ್ಕು ದೋಷಗಳಿಂದ ಕೂಡಿ ರಾಮದರ್ಶನಕ್ಕೆ ಅನರ್ಹನಾದರೂ 'ರಾಮಭಕ್ತಿ' ಯಿರುವುದರಿಂದ ತನಗೆ ಅವಕಾಶ ಕಲ್ಪಿಸಿಕೊಟ್ಟರೆ ಧನ್ಯನೆಂಬ ಭಾವ.

**ಶ್ಲೋಕ 6** (ಪ್ರಹರ್ಷಿಣೀ) — **सस्नेहः यः स्वरः (मम) हृदयस्य बन्धुशङ्कां कुर्वन् मम श्रुतिपथं इष्टतः प्रविष्टः, मे पितुः सदृशतरः असौ स्वरः कस्य ? (सः स्वरः गाम्भीर्यात् मेघनादं परिभवति इव (श्रूयते)।**

ನಮ್ಮ ತಂದೆಯ ಧ್ವನಿಗೆ ಬಹುಸದೃಶವಾದ ಈ ಧ್ವನಿ ಯಾರದಿರಬಹುದು ? ತನ್ನ ಗಾಂಭೀರ್ಯದಿಂದ ಘನಗರ್ಜಿತವನ್ನೂ ಪರಾಭವಗೊಳಿಸುತ್ತಿದೆ. ಪ್ರೀತಿ ತುಂಬಿದ ಈ ಧ್ವನಿ ಯಾರದೋ ಬಂಧುಗಳದ್ದೇ ಇರಬೇಕೆಂಬ ಶಂಕೆಯನ್ನೂ ನನ್ನ ಹೃದಯಕ್ಕೆ ತಂದು ಹಿತವಾಗಿ ಕಿವಿಯನ್ನು ಪ್ರವೇಶಿಸುತ್ತಿದೆ.

**ಶ್ಲೋಕ 7 (ಶಿಖರಿಣೀ)** — घनः स्पष्टः धीरः समदवृषभस्निग्धमधुरः कलः, कण्ठे वक्षसि अनुपहतसञ्चाररभसः (एषः स्वरः) यथास्थानं प्राप्य स्फुटकरण-नानाक्षरतया चतुर्णां वर्णानां अभयं दातुं व्यवसितः इव ।

ಸಾಂದ್ರವೂ ಸ್ಫುಟವೂ ಗಂಭೀರವೂ ಮದ ತುಂಬಿದ ವೃಷಭದ ಇಂಪಾದ ಸ್ವರದಂತೆ ಮಧುರವೂ ಮೃದುವೂ ಆದ ಈ ಸ್ವರಸಂಯೋಗವು, ಕಂಠ, ಎದೆ ಮೊದಲಾದ ಎಂಟು ಉಚಿತಸ್ಥಾನಗಳಿಂದ ಅಸ್ಖಲಿತ ವೇಗದಿಂದ ಸಂಚರಿಸಿ, ಅಕ್ಷರಗಳ ಸ್ಪಷ್ಟ ಉಚ್ಚಾರಣಾ ಪ್ರಯತ್ನದಿಂದ ಕೂಡಿ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ) ನಾಲ್ಕು ವರ್ಣಗಳಿಗೂ 'ಅಭಯ'ವನ್ನು ಕೊಡಲು ತೊಡಗಿದೆಯೋ ಎಂಬಂತೆ ಇದೆ.

**घनः** = ಸಾಂದ್ರವಾದ, स्पष्टः = ಸ್ಫುಟವಾದ, धीरः = ಗಂಭೀರವಾದ. कलः = ಮೃದುವಾದ.

**समदवृषभस्निग्धमधुरः** — मदेन सहितः समदः यः वृषभः तस्य इव स्निग्धो मधुरश्च ।

**यथास्थानं प्राप्य**—ವರ್ಣಗಳ ಸ್ಥಾನ ಎಂಟು—ಅವುಗಳಲ್ಲಿ ತಮ್ಮ ಉಚಿತ ಸ್ಥಾನ ಪಡೆದು—

"अष्टौ स्थानानि वर्णानामुरःकण्ठः शिरस्तथा ।
जिह्वामूलं च दन्ताश्च नासिकोष्ठौ च तालु च ॥"

**स्फुटकरण** —'इन्द्रियकर्म' (ಎಂ. ಆರ್. ಕಾಳೆ) ಉಚ್ಚಾರಣಪ್ರಯತ್ನ ಒಬ್ಬ ವ್ಯಕ್ತಿಯ ಧ್ವನಿಯನ್ನು ಸ್ಫುಟವಾಗಿ ಸಂಪೂರ್ಣವಾಗಿ ಮನೋಜ್ಞವಾಗಿ ವಿವರಿಸಿರುವುದು ಇಲ್ಲಿನ ವಿಶೇಷ.

**नायमबान्धवस्य स्वरसंयोगः** — ಇದು ಬಂಧುಗಳಲ್ಲದವರ ಧ್ವನಿಯಂತೂ ಅಲ್ಲ.

**मे हृदयं क्लेदयति इव** — ನನ್ನ ಹೃದಯವನ್ನೇ ಕರಗಿಸುವಂತೆ (ಇದೆ).

**किन्नु खलु. . . .प्राप्त इति** — ಬಂದಿರುವುದು 'ಕೈಕೇಯಿಯ ಮಗ ಭರತ' ಎಂದೇನಾದರೂ ತಿಳಿದುಬಿಟ್ಟಿತೋ—ಸ್ವಲ್ಪ ಕಾಲ ಅವನು ಕೂಗಿದರೂ ಉತ್ತರ ಬರದೆ ಇದ್ದುದರಿಂದ ಅವನಿಗೆ ಈ ಸಂಶಯ.

ಪುಟ 33

**अये अयमार्यो रामः न न । रूपसादृश्यम्** — ಇವನು ಅಣ್ಣ ರಾಮ ಅಲ್ಲ, ಅಲ್ಲ. ರೂಪಿನಿಂದ ಅವನ ಸಾದೃಶ್ಯವುಳ್ಳವನು. ಸಾದೃಶ್ಯ ಸಿದ್ಧಾಂತ ಮತ್ತೆ ರಮ್ಯವಾಗಿ ಸೂಚಿತವಾಗಿದೆ. ಆಗ ಧ್ವನಿ ಸಾದೃಶ್ಯ; ಈಗ ರೂಪ ಸಾದೃಶ್ಯ.

**ಶ್ಲೋಕ 8** (ಹರಿಣೀ) — अस्य शशाङ्कमनोहरं अनुपमं मुखं आर्यस्य (मुखस्य) आभम्। (अस्य) पीनं वक्षः सुरारिशरक्षतं पितृवक्षसमम्; द्युतिपरिवृतः तेजोराशिः जगत्प्रियदर्शनः अयं स्वयं नरपतिः किम्? वा देवेन्द्रः किं (उत) मधुसूदनः (किम्?)

ಇವನ ಅನುಪಮವೂ ಚಂದ್ರನಂತೆ ಆಹ್ಲಾದಕರವೂ ಆದ ಮುಖ ಅಣ್ಣನ ಮುಖದ ಕಾಂತಿಯನ್ನು ಪಡೆದಿದೆ. ಇವನ ಉಬ್ಬಿದ ಎದೆಯು ಅಸುರ ಶರಘಾತ ಪಡೆದ ತಂದೆ ದಶರಥನ ಎದೆಯಂತಿದೆ. ಪ್ರಭಾವಪರಿವೃತವಾಗಿ ತೇಜಸ್ಸಿನ ರಾಶಿಯಾಗಿ ಲೋಕಾನಂದಕರವಾಗಿರುವ ಇವನು ದಶರಥರಾಜನೇ ಇರಬಹುದೆ? ಅಥವಾ ದೇವರಾಜನೋ? ಮಧುಸೂದನನೋ?

**आभम्** — ಕಾಂತಿಯುಳ್ಳದ್ದು. **सुरारिशरक्षतम्** — ದೇವತೆಗಳ ಸಹಾಯಕ್ಕಾಗಿ ರಾಕ್ಷಸರ ಮೇಲೆ ಯುದ್ಧಮಾಡಿದಾಗ ಅವರ ಬಾಣಗಳು (ದಶರಥನ) ಎದೆಗೆ ತಟ್ಟಿ ಗಾಯವಾಗಿತ್ತು. ಅದಕ್ಕೆ ಅವನು ಜಗ್ಗಿರಲಿಲ್ಲ. ಆ ಗಾಯಗಳು ಕೀರ್ತಿಚಿಹ್ನೆಗಳಾಗಿತ್ತು.

**ಶ್ಲೋಕ 9** (ಉಪೇಂದ್ರವಜ್ರಾ) — अयं रघोः चतुर्थः अजात् तृतीयः प्रकाशस्य तव पितुः द्वितीयः। स्वकुलस्य केतोः यस्य त्वं अनुजः तस्यायं अनुजः कुमारः भरतः।

ಇವನು ರಘುವಿನಿಂದ ನಾಲ್ಕನೆಯವನು. ಅಜನಿಂದ ಮೂರನೆಯವನು. ತೇಜಸ್ವಿಯಾದ ನಿನ್ನ ತಂದೆಯಿಂದ ಎರಡನೆಯವನು. ತನ್ನ ವಂಶಕ್ಕೇ ವೈಜಯಂತಿ ಎನಿಸಿರುವ ಯಾವ ರಾಮನ ತಮ್ಮನು ನೀನಾಗಿದ್ದೀಯೋ ಅದೇ ರಾಮನ ತಮ್ಮ ಕುಮಾರ ಭರತನಿವನು.

**रघोः चतुर्थः** — ರಘುವಿನಿಂದ ನಾಲ್ಕನೆಯವನು. ಪ್ರತಿಮಾ ದೃಶ್ಯದಲ್ಲೂ ಇಲ್ಲೂ ಹೇಳಿರುವ ವಂಶದ ಕ್ರಮ ಹೀಗಿದೆ. ದಿಲೀಪ, ರಘು, ಅಜ, ದಶರಥ ಮತ್ತು ಅವನ ನಾಲ್ಕು ಮಕ್ಕಳು ರಾಮ, ಲಕ್ಷ್ಮಣ, ಭರತ, ಶತ್ರುಘ್ನರು. ಈ ಕ್ರಮವನ್ನೇ ಕಾಳಿದಾಸನೂ ರಘುವಂಶದಲ್ಲಿ ಅನುಸರಿಸಿದ್ದಾನೆ.

**ಶ್ಲೋಕ 10** (ಮಾಲಿನೀ) — असुरसमरदक्षैः वज्रसंघृष्टचापैः अनुपमबलवीर्यैः स्वैः कुलैः तुल्यवीर्यः (त्वं) यज्ञविश्रान्तकोशः नरेन्द्रः रघुः इव जगति भ्राजितानां गुणानां भाजनं भव।

ರಾಕ್ಷಸರೊಡನೆ ಮಾಡಿದ ಯುದ್ಧಗಳಲ್ಲಿ ದಕ್ಷರೆನಿಸಿದವರೂ ವಜ್ರಾಯುಧದೊಡನೆ ಸ್ಪರ್ಧಿಸುತ್ತಿದ್ದ ಧನುಸ್ಸುಳ್ಳವರೂ ಅತುಳಪರಾಕ್ರಮಿಗಳೂ ಆದ ನಮ್ಮ ಹಿರಿಯರನ್ನೇ ಹೋಲುವ ಶೂರನಾದ ನೀನು ಯಜ್ಞದಲ್ಲಿ ದಾನಮಾಡಿ ಬರಿದಾದ ರಾಜ್ಯಕೋಶವುಳ್ಳ ರಘು ಮಹಾರಾಜನಂತೆಯೇ ಉದಾತ್ತ ಗುಣಗಳ ಪಾತ್ರನಾಗು.

**वज्रसंघृष्टचापैः:** —ವಜ್ರಾಯುಧದೊಡನೆ ಮಸೆಯುತ್ತಿದ್ದ (ಅಥವಾ ಸ್ಪರ್ಧಿಸುತ್ತಿದ್ದ) ಕೋದಂಡವುಳ್ಳವರು. ಒಂದೇ ಕಡೆ ಯುದ್ಧದಲ್ಲಿ ತೊಡಗಿ ಇಂದ್ರನೂ ಇವರೂ ಒಟ್ಟಿಗೆ ಸೇರಿ ತಮ್ಮ ಶೌರ್ಯದಿಂದ ರಾಕ್ಷಸರನ್ನು ಸದೆಬಡಿಯುವ ಆ ರಭಸದಲ್ಲಿ ಅನೇಕ ವೇಳೆ ಇವರ ಧನುಸ್ಸು ಇಂದ್ರನ ವಜ್ರಾಯುಧಕ್ಕೂ ತಾಕುತ್ತಿತ್ತು. ಅಥವಾ ರಾಕ್ಷಸ ವಿನಾಶದಲ್ಲಿ ವಜ್ರಾಯುಧದೊಡನೆ ಸ್ಪರ್ಧಿಸುತ್ತಿತ್ತು ಎಂಬ ಭಾವ.

**यज्ञविभ्रान्तकोशः:** — ಯಜ್ಞದಲ್ಲಿ ಸಮಸ್ತವನ್ನೂ ದಾನಮಾಡಿದ ಕೋಶವುಳ್ಳವನು ರಘು ಮಹಾರಾಜ. ಸೂರ್ಯವಂಶದ ಹಿಂದಿನ ರಾಜರಲ್ಲಿ ಶ್ರೇಷ್ಠನಾದವನು ರಘು. ಎಲ್ಲ ಆದರ್ಶ ಗುಣಗಳೂ ಅವನಲ್ಲಿ ನೆಲೆಮಾಡಿದ್ದುವು. ಪರಾಕ್ರಮದಲ್ಲಿ, ಧರ್ಮನಿಷ್ಠೆಯಲ್ಲಿ ಅವನು ಆದರ್ಶಪ್ರಾಯ. ಅವನ ಗುಣಗಳನ್ನು ನೀನೂ ಪಡೆ ಎಂದು ಲಕ್ಷ್ಮಣನ ಆಶೀರ್ವಾದ ಉಚಿತವಾಗಿಯೇ ಇದೆ. ಇದನ್ನು ಕಂಡೇ ಕಾಳಿದಾಸನು ಈ ವಂಶವನ್ನು ಮಾತ್ರವಲ್ಲದೇ ತನ್ನ ಕೃತಿಯನ್ನೂ ರಘುವಂಶವೆಂದೇ ಕರೆದಿರುವುದು.

**भाजनम्** — ಪಾತ್ರ. भ्राजितानाम् — ಹೊಳೆಯುವ, ಅಂದರೆ ಉದಾತ್ತವಾದ.

**ಶ್ಲೋಕ 11** (ಅನುಷ್ಟುಪ್) — यत्र ते रूपं आदर्शे संक्रान्तं इव भाति भ्रातृवत्सलः ते दयितः भ्राता अयं भरतः।

ಯಾರಲ್ಲಿ ನಿನ್ನ ರೂಪವೇ ಕನ್ನಡಿಯಲ್ಲಿ ಪ್ರತಿಬಿಂಬಿಸಿದಂತೆ ಭಾಸವಾಗುತ್ತಿದೆಯೋ ಅಂತಹ ಭ್ರಾತೃಪ್ರೇಮಿಯೂ ನಿನ್ನ ಪ್ರಿಯ ಸಹೋದರನೂ ಆದ ಭರತನು (ಕಾದು) ನಿಂತಿದ್ದಾನೆ.

**ते रूपं आदर्शे** —ಕನ್ನಡಿಯಲ್ಲಿ ಪ್ರತಿಬಿಂಬಿತವಾದ ನಿನ್ನ ರೂಪ. ಭರತನೂ ರೂಪಿನಲ್ಲಿ ರಾಮನೇ! ರಾಮನು ಕೇಳಿದಂತೆಯೇ ಸೀತೆಯೂ किं भरतः आगतः ಎಂದು ಕೇಳುತ್ತಾಳೆ. ಭರತನ ಆಗಮನ ಎಲ್ಲರಲ್ಲೂ ಸಂಭ್ರಮವನ್ನು ತರುತ್ತದೆ.

ಪುಟ 34

**ಶ್ಲೋಕ 12** (ಅನುಷ್ಟುಪ್) — मे पित्रा दुष्करं कृत इति अद्य खलु अवगच्छामि। यदि अयं भ्रातृस्नेहः ईदृशः (भवेत्) (तर्हि) (तस्य) तनयस्नेहः कीदृशः भवेत्!

ನನ್ನ ತಂದೆ ನನಗೋಸ್ಕರ ಪ್ರಾಣತ್ಯಾಗ ಮಾಡಿರಬೇಕೆಂದು ನಿಸ್ಸಂಶಯವಾಗಿ ಭಾವಿಸುತ್ತೇನೆ. ಸಹೋದರ ವಾತ್ಸಲ್ಯವೇ ಹೀಗಿರಬೇಕಾದರೆ ಪುತ್ರವಾತ್ಸಲ್ಯ ಇನ್ನು ಹೇಗಿರಬೇಕು?

**दुष्करं-प्राणत्यागादिकं** — भ्रातृस्नेहः ईदृशः—ಕೈಗೆ ಬಂದ ರಾಜ್ಯವನ್ನೂ ತ್ಯಜಿಸಿ ನನ್ನನ್ನು ಕಾಣಲು ಭರತ ಬಂದು ಸೋದರಪ್ರೇಮ ತೋರಿಸುವಾಗ (ಹೆತ್ತ ತಂದೆಯ ಪುತ್ರಪ್ರೇಮವೆಂತಹುದಾಗಿರಬೇಕು?)

**ಶ್ಲೋಕ 13** (ಉಪೇಂದ್ರವಜ್ರಾ) — माता तनये भावं इव (अस्मिन् भरते भावं) निवेश्य आसारं इव हर्षास्रं उत्सृजन्ती इयं तुषारपूर्णोत्पलपत्रनेत्रा सीता मानहेतोः स्वयं गच्छतु ।

ಪುತ್ರನಲ್ಲಿ ತಾಯಿಯು ಪ್ರೀತಿಭಾವವನ್ನು ಇಡುವಂತೆ ಇವನಲ್ಲಿಯೂ ಪ್ರೀತಿ ಭಾವವನ್ನಿಟ್ಟು ಆನಂದಬಾಷ್ಪವನ್ನು ಧಾರಾಕಾರವಾಗಿ ಸುರಿಸುತ್ತಾ, ಮಂಜಿನ ಹನಿ ತುಂಬಿದ ಕನ್ನೈದಿಲೆಯ ಎಲೆಯನ್ನು ಹೋಲುವ ಕಣ್ಣುಳ್ಳ ಈ ಸೀತೆಯು ಭರತನನ್ನು ಗೌರವಿಸಿ ಕರೆತರಲು ತಾನೇ ಹೋಗಲಿ.

ರಾಮನಿಗೆ ಸಹೋದರರಲ್ಲಿ ಅಪಾರ ವಾತ್ಸಲ್ಯ, ಪ್ರೀತಿ. ಅವರೂ ಅದಕ್ಕೆ ಸರ್ವಥಾ ಅರ್ಹರೇ. ಈ ಸಹೋದರ ಪ್ರೇಮ ರಾಮಾಯಣದಲ್ಲಿ ಪ್ರತಿಪಾದಿತವಾಗಿ ರುವ ಆದರ್ಶಗಳಲ್ಲಿ ಒಂದು.

**आसारः** — ಧಾರಾಕಾರವಾದ ಮಳೆ. हर्षास्रं—ಆನಂದಬಾಷ್ಪ, तुषार—ಹಿಮ. तुषारेण पूर्णे उत्पलपत्रे इव नेत्रे यस्याः सा = तुषारपूर्णोत्पलपत्रनेत्रा । हं तनस्तां ....आर्यपुत्रः — "ಏನಿದು ಈಗ ಅಲ್ಲೇ ಇದ್ದ ಆರ್ಯಪುತ್ರ ಈಗಾಗಲೇ ಹೊರಗೆ ಬಂದು ನಿಂತಿದ್ದಾನೆ. ಭರತನನ್ನು ಕಂಡ ಸೀತೆ ಅವನ ರೂಪಸಾದೃಶ್ಯದಿಂದ ಮೊದಲ ನೋಟದಲ್ಲಿ ಅವನನ್ನು ರಾಮನೆಂದೇ ಭ್ರಮೆಗೊಂಡು ಹೀಗೆ ಆಶ್ಚರ್ಯಗೊಳ್ಳುತ್ತಾಳೆ. ಮಾತು, ರೂಪ, ತೇಜಸ್ಸು-ಮನಸ್ಸು ಎಲ್ಲದರಲ್ಲಿಯೂ ಇವರು ಒಬ್ಬರಿಗೊಬ್ಬರು ಸದೃಶರೇ ಎಂಬುದನ್ನು ಕವಿ ನಾನಾ ವಿಧದಲ್ಲಿ ಮತ್ತೆ ಮತ್ತೆ ಸೂಚಿಸುತ್ತಿದ್ದಾನೆ.

**ಶ್ಲೋಕ 14** (ಅನುಷ್ಟುಪ್) — क्षेत्रोदरात् हलात् जातं, नृपेन्द्रस्य जनकस्य तपसः सन्निदर्शनं इदं तत् स्त्रीमयं तेजः ।

ನೇಗಿಲಿಂದ ಉಳುವ ಸಮಯದಲ್ಲಿ ಯಜ್ಞಕ್ಷೇತ್ರದಿಂದುದ್ಭವಿಸಿದ, ಜನಕರಾಜನ ಶುದ್ಧ ತಪಸ್ಸಿನ ನಿದರ್ಶನವೆನಿಸಿದ ಸ್ತ್ರೀರೂಪದ ತೇಜಸ್ಸೇ ಇವಳು.

**क्षेत्रोदरात् हलात् जातं** — ವಿದೇಹರಾಜ ಜನಕನು ಯಜ್ಞಕ್ಕೆ ಅಣಿಮಾಡಲು ಶಾಸ್ತ್ರೋಕ್ತವಾಗಿ ಭೂಮಿಯನ್ನು ಚಿನ್ನದ ನೇಗಿಲಿನಿಂದ ಉಳುತ್ತಿರಲು ಯಜ್ಞ ಭೂಮಿಯ ಗರ್ಭದಿಂದ ನೇಗಿಲಿನಿಂದ ಎತ್ತಲ್ಪಟ್ಟ ಒಂದು ಪೆಟ್ಟಿಗೆಯಲ್ಲಿ ಹೆಣ್ಣುಮಗು ವೊಂದು ಸಿಕ್ಕಿತು. ಅದಕ್ಕೆ ಸೀತಾ ಎಂದೇ ಹೆಸರಿಟ್ಟನು. 'ಸೀತಾ' ಎಂದರೆ ಉತ್ತ ಭೂಮಿಯ ರೇಖೆ ಎಂದರ್ಥ.

**ಶ್ಲೋಕ 15** (ಅನುಷ್ಟುಪ್) — (यतः) नराधिपे स्वर्गं याते (सति) एतत् मम रामस्य पूर्व-(प्रथम)-दर्शनम् । अतः रामस्य विदितार्थस्य पश्चात् प्रवेक्ष्यामि ।

ದಶರಥ ಮಹಾರಾಜನು ಮರಣಹೊಂದಿದ ಮೇಲೆ ರಾಮನನ್ನು ನಾನು ಕಾಣುವುದು ಇದೇ ಮೊದಲನೆಯ ಬಾರಿಗೆ. ಆದುದರಿಂದ ನಿನ್ನಿಂದ ಅವನಿಗೆ ದಶರಥನ ಮರಣವೃತ್ತಾಂತ ತಿಳಿದ ಬಳಿಕ ನಾನು (ರಾಮಾಶ್ರಮವನ್ನು) ಪ್ರವೇಶಿಸುತ್ತೇನೆ.

ಸುಮಂತ್ರನ ದುಃಖ ಅಪಾರವಾಗಿದ್ದು, ಕಷ್ಟದಿಂದ ತಡೆಹಿಡಿದಿದ್ದಾನೆ. ಆದುದರಿಂದ ತಾನೇ ದಶರಥನ ಮರಣವೃತ್ತಾಂತ ಹೇಳುವಷ್ಟು ಮನೋದಾರ್ಢ್ಯವಿಲ್ಲವೆಂದು ಹಿಂದೆ ಬೀಳುತ್ತಾನೆ.

ಪುಟ 35

**ಶ್ಲೋಕ 16** (ವಸಂತತಿಲಕಾ) — कपाटपुटप्रमाणं वक्षः प्रसारय, सुविपुलेन भुजद्वयेन मां आलिङ्ग ; शरदिन्दुकल्पं इदं आननं उन्नामय, व्यसनदग्धं इदं शरीरं प्रह्लादय ।

ಬಾಗಿಲಿನ ಹಲಗೆಯಷ್ಟು ವಿಶಾಲಗೊಳಿಸು ನಿನ್ನ ಎದೆಯನ್ನು. ತುಂಬಿದ ತೋಳುಗಳಿಂದ ನನ್ನನ್ನು ಆಲಂಗಿಸು: ಶರಚ್ಚಂದ್ರನಂತಹ ನಿನ್ನ ಮುಖವನ್ನು ಮೇಲೆತ್ತು. ದುಃಖದಿಂದ ತಪ್ತವಾದ ಈ ಶರೀರವನ್ನು ಆನಂದಪಡಿಸು. ವಿಶಾಲ ವಕ್ಷಃಸ್ಥಳ ತುಂಬಿದ ನೀಳವಾದ (ಅಜಾನು) ಬಾಹುಗಳು ಮಹಾಪುರುಷನ ಲಕ್ಷಣ.

**कपाटपुटप्रमाणं वक्षः** — ಬಾಗಿಲಿನ ಹಲಗೆಯಷ್ಟು ವಿಶಾಲವಾದ ಎದೆ.

**सुविपुलेन भुजद्वयेन** — ತುಂಬಿದ ನೀಳವಾದ ಭುಜದ್ವಯ.

**ಶ್ಲೋಕ 17** (ಸ್ರಗ್ಧರಾ) — यः पूर्वं सासुराणां सुराणां विमर्दे अभिसरिसमये (देव) समानैः विमानैः स्वसैन्यैः खं गत्वा यः सः (दशरथः) इति विख्यातः सः श्रीमान् नरेन्द्रः त्यक्तदेहः स्नेहवन्तं दयितं भवन्तं अपि विना साम्प्रतं नरेन्द्रैः स्वैः पितृभिः सह स्वर्गस्थः रमयति किम् ?

ಯಾರು ದೇವಾಸುರರ ಸಂಗ್ರಾಮದಲ್ಲಿ ದೇವವಿಮಾನ ಸಮಾನವಾದ ತನ್ನ ವಿಮಾನಗಳಲ್ಲಿ ಸೈನ್ಯದೊಡನೆ ಅಂತರಿಕ್ಷಕ್ಕೆ ಹೋಗಿ ದೇವತೆಗಳ ಸಹಾಯಕ್ಕೆ ಮುನ್ನುಗ್ಗುತ್ತಿರಲು ದೇವದಾನವರಿಂದ 'ಅಗೋ ಅವನು ದಶರಥ ಅವನು ದಶರಥ' ಎಂದು ತೋರಿಸಲ್ಪಡುತ್ತಿದ್ದನೋ, ಅಂತಹ ಭಾಗ್ಯಶಾಲಿ ನರೇಂದ್ರನೂ ಈಗ ದೇಹ ತ್ಯಜಿಸಿ, ಸ್ನೇಹ ಪ್ರೀತಿಗಳಿಂದ ಕೂಡಿದ ನಿನ್ನನ್ನೂ ಬಿಟ್ಟು ಪಿತೃಲೋಕದಲ್ಲಿರುವ ತನ್ನ ವಂಶದ ರಾಜರೊಡನೆ ಸ್ವರ್ಗದಲ್ಲಿ ನೆಲೆಸಿ ಆನಂದಿಸುತ್ತಿದ್ದಾನೆಯೆ ?

**विमर्दे** — ಯುದ್ಧದಲ್ಲಿ. **अभिसरिसमये**—ದೇವತೆಗಳಿಗೆ ಯುದ್ಧದಲ್ಲಿ ಸಹಾಯ ಮಾಡಲು ಮುನ್ನುಗ್ಗುತ್ತಿರುವ ಕಾಲದಲ್ಲಿ. **खं** ಅಂತರಿಕ್ಷವನ್ನು. **सः सः (दशरथः)** — ದಶರಥನ ಕೀರ್ತಿ ಕೇಳಿ ನೋಡಲು ಬಂದವರಿಗೆ ತಿಳಿದವರು ತೋರಿಸುತ್ತಿದ್ದರು.

**ಶ್ಲೋಕ 18 (ಪ್ರಹ್ಷಿಣೀ)** — मे आयुषा नरपतिनिधनं भवतां प्रवास भर्तृविषादं कुलस्य अनाथतां च एवं बहुविधं दुष्प्रसहं अनुभूय गुणे अपराद्धमिव ।

ರಾಜನ ಮರಣ, ನಿಮ್ಮ ವನವಾಸ, ಭರತನ ಸಂಕಟ, ವಂಶಕ್ಕೆ ಬಂದ ಅನಾಥ ಸ್ಥಿತಿ—ಹೀಗೆ ಬಹುಪ್ರಕಾರದ ಅನರ್ಥಪರಂಪರೆಯನ್ನು ಅನುಭವಿಸಿದ ನನ್ನ ಆಯುಸ್ಸು ಗುಣದಲ್ಲಿಯೇ ದೋಷವೆನಿಸಿದೆ.

**गुणे अपराद्धमिव** — ಗುಣದಲ್ಲೇ ದೋಷಗಳಿಸಿದೆ. ದೀರ್ಘಕಾಲ ಬಾಳುವುದು ಗುಣವೇ. ಆದರೆ ಇಂತಹ ದುಃಖಪರಂಪರೆಯನ್ನು ಕಾಣಬೇಕಾಗಿಬಂದ 'ದೀರ್ಘ ಬಾಳು' ಯೋಗ್ಯವಲ್ಲ. ಬದುಕಿರುವುದೇ ಅಪರಾಧವಾಯಿತು (ವಿರೋಧಾಭಾಸ).

**एवमं . . . तातः** — ಮೊದಲೇ ಅಳುತ್ತಿರುವ ಆರ್ಯಪುತ್ರನನ್ನು ಮತ್ತೂ ಅಳುವಂತೆ ಮಾಡುತ್ತಿದ್ದಾನೆ ತಾತ ಸುಮಂತ್ರ. ಸುಮಂತ್ರನ ಮಾತುಗಳು ರಾಮನನ್ನು ಸಮಾಧಾನಗೊಳಿಸಬೇಕಾದ ಸಮಯದಲ್ಲಿ ಇನ್ನೂ ಹೆಚ್ಚು ದುಃಖಿತನನ್ನಾಗಿ ಮಾಡುತ್ತಿವೆ ಎಂಬ ಅರ್ಥ.

**पर्यवस्थापयामि** — ಮನಸ್ಸನ್ನು ಸಮಾಧಾನಕ್ಕೆ ತರುತ್ತೇನೆ.

**विशीर्यते . . . . व्यापारः** — ಲಕ್ಷ್ಮಣನ ಸೇವೆಯ ಜವಾಬ್ದಾರಿ ನಡಿಲವಾಗುತ್ತಾ ಬಂದಿತು.

ಭರತನು ಲಕ್ಷ್ಮಣನಿಗೆ ಅವಕಾಶ ಕೊಡದೆ ತಾನೇ ರಾಮನಿಗೆ ನೀರು ತರಲು ರಾಮನು ಶಿಥಿಲಾಸ್ಯದಲ್ಲಿ ಈ ಮಾತನ್ನಾಡುತ್ತಾನೆ.

**सुष्ठु खल्विह . . . . शुश्रूषयतु** — ಸರಿ; ಇಲ್ಲಿ ಲಕ್ಷ್ಮಣ ಸೇವೆ ಮಾಡಲಿ. ಅಲ್ಲಿಯೂ ಭರತನು ನನ್ನ ಸೇವೆ ಮಾಡಲಿ. ಧರ್ಮಕ್ಕೆ ಸಂಬಂಧಿಸಿದ ಸೂಕ್ಷ್ಮಾತಿಸೂಕ್ಷ್ಮಗಳನ್ನು ಅರಿತ ರಾಮನು ಸನ್ನಿವೇಶಗಳನ್ನೆಲ್ಲಾ ಮನಸ್ಸಿನಲ್ಲೇ ಯೋಚಿಸಿ ಭರತನನ್ನು ಅರಣ್ಯದಲ್ಲಿ ಉಳಿಸಿಕೊಳ್ಳಬಾರದೆಂದು ನಿರ್ಧರಿಸಿದ್ದಾನೆ. ಆದುದರಿಂದಲೇ ಹೀಗೆ ಸಂಕ್ಷಿಪ್ತವಾದ ಮಾತನ್ನು ಹೇಳುತ್ತಾನೆ.

**ಶ್ಲೋಕ 19 (ಅನುಷ್ಟುಪ್)** — इह देहेन स्थास्यामि; तत्र कर्मणा स्थास्यामि : भवतः नाम्ना एव राज्यं कृतरक्षं भविष्यति ।

ಇಲ್ಲಿ ಶರೀರದಿಂದ ಇದ್ದು, ಕಾರ್ಯದಿಂದ ಅಲ್ಲಿ ಇರುತ್ತೇನೆ. ನಿನ್ನ ಹೆಸರಿನಿಂದಲೇ ರಾಜ್ಯರಕ್ಷಣೆ ನೆರವೇರಬಲ್ಲುದು.

**कैकेयीमातः** — ಭಾಸನಿಗೆ ತಾಯಂದಿರ ಹೆಸರಿನ ಮೇಲೆ ಮಕ್ಕಳನ್ನು ಕರೆಯುವುದು ಹೆಚ್ಚು ಪ್ರಿಯವೆಂದು ತೋರುತ್ತದೆ. ಆದುದರಿಂದ ಮತ್ತೆ ಮತ್ತೆ सुमित्रामातः कौसल्यामातः [illegible] कैकेयीमातः ಇತ್ಯಾದಿ ಪ್ರಯೋಗ ಕಾಣಸುತ್ತವೆ. [illegible]यी माता यस्य सः (ಬಹುವ್ರೀಹಿ).

ಪುಟ 36

**ಶ್ಲೋಕ 20** (ವಂಶಸ್ಥ) — वत्स, अहं पितुः नियोगात् वनं आगतः, दर्पात् न भयात् न विभ्रमात् न नः कुलं सत्यधनं इति च ते ब्रवीमि (एवं सति) भवान् **नीचपथे** कथं प्रवर्तते।

ಮಗು, ನಾನು ತಂದೆಯ ಆಜ್ಞೆಯ ಕಾರಣ ಕಾಡಿಗೆ ಬಂದೆ. ಗರ್ವದಿಂದಲ್ಲ, ಭಯದಿಂದಲ್ಲ. ಕಿಂ ಕರ್ತವ್ಯತಾಮೂಢತೆಯಿಂದಲ್ಲ. ನಮ್ಮ ವಂಶ ಸತ್ಯಸಂಧ ವಂಶವೆಂದು ಮತ್ತೆ ಮತ್ತೆ ನಿನಗೆ ತಿಳಿಸುತ್ತೇನೆ. ಹೀಗಿರಬೇಕಾದರೆ—ನೀನು ನೀಚಮಾರ್ಗದಲ್ಲಿ ಹೋಗಲು ಹೇಗೆ ಇಚ್ಛಿಸುವೆ ?

**नियोगः** — ಆಜ್ಞೆ. न दर्पात् — ಹಿರಿಯನೂ ಗುಣಸಂಪನ್ನನೂ ಆದ ತನ್ನನ್ನು ತಂದೆ ಅಪಮಾನಗೊಳಿಸಿದರು. ಅವರ ಮುಖವನ್ನೇ ನಾನಿನ್ನು ನೋಡುವುದಿಲ್ಲ ಎಂಬ ದರ್ಪದಿಂದಲ್ಲ. न भयात् — ಮಹಾ ಪರಾಕ್ರಮಶಾಲಿಯಾದ ತಂದೆ ಅಥವಾ ಶೂರನಾದ ನನಗೆ ಹೆದರಿಕೆಯೂ ಇಲ್ಲ. न विभ्रमात् — ಮಾತೆ ಕೈಕೇಯಿ ವಂಚಿಸಿದಳು, ತಂದೆಯೂ ವಂಚಿಸಿದರು. ನನ್ನ ಗತಿಯೇನು ಎಂದು ದಿಕ್ಕೆಟ್ಟು ಅಲ್ಲ. **अथ अभिषेकोदकं** — ರಾಮ ಮತ್ತು ಭರತ ಇಬ್ಬರೂ ರಾಜ್ಯವನ್ನು ನಿರಾಕರಿಸುತ್ತಿರಲು ಸುಮಂತ್ರನಿಗೆ ಏನುಮಾಡಬೇಕೆಂದು ತೋಚದೆಹೋಗಿ ಈ ಅಭಿಷೇಕೋದಕ ಹಾಗಾದರೆ ಎಲ್ಲಿರಬೇಕು ಎನ್ನುತ್ತಾನೆ.

**नीचपथे** — ನೀಚ ಜನರ ಮಾರ್ಗ : ಮಾತಿನಂತೆ ನಡೆದುಕೊಳ್ಳದೆ ಇರುವುದು. नीचानां पन्था नीचपथः तस्मिन्—पथिन् ಶಬ್ದವು राजन्, अहन् ಮತ್ತು ಸಖಿ ಶಬ್ದಗಳಂತೆಯೇ ಸಮಾಸಾಂತ್ಯದಲ್ಲಿ ಅಕಾರಾಂತವಾಗುತ್ತದೆ. (ಪಾಣಿನಿ) (ऋक्पूरब्धूःपथामानक्षे 5.4–74)

**आर्य अलं....प्रहर्तुम्** — ಪೂಜ್ಯನೇ, ಗಾಯದ ಮೇಲೆ ಪೆಟ್ಟು ಹೊಡೆಯಬೇಡ. ಭರತನಿಗೆ ತನ್ನ ತಾಯಿಯ ಲೋಭದಿಂದ ಸಾಕಾದಷ್ಟು ಮನ ನೊಂದಿದೆ. 'ನಿನ್ನ ತಾಯಿ ಯಾರಿಗೆ ಅಭಿಷೇಕವಾಗಬೇಕೆಂದು ಕೇಳಿದಳೋ ಅವನಿಗೇ ಅಭಿಷೇಕ' ಎಂದು ರಾಮನು ಹೇಳಿದ ಕೂಡಲೇ ಭರತನ ದುಃಖ ಉಮ್ಮಳಿಸುತ್ತದೆ. ದೈನ್ಯನಾಗಿ ರಾಮನನ್ನು ಮತ್ತೆ ತನ್ನನ್ನು ಕ್ಷಮಿಸೆಂದು ಬೇಡುತ್ತಾನೆ.

**ಶ್ಲೋಕ 21** (ಮಾಲಿನೀ) — हे सुगुण त्वत्प्रसूतिः मम अपि प्रसूतिः अपि ? निभृतधीमान् सः ते पिता मम पिता च अपि ? हे सुपुरुष, पुरुषाणां मातृदोषः न दोषः हे वरद आर्त भरतं यथावत् तावत् पश्य ।

ಎಲೈ ಗುಣವಂತನೇ, ನಿನ್ನ ವಂಶವೇ ನನ್ನ ವಂಶವಲ್ಲವೆ ? **[illegible]ನಾದ** ಆ ನಿನ್ನ ತಂದೆಯೇ ನನ್ನ ತಂದೆಯಲ್ಲವೆ ? ಸುಪುರುಷನೇ, ತಾಯಿ **ಮಾಡಿದ ತಪ್ಪನ್ನು ಪುತ್ರರಿಗೆ**

ಅಂಟಿಸಬಹುದೇ ? ಉದಾರಿಯೇ, ದೀನನಾದ ಈ ಭರತನನ್ನು ನಿರ್ದೋಷಿಯಾಗಿ ಕಾಣು.

**प्रभृतिः** — ವಂಶ. ಮೂಲಪುರುಷ ಎಂಬ ಅರ್ಥ. अपि ವಾಕ್ಯದ ಆರಂಭದಲ್ಲಿ 'न किम्' ಎಂಬ ಅರ್ಥದಲ್ಲಿ ಬಂದಿದೆ.

**सुपुरुष. . . . यथावत्** — ತಾಯಿ ಮಾಡಿದ ತಪ್ಪನ್ನು ಮಗನ ಮೇಲೆ ಹೊರಿಸಬಾರದೆಂದೂ ತನ್ನನ್ನು ಉದಾರಿಯಾದ ರಾಮ ನಿರ್ದೋಷಿಯನ್ನಾಗಿ ಭಾವಿಸಬೇಕೆಂದೂ ದೈನ್ಯದಿಂದ ಬೇಡುತ್ತಾನೆ. ಈ ಮಾತು ಸೀತೆಯ ಹೃದಯವನ್ನೂ ಕೂಡಲೇ ಕನಿಕರ ದಿಂದ ತುಂಬುತ್ತದೆ.

**ಶ್ಲೋಕ 22** (ವಸಂತತಿಲಕ) — येन अयं आत्मजविशिष्टगुणः न दृष्टः सुरलोकयातं तं नृपतिं चिन्तयामि ; ईदृग्विधं गुणनिधिं समवाप्य (अपि) लोके पुत्रोत्तमेषु यदि विधेः बलम्, भोः धिक्।

ಮಗನ ಇಂತಹ ವಿಶಿಷ್ಟ ಗುಣವನ್ನು ಸಂಪೂರ್ಣವಾಗಿ ಅರಿಯುವ ಮುಂಚೆಯೇ ಸ್ವರ್ಗವಾಸಿಯಾದ ಆ ತಂದೆಯನ್ನು ಕುರಿತು ಚಿಂತಿಸುತ್ತೇನೆ. ಲೋಕದಲ್ಲಿ ಇಂತಹ ಗುಣನಿಧಿಯನ್ನು ಪುತ್ರನನ್ನಾಗಿ ಪಡೆದ ಪುರುಷಶ್ರೇಷ್ಠನ ಮೇಲೂ ವಿಧಿಗೆ ತನ್ನ ಪ್ರಭಾವವಿರುತ್ತದೆ ಎನ್ನುವುದು ಎಂತಹ ಘೋರ.

**आत्मजविशिष्टगुणः** — ಪುತ್ರನ ಅಸಾಧಾರಣ ಉದಾತ್ತ ಗುಣ. ಅನ್ಯಾದೃಶ ಭ್ರಾತೃಪ್ರೇಮ, ಅನ್ಯಾಯವನ್ನು ಒಪ್ಪದೆ ಎದುರಿಸುವ ಸ್ವಭಾವ ಮುಂತಾದ ಗುಣ. आत्मजस्य विशिष्टश्चासौ गुणश्च ಇಲ್ಲಿ ಗುಣಶಬ್ದವು ಜಾತ್ಯೇಕವಚನದಲ್ಲಿದೆ.

**ಶ್ಲೋಕ 23** (ಶಾರ್ದೂಲವಿಕ್ರೀಡಿತ) — भवता परितोषितः अस्मि, भवान् निष्कल्मषात्मा त्वद्वाक्यस्य वशानुगः अस्मि, भवतः ख्यातैः गुणैः निर्जितः (अस्मि) इति यत् तत् सत्यम् ; किन्तु एतत् नृपतेः वचः तत् त्वया अनृतं कर्तुं न युक्तम् ; किञ्च भवद्विधं (पुत्रं) उत्पाद्य ते पिता मिथ्याभिधायी भवतु किम् ?

ನೀನು ನನ್ನನ್ನು ಪರಿತುಷ್ಟನನ್ನಾಗಿ ಮಾಡಿದ್ದೀಯೆ. ನೀನು ನಿರ್ಮಲಾಂತಃಕರಣ. ನಿನ್ನ ಮಾತನ್ನು ಅರ್ಥಮಾಡಿಕೊಂಡಿದ್ದೇನೆ. ನಿನ್ನ ಪ್ರಸಿದ್ಧ ಗುಣಗಳಿಗೆ ಸೋತಿದ್ದೇನೆ— ಇದೆಲ್ಲ ನಿಜ. ಆದರೆ 'ಇದು' ರಾಜನ ಮಾತು. ಅದನ್ನು ನೀನು ಸುಳ್ಳುಮಾಡುವುದು ಸರಿಯಲ್ಲ. ಜೊತೆಗೆ ನಿನ್ನಂತಹ ಮಗನನ್ನು ಹೆತ್ತ ತಂದೆ 'ಸುಳ್ಳುಗಾರ'ನಾಗ ಬೇಕೇನು ?

**एतत् नृपतेः वचः** — 'ಭರತನು ರಾಜನಾಗಲಿ' ಎಂಬುದು ರಾಜನ ಮಾತು ಭರತನ ಬಾಯಿ ಕಟ್ಟಿಸುವ ರಾಮನ ವಾದಸರಣಿ ಧರ್ಮ ಹಾಗೂ ತರ್ಕಬದ್ಧವಾಗಿದೆ.

**ಶ್ಲೋಕ 24** (ವಸಂತತಿಲಕಾ) — हे नृप यावत् भवन्नियमावसानं भविष्यति तावत् ते पादमूले इह भवेयम्। मा एवं (ब्रूहि) नृपः स्वसुकृतैः सिद्धिं अनुयातु ; स्वराज्यं न परिरक्षसि चेत् मे शापितः असि।

(ಭರತ) — ಎಲೈ ರಾಜನೇ, ನಿನ್ನ ವನವಾಸ ನಿಯಮವು ಮುಗಿಯುವವರೆಗೂ ನಾನು ಇಲ್ಲಿಯೇ ನಿನ್ನ ಪಾದದ ಬಳಿ ಇರುತ್ತೇನೆ.

(ರಾಮ) — ಆ ಮಾತಾಡಬೇಡ ; ರಾಜನು ತನ್ನ ಪುಣ್ಯದಿಂದ ಸಿದ್ಧಿ ಗಳಿಸಲಿ. ನಿನ್ನ ರಾಜ್ಯವನ್ನು ನೀನು ರಕ್ಷಿಸದಿದ್ದರೆ ನನ್ನ ಮೇಲಿನ ಆಣೆ.

**नृपः स्वसुकृतैः सिद्धिं अनुयातु** — ಸತ್ಯಸಂಧನಾಗಿ ಕೊಟ್ಟ ಮಾತನ್ನು ನಡೆಸಿದ ಎಂಬ ಪುಣ್ಯ—ತಾನು ಮರಣವನ್ನಪ್ಪಿದರೂ ರಾಜ್ಯವನ್ನು ಸುರಕ್ಷಿತವಾಗಿ ಮಾಡಿದ್ದ ಎಂಬ ಪುಣ್ಯ.

**समयः** — ಒಂದು ನಿಬಂಧನೆ. ನಿಯಮ.

ಪುಟ 37

**ಶ್ಲೋಕ 25** (ಇಂದ್ರವಜ್ರಾ) — पादोपभुक्ते तव एते पादुके मूर्ध्ना प्रणताय मे प्रयच्छ। यावत् भवान् कार्यसिद्धिं एष्यति तावत् अहं अनयोः विधेयः भविष्यामि।

ನೀನು ಪಾದಗಳಲ್ಲಿ ಧರಿಸಿರುವ ಈ ನಿನ್ನ ಪಾದುಕೆಗಳನ್ನು ಭಕ್ತಿಯಿಂದ ಬೇಡುವ ನನಗೆ ದಯಪಾಲಿಸು ; ನಿನ್ನ ಈ ವ್ರತ ಪೂರೈಸಿ ನೀನು ಹಿಂತಿರುಗುವವರೆಗೂ ನಾನು ಇವುಗಳ ದಾಸನಾಗಿರುವೆನು.

**'पादोपभुक्ते पादुके'** — 'मूर्ध्ना प्रणताय.' ನಿನ್ನ ಪಾದಗಳು ಮೆಟ್ಟಿರುವ ಪಾದುಕೆಗಳನ್ನು ಶಿರಬಾಗಿಸಿ ನಮಸ್ಕರಿಸುತ್ತಲಿರುವ ನನಗೆ ಕೊಡು. ಇದು ಭರತನ ನಿರ್ಮಲ ಭ್ರಾತೃಪ್ರೇಮವನ್ನು ಅಭಿವ್ಯಕ್ತಿಗೊಳಿಸುವ ಒಂದು ಹೃದಯಸ್ಪರ್ಶಿ ದೃಶ್ಯ. ಇಲ್ಲಿನ पादोपभुक्ते-मूर्ध्ना प्रणताय ಮೊದಲಾದ ಪದವೃಂದ ಅರ್ಥವತ್ತಾಗಿ ಭಕ್ತಿ ಭಾವವನ್ನು ಸುಂದರವಾಗಿ ನಿರೂಪಿಸುತ್ತದೆ. ರಾಮಾಯಣದಲ್ಲಿ ಈ ಸನ್ನಿವೇಶ ಹೀಗೆ ವರ್ಣಿತವಾಗಿದೆ. अधिरोहार्य पादाभ्यां पादुके हेमभूषिते। एते हि सर्वलोकस्य योगक्षेमं विधास्यतः। ....चतुर्दश हि वर्षाणि जटाचीरधरो ह्यहम्। फल-मूलाशनो वीर भवेयं रघुनन्दन। तव पादुकयोः न्यस्य राज्यतन्त्रं परंतप।

(ಅಯೋಧ್ಯಾಕಾಂಡ ಸರ್ಗ 112, 21 ಮೊದಲಾಗಿ.)

**ಶ್ಲೋಕ 26** (ಅನುಷ್ಟುಪ್) — सुचिरेण कालेन अपि मया किञ्चित् यशः आर्जितम्। अचिरेण कालेन एव अद्य भरतेन महत् (यशः) सञ्चितम्।

ಬಹುಕಾಲದ ಅವಧಿಯಲ್ಲಿ ನಾನು ಪಿತೃಭಕ್ತಿಯಿಂದ ಒಂದು ಸ್ವಲ್ಪ ಯಶಸ್ಸನ್ನು ಗಳಿಸಿದೆ. ಅಲ್ಪಕಾಲದಲ್ಲಿಯೇ ಈಗ ಭರತನು ಭ್ರಾತೃಭಕ್ತಿಯಿಂದ ಬಹು ಯಶಸ್ಸನ್ನು ಗಳಿಸಿಬಿಟ್ಟನು.

**सुचिरेण कालेन अपि किञ्चित् यशः** — ಇದಕ್ಕೆ ವಿರುದ್ಧವಾಗಿ अचिरेण तु कालेन महत् यशः — ಭರತನ ಹಿರಿಮೆಗೆ ಉತ್ತಮ ಪ್ರಶಸ್ತಿ. ಇಂತಹ ಉಚಿತ ಮನೋಜ್ಞ ಪದಬಂಧ ಭಾಸನ ಶೈಲಿಯ ವಿಶಿಷ್ಟ ಲಕ್ಷಣ.

**आर्य अत्राभिषेकोदकं . . . . इच्छामि** — ಇವುಗಳ ಮೇಲೆ ಅಭಿಷೇಕ ಜಲವನ್ನು ಎರೆಯುತ್ತೇನೆ. ಭರತನ ಉದಾತ್ತ ಸ್ವಭಾವ ಕ್ಷಣಕ್ಷಣಕ್ಕೂ ಔನ್ನತ್ಯ ಪಡೆಯುತ್ತದೆ.

**तात, यदिष्टं क्रियताम्** — 'ತಾತ! ಭರತನಿಗೆ ಏನು ಇಷ್ಟವೋ ಎಲ್ಲವನ್ನೂ ನೆರವೇರಿಸು'—ಭರತನ ಭಕ್ತಿಯಿಂದ ರಾಮನ ಹೃದಯ ಕರಗಿಹೋಗಿದೆ. ಜೊತೆಗೆ ಅವನು ರಾಜ್ಯಕ್ಕೆ ಹೋಗಲು ಒಪ್ಪಿದುದೂ ಸಮಾಧಾನ ತಂದಿದೆ ಎಂಬುದು ಈ ಮಾತಿನಿಂದ ತಿಳಿಯುತ್ತದೆ.

**ಶ್ಲೋಕ 27** (ಶಾರ್ದೂಲವಿಕ್ರೀಡಿತಂ) — अधुना अहं स्वजनस्य श्रद्धेयः, पौरस्पृहितः, लोकस्य दृष्टिक्षमः, स्वर्गस्थस्य नराधिपस्य शीलान्वितः दयितः सुतः, गुणशालिनां भ्रातॄणां बहुमतः कीर्तेः महत् भाजनम्, गुणवतां संवादेषु कथाश्रयः लब्धप्रियाणां प्रियः ।

ನಾನು ಈಗ ಬಂಧುಜನರ ವಿಶ್ವಾಸಪಾತ್ರನಾದೆ. ಪ್ರಜೆಗಳಿಗೆ ಪ್ರಿಯನಾದೆ. ಲೋಕಕ್ಕೆ ದರ್ಶನಯೋಗ್ಯನಾದೆ. ಸ್ವರ್ಗವಾಸಿಯಾದ ರಾಜನಿಗೆ ಶುದ್ಧಚಾರಿತ್ರ್ಯನಾದ ಪ್ರೀತಿಯ ಪುತ್ರನಾದೆ. ಗುಣಶೋಭಿಗಳಾದ ಸಹೋದರರಿಗೆ ಮಾನ್ಯನಾದೆ. ಕೀರ್ತಿಗೆ ಉತ್ತಮ ಪಾತ್ರನಾದೆ. ಗುಣವಂತರ ಮಾತುಗಳಿಗೆ ವಿಷಯನಾದೆ. ತಮ್ಮ ತಮ್ಮ ಅಭೀಷ್ಟ ಪಡೆದವರಿಗೆ ಇಷ್ಟನಾದೆ.

**लब्धप्रियाणां प्रियः** — ರಾಮನ ರಾಜ್ಯಪ್ರಾಪ್ತಿ ಎಂಬ ಪ್ರಿಯವನ್ನು ಪಡೆದ ಸುಮಂತ್ರಾದಿಗಳಿಗೂ ಪ್ರಿಯನಾದೆ—ಎಂದು ಕಾಳೆಯವರ ಅಭಿಪ್ರಾಯ.

ಪುಟ 38

**राज्यं नाम . . . . नोपेक्षणीयम्** — ರಾಜ್ಯವೆಂಬುದು ಒಂದು ಕ್ಷಣವೂ ಉಪೇಕ್ಷಿಸತಕ್ಕದ್ದಲ್ಲ.

**हम् अद्यैव . . . . भरतः** — 'ಕುಮಾರನು ಈಗಲೇ ಪ್ರಯಾಣ ಬೆಳೆಸಬೇಕೆ?' ಸೀತೆಗೆ ಭರತನಲ್ಲಿ ಮಾತೆಯ ಮಮತೆ. ಭರತನನ್ನು ಇನ್ನೂ ಕೆಲದಿನ ಅಲ್ಲೇ ಉಳಿಸಿಕೊಳ್ಳುವ ಅಂತಃಕರಣ.

**[illegible]** — ಸಾಕು ಅತಿಯಾದ ಮಮತೆ ; ರಾಮನಿಗೆ ಭರತನನ್ನು ಹಿಂದಕ್ಕೆ ಕಳುಹಿಸುವ ನಿರ್ಧಾರ ಸಡಿಲಮಾಡಲು ಇಷ್ಟವಿಲ್ಲ. ಹೇಗೋ ಭರತ ಒಪ್ಪಿದುದೇ ಹೆಚ್ಚು. ಆದುದರಿಂದ ಆದಷ್ಟು ಬೇಗ ಕಳುಹಿಸಲು ನಿಶ್ಚಯ. ಜೊತೆಗೆ ರಾಜ್ಯದ ಚಿಂತೆ ಇದ್ದೇ ಇತ್ತು. ಅವನು ಹೊರಟುಹೋದ ಮೇಲೆ ರಾಮನು ಅದುಮಿಟ್ಟಿದ್ದ ವಾತ್ಸಲ್ಯ ಉಕ್ಕುವುದು.

**ಶ್ಲೋಕ 28** (ಅನುಷ್ಟುಪ್) — पौराः त्वद्दिदृक्षया पुरे आशावन्तः स्थास्यन्ति। त्वत्प्रसादस्य दर्शनात् तेषां प्रीतिं करिष्यामि।

ಪೌರರು ನಿನ್ನನ್ನು ಕಾಣುವ ಆಸೆಯಿಂದ ಅಯೋಧ್ಯೆಯಲ್ಲಿ ಕಾದಿರುತ್ತಾರೆ. ನಿನ್ನ ಅನುಗ್ರಹದ ದರ್ಶನದಿಂದ ಅವರಿಗೆ ಸಂತೋಷವನ್ನುಂಟುಮಾಡುತ್ತೇನೆ.

**त्वत्प्रसादस्य दर्शनात्** — ನಿನ್ನ ಪ್ರಸಾದದ ದರ್ಶನದಿಂದ—ಹದಿನಾಲ್ಕು ವರ್ಷಗಳ ನಂತರ ಬಂದು ರಾಜ್ಯವನ್ನು ಪಡೆಯುತ್ತೇನೆಂದು ಅವನು ಕೊಟ್ಟ ಮಾತು ಮತ್ತು ಅವನ ಪಾದುಕೆಗಳು.

**भरतस्य अनुयात्रं भविष्यामः** — ಭರತನನ್ನು ಕಳುಹಿಸಿಕೊಡುವ ಈ ದೃಶ್ಯ ಎಂತಹವರ ಹೃದಯವನ್ನೂ ಕರಗಿಸಬಲ್ಲುದು.

ಈ ಅಂಕವನ್ನು 'ಶ್ರೀರಾಮಪಾದುಕಾಪಟ್ಟಾಭಿಷೇಕಾಂಕ' ಎಂದು ಕರೆಯಬಹುದು. ಇಲ್ಲಿ ಮೂಲ ಕಥೆಯಲ್ಲಿ ಅಂತಹ ಯಾವ ಬದಲಾವಣೆಯಿಲ್ಲದಿದ್ದರೂ ಹಿತ-ಮಿತ ಮಾತುಗಳಿಂದ ಮಾಡಿರುವ ಇಲ್ಲಿನ ಪಾತ್ರಚಿತ್ರಣ ರೋಮಾಂಚಪ್ರದವಾಗಿದೆ.

ಪುಟ 39

## ಅಂಕ ೬

ಈ ಅಂಕದಲ್ಲಿ ಕಪಟ ಭಿಕ್ಷುವಾಗಿ ಬಂದ ರಾವಣನು ಕಾಂಚನಮೃಗಮಾಯೆಯ ಮೂಲಕ ಸೀತೆಯನ್ನು ಅಪಹರಿಸಿದ ಸಂಗತಿಯೂ ಜಟಾಯು ಅವನನ್ನು ಎದುರಿಸಿದ ಸಂಗತಿಯೂ ಪ್ರತಿಪಾದಿಸಲ್ಪಟ್ಟಿವೆ.

**ದೃಶ್ಯ** — ಗೋದಾವರೀ ಪರಿಸರ : ಪಂಚವಟಿಯ ಆಶ್ರಮ.

**ಕಾಲ** — ನಾಲ್ಕನೆಯ ಅಂಕದ ಸಂಗತಿಗಳು ನಡೆದು ಸುಮಾರು 12–13 ವರ್ಷಗಳು ಕಳೆದಿವೆ. (ಆದರೂ ಕವಿಯು ಸಮಯದ ಅಂತರ ತಿಳಿಯದಂತೆ ಈ ಅಂಕದ ಸಂಗತಿಗಳನ್ನು ಜೋಡಿಸಿದ್ದಾನೆ.) ಬೆಳಗಿನ ಸಮಯ.

**उपहृतसुमनःप्रकीर्णः संमार्जितः आश्रमः** — (i) ಆಶ್ರಮದಲ್ಲಿ ಬಿದ್ದಿದ್ದ ನಿರ್ಮಾಲ್ಯ ಪುಷ್ಪಗಳನ್ನು ಗುಡಿಸಿದ್ದಾಯಿತು. ಅಥವಾ (ii) ಗುಡಿಸಿ ಶುದ್ಧಿಮಾಡಿದ ಆಶ್ರಮದಲ್ಲಿ ಪೂಜಾ ಕುಸುಮಗಳನ್ನು ಹರಡಿದ್ದಾಯಿತು.

**आश्रमविभवेन .... दैवतपूजाचारः** — ತಪೋವನದ ವಿಭವಕ್ಕೆ ಉಚಿತವಾಗಿ ದೇವಪೂಜಾ ನಿಯಮಗಳು ನೆರವೇರಿದವು.

**तत्....अनुक्रोशयिष्यामि** — ಆರ್ಯಪುತ್ರನು ಬರುವಷ್ಟರಲ್ಲಿ ನೀರೆರೆಯುವ ಮೂಲಕ ಈ ಗಿಡಗಳಲ್ಲಿ ಅನುಕ್ರೋಶ (ಕೃಪೆ) ತೋರುತ್ತೇನೆ. ಜನಕರಾಜನ ಏಕೈಕ ಪುತ್ರಿಯಾಗಿದ್ದರೂ ಶ್ರೀರಾಮನ ಪತ್ನಿಯೇ ಆಗಿದ್ದರೂ ಸೀತೆಯು 'ಕಾಯಕ'ದಲ್ಲಿ ನಂಬಿಕೆಯುಳ್ಳವಳು, ಗಿಡಗಳನ್ನಂತೂ ಪುತ್ರವಾತ್ಸಲ್ಯದಿಂದಲೇ ನೀರೆರೆದು ಬೆಳೆಸುತ್ತಿದ್ದಾಳೆ. ಈ ದೃಶ್ಯದ ಛಾಯೆ ಶಾಕುಂತಲ ನಾಟಕದಲ್ಲಿ ಶಕುಂತಲೆಯು ಗಿಡಗಳಿಗೆ ನೀರೆರೆಯುವ ದೃಶ್ಯದಲ್ಲಿ ಸ್ಪಷ್ಟವಾಗಿದೆ.

**ಶ್ಲೋಕ 1** (ಶಾರ್ದೂಲವಿಕ್ರೀಡಿತಂ) — गुरुणा मया च रहितां रम्यां अयोध्यां पुरीं त्यक्त्वा अखिलं मम अभिषेकं अपि उद्यम्य मत्सन्निधौ गुणनिधिः भरतः आगतः। रक्षार्थं पुनः तत्र एव (मया सः) सम्प्रेषितः। भोः कष्टं, नृपतेः सुमहतीं धुरं एकः समुत्कर्षति।

ತಂದೆಯೂ ಇಲ್ಲದ ನಾನೂ ಇಲ್ಲದ ಆ ರಮ್ಯವಾದ ಅಯೋಧ್ಯಾಪುರವನ್ನು ಬಿಟ್ಟು ನನ್ನ ಅಭಿಷೇಕ ಸಾಮಗ್ರಿಗಳನ್ನೆಲ್ಲವನ್ನೂ ಸಂಗ್ರಹಿಸಿ ಎತ್ತಿಕೊಂಡು ನನ್ನ ಬಳಿಗೆ ಗುಣನಿಧಿಯಾದ ಭರತನು ಆಗಮಿಸಿದ. ಆದರೆ ರಾಜ್ಯದ ರಕ್ಷಣೆಗೋಸ್ಕರ ಅವನನ್ನು ಮತ್ತೆ ಅಲ್ಲಿಗೆ ಕಳುಹಿಸಿದೆ. ಅಯ್ಯೋ, ಎಂತಹ ಕಷ್ಟ! ರಾಜ್ಯದ ಅಷ್ಟೊಂದು ಭಾರವನ್ನು ಅವನೊಬ್ಬನೇ ಹೊರುತ್ತಾನಲ್ಲ!

**भोः कष्टं....समुत्कर्षति** — ಭರತನು ಕಣ್ಮರೆಯಾದಮೇಲೆ ರಾಮನು ರಾಜ್ಯಭಾರವನ್ನೆಲ್ಲಾ ಇನ್ನೂ ಹುಡುಗನಾದ ಭರತನೊಬ್ಬನ ಮೇಲೇ ಬಿಟ್ಟೆನಲ್ಲಾ ಎಂದು ವ್ಯಥೆಗೊಳ್ಳುವನು. ಈ ಅಗಲಿಕೆಯ ವೇದನೆ ಒಂದು ವಿಧದಲ್ಲಿ ಭವಿಷ್ಯದರ್ಥ ಸೂಚನೆ. ಹಿಂದಿನ ಅಂಕದ ಸಂಗತಿಗಳನ್ನೂ ಈ ಸಂಗತಿಯನ್ನೂ ಸಮಯದ ಅಂತರ ತಿಳಿಯದಂತೆ ಕವಿ ಜೋಡಿಸಬಿಟ್ಟಿದ್ದಾನೆ.

**अवस्थाकुटुम्बिनी** — (ನನ್ನ) ಎಲ್ಲ ಅವಸ್ಥೆಗಳಲ್ಲಿಯೂ ಜೊತೆಗಾರ್ತಿ. ಪ್ರಕೃತ 'ನನ್ನ ಸಂಕಟದ ಅವಸ್ಥೆಯಲ್ಲಿ ಜೊತೆಗಾರ್ತಿ' ಎಂದು ತೆಗೆದುಕೊಳ್ಳಬಹುದು.

ಪ್ರತಿಮಾನಾಟಕವು ಕರುಣರಸಪೂರ್ಣವೇ ಆದರೂ ಉದ್ದಕ್ಕೂ ಪ್ರೇಮ ಸಂಸಾರದ ಭಾವಗಳನ್ನು ರಮ್ಯವಾಗಿ ಚಿತ್ರಿಸಿದೆ. ಭರತ ಮತ್ತು ಸೀತೆಯನ್ನು ಕುರಿತ ಮೇಲಿನ ಭಾವನೆಗಳು ಮನೋಜ್ಞವಾಗಿವೆ.

**ಅಚಿರ** — ಈಗತಾನೆ (ಹೊಸದಾಗಿ).

**ಶ್ಲೋಕ 2** (ಹರಿಣೀ) — वृक्षावर्ते सफेनं अवस्थितं जलं भ्रमति, एते तृषितपतिताः खगाः जलं न क्लिष्टं पिबन्ति, बिले जलपूरिते सति आर्द्राः कीटाः स्थलं अभिपतन्ति, वृक्षाः मूले जलक्षयरेखया नववलयिनः।

ಮರಗಳ ಪಾತಿಗಳಲ್ಲಿ ನೊರೆಯಿಂದ ಕೂಡಿರುವ ನೀರು ಇನ್ನೂ ಸುತ್ತುತ್ತಿದೆ. ಬಾಯಾರಿಕೆಯಿಂದ ಕೆಳಗೆ ಬಂದ ಈ ಪಕ್ಕಿಗಳು ನೀರನ್ನು ಅನಾಯಾಸವಾಗಿ ಕುಡಿಯುತ್ತಿವೆ. ರಂಧ್ರಗಳು ನೀರು ತುಂಬಿರಲು ನೆನೆದ ಕೀಟಗಳು ಒಣಗಿದ ಸ್ಥಳದ ಕಡೆಗೆ ಓಡುತ್ತಿವೆ. ಮರಗಳು ಬುಡಗಳಲ್ಲಿ ಹೊಸ ಜಲರೇಖೆಯನ್ನು ಪಡೆದವುಗಳಾಗಿವೆ.

ಸೀತೆಯನ್ನು ಹುಡುಕಲು ಬಂದ ರಾಮನು ಗಿಡಗಳ ಪಾತಿಯನ್ನು ನೋಡಿ ಸೀತೆಯು ಅಲ್ಲೇ ನೀರೆರೆಯುತ್ತಿರಬೇಕೆಂದು ಊಹಿಸುವನು.

ಈ ಶ್ಲೋಕದ ನಾಲ್ಕು ಪಾದಗಳಲ್ಲಿ ನಾಲ್ಕು ಪಾತಿಗಳ ವರ್ಣನೆ ಇದೆ. ಒಂದೊಂದು ಗಿಡದ ಪಾತಿಗೂ ನೀರು ಹಾಕಿರುವುದರಲ್ಲಿ ಪೌರ್ವಾಪರ್ಯವನ್ನೂ ಕಾಲಾನುಕ್ರಮವನ್ನೂ ಕವಿ ಮನೋಜ್ಞವಾಗಿ ವರ್ಣಿಸಿದ್ದಾನೆ. ಮೊದಲನೆಯದರಲ್ಲಿ, ಆಗತಾನೇ ನೀರೆರೆದು ಹೋಗಿರುವುದರಿಂದ ನೀರು ಇನ್ನೂ ನಿಲ್ಲದೆ ಗರಗರನೆ ಸುತ್ತುತ್ತಿದೆ, ನೊರೆ ಆರಿಲ್ಲ ; ಎರಡನೆಯದರಲ್ಲಿ ಇದಕ್ಕಿಂತ ಒಂದೆ ನೀರೆರೆದಿರುವುದರಿಂದ ನೀರು ನಿಂತಿದೆ, ತಿಳಿಯಾಗಿದೆ, ನೊರೆಯೂ ಆರಿದೆ. ಆದ್ದರಿಂದ ಬಾಯಾರಿ ಬಂದ ಹಕ್ಕಿಗಳು ಸೌಕರ್ಯದಿಂದ ನೀರು ಕುಡಿಯುತ್ತಿವೆ ; ಮೂರನೆಯದರಲ್ಲಿ, ಅಂದರೆ ಅದಕ್ಕಿಂತ ಹಿಂದೆ ನೀರೆರೆದ ಪಾತಿಯಲ್ಲಿ, ನೀರು ಇಂಗಿಹೋಗಿ ಗಿಡದ ಸುತ್ತ ಗೂಡು ಮಾಡಿಕೊಂಡಿದ್ದ ಇರುವೆ, ಗೊದ್ದ ಮೊದಲಾದ ಕೀಟಗಳ ಗೂಡಿಗೆ ನುಗ್ಗಿ ಅವನ್ನು ಮೇಲಕ್ಕೆ ಓಡುವಂತೆ ಮಾಡಿದೆ. ನಾಲ್ಕನೆಯದಲ್ಲಿ, ಅಂದರೆ ಅದಕ್ಕೂ ಮೊದಲು ನೀರೆರೆದ ಪಾತಿಯಲ್ಲಿ ನೀರೆಲ್ಲ ಆರಿಹೋಗಿದೆ, ಗಿಡದ ಸುತ್ತಲೂ ನೀರು ನಿಂತಿದ್ದ ಗುರುತಿನ ಗೆರೆಯು ಮಾತ್ರ ಕಾಣುತ್ತಿದೆ. ಸುಂದರವಾದ ಸ್ವಭಾವೋಕ್ತಿ ಅಲಂಕಾರ.

**ಶ್ಲೋಕ 3** (ಉಪಜಾತಿ) — अस्याः यः करः दर्पणे अपि श्राम्यति कलशं वहन्त्याः सः खेदं न एति। कष्टं वनं लताभिः सह स्त्रीजनसौकुमार्यं कठिनीकरोति ॥

ಯಾವಳ ಕೈ ಕನ್ನಡಿ ಹಿಡಿಯುವುದರಿಂದಲೂ ಸೋತುಹೋಗುತ್ತಿದ್ದಿತೋ ಸುಕೋಮಲೆಯಾದ ಸೀತೆಯ ಆ ಕೈ ನೀರು ತುಂಬಿದ ಬಿಂದಿಗೆಯನ್ನು ಹೊರುವ ಶ್ರಮವನ್ನೂ ಸಹಿಸುವಂತಾಗಿದೆ. ಕಷ್ಟಜೀವನವನ್ನುಳ್ಳ ಅರಣ್ಯವು ಲತೆಗಳೊಂದಿಗೆ ಲತಾಂಗಿಯರ ಕೋಮಲತೆಯನ್ನೂ ಒರಟುಗೊಳಿಸುತ್ತದೆ ; ಅಯ್ಯೋ ಕಷ್ಟ.

**दर्पणेऽपि श्राम्यति** — ದರ್ಪಣ, ಕನ್ನಡಿ. ದರ್ಪಣವನ್ನು ಹಿಡಿಯುವುದರಿಂದಲೂ ಆಯಾಸಗೊಳ್ಳುತ್ತದೆಯೆಂಬ ಭಾವ ಮೊದಲ ಅಂಕದಲ್ಲಿ ಸೀತೆಯ ಕೋಮಲ ಕರಕ್ಕೆ ಆಯಾಸವಾಗಬಹುದೆಂದು ಭಾವಿಸಿ ರಾಮನೇ 'अहं आदर्शं धारयिष्ये' ಎಂದು ಕನ್ನಡಿ ಹಿಡಿಯುತ್ತಾನೆ.

**कठिनीकरोसि** — अकठिनं कठिनं करोति ಮೇಲೆ दर्पणेऽपि ಎಂದಿರುವಂತೆ '**कलशस्य वहने**' ಎಂದಿದ್ದರೆ ಹೆಚ್ಚು ಯುಕ್ತವಾಗುತ್ತಿತ್ತು. कष्टं ಎಂಬುದನ್ನು ಬೇರೆಯಾಗಿಯೂ ತೆಗೆದುಕೊಂಡು ಅಯ್ಯೋ! ಎಂತಹ ಕಷ್ಟವೆಂದೂ ಅರ್ಥಮಾಡಬಹುದು.

**अपि तपो वर्धते** — ನಿನ್ನ ತಪಸ್ಸು ವೃದ್ಧಿಗೊಳ್ಳುತ್ತಿದೆಯೇ? ವನವಾಸಿಗಳಾದ ಮುನಿಜನರನ್ನು ಪ್ರಶ್ನೆ ಮಾಡುವಂತೆ—ಸೀತೆಯು ಕಷ್ಟವನ್ನು ಕಂಡು ಮರುಗಿದ ರಾಮನು ಅವಳನ್ನು ಹಾಸ್ಯದಿಂದ ಹೀಗೆ ಪ್ರಶ್ನಿಸುವನು.

ಪುಟ 40

**ಶ್ಲೋಕ 4** (ಅನುಷ್ಟುಪ್) — कृतान्तशल्याभिहते मे शरीरे हृदयव्रणः तथैव तावत् (वर्तते), नानाफलाः शोकशराभिघाताः पुनः तत्रैव तत्रैव पतन्ति ।

ವಿಧಿಯ ಶಲ್ಯದಿಂದ ತಿವಿಯಲ್ಪಟ್ಟ ನನ್ನ ಶರೀರದಲ್ಲಿ ಪಿತೃಮರಣವೆಂಬ ಹೃದಯದ ಗಾಯ (ಮಾಯದ) ಮೊದಲಿನಂತೆಯೇ ಇದೆ; ವಿವಿಧ ಮೊನೆಗಳಿಂದ ಕೂಡಿದ ಶೋಕಶರದ ಪೆಟ್ಟುಗಳು ಮತ್ತೆ ಮತ್ತೆ ಅಲ್ಲಿಯೇ ಬೀಳುತ್ತಿವೆ.

**नानाफलाः शोकशराभिघाताः** — ತನಗೆ ಒದಗಿದ ನಾನಾ ದುಃಖಗಳನ್ನು ಕುರಿತು ಹೀಗೆ ಹೇಳುತ್ತಾನೆ. ಪಿತೃಮರಣವಾದದ್ದು, ಭರತನನ್ನು ಒಂದಕ್ಕೆ ಕಳಿಸಿದ್ದು, ಸೀತೆಯನ್ನು ಕಾಡಿನ ಕಷ್ಟಕ್ಕೆ ತೊಡಗಿಸಿದ್ದು ಮತ್ತು ಬರಲಿರುವ ಪಿತೃಶ್ರಾದ್ಧವನ್ನು ಉಚಿತರೀತಿಯಲ್ಲಿ ಮಾಡಲಾಗದ್ದು ಇತ್ಯಾದಿ. फल ಎಂದರೆ ಬಾಣದ ತುದಿ ಎಂಬ ಅರ್ಥವೂ ಇದೆ. ಅದೂ ಇಲ್ಲಿಗೆ ಹೊಂದುತ್ತದೆ. कल्पविशेषेण....पितरः — ವಿಶಿಷ್ಟವಾದ ಪಿಂಡ ಹಾಗೂ ಜಲದಿಂದ ಕೂಡಿದ ಶ್ರಾದ್ಧಕ್ರಿಯೆಯನ್ನು ಅಪೇಕ್ಷಿಸುತ್ತಾರೆ. **निर्वपणक्रिया — श्राद्धक्रिया.**

**ಶ್ಲೋಕ 5** (ಉಪಜಾತಿ) — येन केन तुष्टिं गच्छन्ति खलु; हि मे तां दशां ते जानन्ति एव । तथापि तातस्य रामस्य सानुरूपां पूजां कर्तुं इच्छामि ।

ಪಿತೃಗಳೇನೋ ಯಾವುದನ್ನು ಕೊಟ್ಟರೂ ತೃಪ್ತಿಪಟ್ಟುಕೊಳ್ಳಬಹುದು; ಏಕೆಂದರೆ ಅವರಿಗೆ ನಾನಿರುವ ಪರಿಸ್ಥಿತಿಯ ಅರಿವಿದ್ದೇ ಇದೆ; ಹೀಗಿದ್ದರೂ ಆ ತಂದೆಗೆ ಮತ್ತು ಈ ರಾಮನಿಗೆ ಉಚಿತವಾದ ರೀತಿಯಲ್ಲಿ ಶ್ರಾದ್ಧವನ್ನು ಆಚರಿಸಬೇಕೆಂದಿದ್ದೇನೆ.

**तातस्य राघवस्य**—ಅಂತಹ ಚಕ್ರವರ್ತಿ ಸಾರ್ವಭೌಮನಿಗೆ ಯೋಗ್ಯವಾದ ರೀತಿಯಲ್ಲಿಯೂ ಅವನ ಪುತ್ರನಾದ ನನ್ನ ಸ್ಥಾನಕ್ಕೆ ಉಚಿತವಾಗಿಯೂ ಶ್ರಾದ್ಧ ಮಾಡಬೇಕು.

**[illegible]**—ತುಂಬ ಬೆಲೆಬಾಳುವ ವಸ್ತುಗಳಿಂದ. **फलोदके**—फलं च उदकं च तयो समाहार: (ಸಮಾಹಾರದ್ವಂದ್ವ).

**ಶ್ಲೋಕ 6** (ಅನುಷ್ಟುಪ್)—तातः दर्भेषु स्वहस्तरचितानि फलानि दृष्ट्वा यः वनवासं स्मारितः सन् तत्रापि रोदिति ।।

ತಂದೆಯು ದರ್ಭೆಯ ಮೇಲೆ ನನ್ನ ಕೈಯಿಂದ ಇಡಲ್ಪಟ್ಟ ಫಲಗಳನ್ನು ಕಂಡಾಗ ನಮ್ಮ ವನವಾಸವು ಅವನಿಗೆ ಜ್ಞಾಪಕಕ್ಕೆ ಬಂದು ಅಲ್ಲಿಯೂ ದುಃಖಿಸುತ್ತಾನೆ.

**दर्भेषु**—'ದರ್ಭೆಯಲ್ಲಿ' ಸುವರ್ಣಪಾತ್ರೆಗಳ ಬದಲಿಗೆ ಈಗ ದರ್ಭೆಯನ್ನು ಉಪಯೋಗಿಸಬೇಕೆಂದು ರಾಮನ ಖೇದ. तत्रापि—ಸ್ವರ್ಗದಲ್ಲಿಯೂ. ರಾಮನ ಪಿತೃಭಕ್ತಿ ಅಸಾಧೃಶ. ತಂದೆಗೆ ತೃಪ್ತಿಯಾಗಲೆಂದು ತಾನು ಮಾಡಿದ ಶ್ರಾದ್ಧ ತಂದೆಗೆ ಸ್ವರ್ಗದಲ್ಲೂ ಶೋಕದಾಯಕವಾಗಬಹುದು ಎಂದು ರಾಮನ ಅಭಿಪ್ರಾಯ.

**परिव्राजकवेषः**—ಸಂನ್ಯಾಸಿಯ ವೇಷಧಾರಿಯಾಗಿ.

**ಶ್ಲೋಕ 7** (ಮಾಲಿನೀ)—अनियतात्मा अहं एतत् रूपं गृहीत्वा खरवधकृतवैरं नियतं राघवं वञ्चयित्वा जनकनृपसुतां स्वरपदपरिहीणां हव्यधारां इव हर्तुकामः प्रयामि ।

ಆತ್ಮನಿಗ್ರಹವಿಲ್ಲದ ನಾನು (ತಪಸ್ವಿ) ಪರಿವ್ರಾಜಕನ ಈ ರೂಪ ಧರಿಸಿ ಖರನನ್ನು ಕೊಂದ ಕಾರಣ ನನ್ನ ವೈರಿಯಾಗಿರುವ ಆತ್ಮನಿಗ್ರಹಶಾಲಿಯಾದ ರಾಮನನ್ನು ಮೋಸ ಗೊಳಿಸಿ ಮಂತ್ರಾಕ್ಷರೋಚ್ಚಾರವಿಲ್ಲದೇ ಕೊಡುವ ಆಹುತಿಯನ್ನೋ (ರಾಕ್ಷಸರು ಅಪಹರಿಸಲು ಹೋಗುವಂತೆ) ಎಂಬಂತೆ ಸೀತೆಯನು ಅಪಹರಿಸಿ ಒಯ್ಯಲು ಹೋಗು ತ್ತಿದ್ದೇನೆ.

**अनियतात्मा नियतं**—ರಾವಣ ಮತ್ತು ರಾಮ ಇಬ್ಬರೂ ಈಗ ಪರಿವ್ರಾಜಕ ವೇಷಧಾರಿಗಳೇ ನಿಜ. ಆದರೆ ತನ್ನ ರೂಪ ಛದ್ಮ ರಾಮನ ರೂಪ ಸಾತ್ತ್ವಿಕವೆಂದು ರಾವಣನೇ ವರ್ಣಿಸುತ್ತಾನೆ. ತನಗೆ ಇಂದ್ರಿಯನಿಗ್ರಹವಿಲ್ಲ. ತಪಸ್ವಿ ವೇಷ ಧರಿಸಿರುವುದು ಮೋಸಗೊಳಿಸಲು ಅಷ್ಟೆ. ರಾಮನಾದರೆ ಇಂದ್ರಿಯನಿಗ್ರಹಶಾಲಿ. ಆದುದರಿಂದ ಅವನಿಗೆ ಮುನಿವೇಷ ಸರ್ವಥಾ ಒಪ್ಪುತ್ತದೆ.

**खरवधकृतवैरं**—ಸೀತೆಯನ್ನು ಪರಾಕ್ರಮದಿಂದ ಅಪಹರಿಸಲು ರಾವಣನಿಗೆ ಭಯ. ಏಕೆಂದರೆ ಖರದೂಷಣಾದಿಗಳ ಗತಿಯೇನಾಯಿತು ಎಂಬುದು ಅವನಿಗೆ

ತಿಳಿದಿದೆ. ಇಲ್ಲಿ ಕವಿಯು ಕಥೆಯ ಬಹುಭಾಗವನ್ನು ಕೌಶಲದಿಂದ ಸಂಕ್ಷೇಪಗೊಳಿಸಿದ್ದಾನೆ. ಶೂರ್ಪಣಖಿ ಪ್ರಸಂಗ–ಖರದೂಷಣರ ಮರಣವೆಲ್ಲ ಆಗಿಹೋಗಿದೆ. स्वरपदपरिहीणा हव्यधारा — ಸರಿಯಾದ ಮಂತ್ರ ಮತ್ತು ಅದರ ಉಚ್ಚಾರಣೆ ಇಲ್ಲದೆ ಕೊಡಲ್ಪಟ್ಟ ಹೋಮದ ಆಹುತಿಯನ್ನು ರಾಕ್ಷಸರು ಅಪಹರಿಸುತ್ತಾರೆಂದು ಹೇಳಲಾಗಿದೆ. ರಾಕ್ಷಸ ರಾವಣನಿಗೆ ಈ ರೀತಿ ಕದ್ದೊಯ್ಯುವುದು ರೂಢಿಯಾಗಿದ್ದಿರಬೇಕು. ಸೀತೆ ಪವಿತ್ರಳು ಎಂಬ ಅರ್ಥವೂ ಇಲ್ಲಿ ಇದೆ. हर्तुकामः — ಅಪಹರಿಸಲು ಇಚ್ಛೆ ಉಳ್ಳವನಾಗಿ. हर्तुं कामः। **तुमुन्नन्त** ಆದ ಪದಕ್ಕೆ **काम** ಮತ್ತು मनस् ಶಬ್ದಗಳು ಪರವಾದಾಗ तुं ನಲ್ಲಿಯ 'म' **ಕಾರಕ್ಕೆ ಲೋಪ ಬರುತ್ತದೆ.** (तुं **काममनसोरपि** — ಪಾಣಿನಿ).

ಪುಟ 41

**साधु विशेषितं खलु रूपं स्वरेण** —(i) 'ಅವನ ರೂಪವು ಅವನ ಸ್ವರದಿಂದ ಅತಿಶಯ ಸುಂದರವಾಗಿ ಮಾಡಲ್ಪಟ್ಟಿತು.' ಹೀಗೆ ಅರ್ಥ ಮಾಡಿದರೆ ರಾವಣನು ರಾಮನ ರೂಪವನ್ನೂ ಧ್ವನಿಯನ್ನೂ ಹೊಗಳಿದಂತೆ ಆಗುತ್ತದೆ. (ii) 'ನನ್ನ ಅತಿಥಿ ರೂಪವು ನನ್ನ ಸ್ವರದಿಂದ ಸಮರ್ಥಿಸಲ್ಪಟ್ಟಿತು.' ರಾವಣನಿಗೆ ತನ್ನ ಧ್ವನಿಯಿಂದ ತನ್ನ ವೇಷ ಗೊತ್ತಾಗಬಹುದೆಂಬ ಭಯವಿದ್ದಿರಬಹುದು. ತಾನು 'ಅತಿಥಿ' ಯೆಂದು ಘೋಷಿಸಿದಾಗ ರಾಮನು ಒಳಗಿನಿಂದ ಅತಿಥಿಯನ್ನು ಸ್ವಾಗತಿಸುವಂತೆಯೇ ಅವನನ್ನೂ ಆಹ್ವಾನಿಸಲು ರಾವಣನಿಗೆ ತನ್ನ ಧ್ವನಿ ತನ್ನ ರೂಪದ ಕಪಟವನ್ನು ಪ್ರಕಟಗೊಳಿಸಲಿಲ್ಲವೆಂದು ಸಮಾಧಾನ.

**कथमाकम्प इवास्मि अनेन** — ರಾಮನ ಮಾತಿನ ಗಾಂಭೀರ್ಯ ರಾವಣನನ್ನು ಭಯಗೊಳ್ಳುವಂತೆ ಮಾಡುತ್ತಿದೆ. ರಾವಣನಿಗೆ ತಾನು ರಾಮನ ಮುಂದೆ 'ಹೀನ' ನೆಂಬ ಭಾವನೆ ಬೆಳೆದಿದೆ.

**मायाश्रयकनकपार्श्वाकुलो भूत्वा** — ಸೀತೆಯು ಪಾದ ತೊಳೆಯಲು ಬಂದು ಮುಟ್ಟಿದಾಗ ಎಲ್ಲಿ ತನ್ನ ಮಾಯೆಯು ಪ್ರಕಟವಾಗುವುದೋ ಎಂಬ ಭಯ ತುಂಬಿ ಗಾಬರಿಗೊಂಡು.

**ಶ್ಲೋಕ** 8 (ಅನುಷ್ಟುಪ್) — इयं पृथिव्यां मानुषीणां एका- अरुन्धती यस्याः भर्ता इति नारीभिः भवान् सत्कृतः कथ्यते।

ಪೃಥಿವಿಯ ಸ್ತ್ರೀಯರಲ್ಲೆಲ್ಲಾ ಇವಳೊಬ್ಬಳೇ ಪತಿವ್ರತಾಶ್ರೇಷ್ಠೆ ಅರುಂಧತಿ; ಅವಳ ಪತಿ ಎಂದು ನಿನ್ನನ್ನು ಸ್ತ್ರೀಯರು ಸತ್ಕರಿಸಿ ಸ್ತುತಿಸುತ್ತಿದ್ದಾರೆ.

**अरुन्धती — ವಸಿಷ್ಠರ ಪತ್ನಿ.** ಪಾತಿವ್ರತ್ಯದ ಪರಾಕಾಷ್ಠೆ. **ಅಂಥ ಪತಿವ್ರತೆ** ತನ್ನ ಪಾದ **ತೊಳೆಯಬಾರದೆಂದು 'ಪರಿವ್ರಾಜಕ ರಾವಣ'** ತಪ್ಪಿಸಿಕೊಳ್ಳುತ್ತಾನೆ.

**अपि छायां.....न शक्नोमि** —(i) ಛಾಯೆಗೆ ಅಷ್ಟು ಗೌರವ ಕೊಟ್ಟ ನಾನು ಶರೀರವನ್ನು ಅಗೌರವಿಸಲಾರೆ—ಸೀತೆ ನಿನ್ನ ಛಾಯೆಯಂತೆ ಇರುವಳು. ಅವಳು ಪಾದವನ್ನು ತೊಳೆಯಲೇ ನಾನು ಒಪ್ಪಲಿಲ್ಲ. ಅವಳ ಪತಿಯಾದ ನಿನ್ನಿಂದ ಹೇಗೆ ತೊಳೆಸಿಕೊಳ್ಳಲಿ ಎಂಬ ಆಶಯ. (ii) 'ಛಾಯೆಯನ್ನೇನೋ ತಪ್ಪಿಸಿಕೊಂಡೆ. ಈಗ ಶರೀರವನ್ನು ತಪ್ಪಿಸಿಕೊಳ್ಳಲಾರೆ.' ಸೀತೆಯನ್ನು ಛಾಯೆಗೂ ರಾಮನನ್ನು ಶರೀರಕ್ಕೂ ರಾವಣನು ಹೋಲಿಸುತ್ತಾನೆ. ತನಗೆ ರೂಢಿ ಇಲ್ಲದ ಈ ವೇಷ ರಾವಣನನ್ನು ಗಲಿಬಿಲಿಗೊಳಿಸುತ್ತಿದೆ. ಈ ಅರ್ಥದಲ್ಲಿ ಇದು ಸ್ವಗತವೆಂದು ಭಾವಿಸಿದರೆ ಹೆಚ್ಚು ಸೊಗಸು.

**वाचानुवृत्तिः खल्वतिथिसत्कारः** —ಅತಿಥಿಸತ್ಕಾರ ಒಳ್ಳೆಯ ಮಾತಿನಿಂದಲೇ ಆಗುತ್ತದೆ. ಇಷ್ಟೇ ಸಾಕು. ಒಟ್ಟಿನಲ್ಲಿ ರಾವಣನಿಗೆ ರಾಮನನ್ನಾಗಲೀ ಸೀತೆಯನ್ನಾಗಲೀ ಹತ್ತಿರ ಸೇರಿಸುವುದಕ್ಕೆ ಹೆದರಿಕೆ. ಆದುದರಿಂದ ಹೀಗೆ ಹೇಳಿ ಪಾದಪ್ರಕ್ಷಾಳನೆಗೆ ಅವಕಾಶ ಕೊಡದೆ ನುಣುಚಿಕೊಳ್ಳುತ್ತಾನೆ.

**साङ्गोपाङ्गं** ಇತ್ಯಾದಿ —ತನಗೆ ವೇದ ಶಾಸ್ತ್ರಗಳ ಪರಿಚಯವಿದೆಯೆಂದು ಹೇಳಿಕೊಳ್ಳುವ ರೀತಿ ಇದು. ಆ ಸಂದರ್ಭದಲ್ಲಿ 'ಶ್ರಾದ್ಧಕಲ್ಪ'ವೆಂದು ನುಡಿಯಲು ಅಂದಿನ ರಾಮನ ಯೋಚನೆಯೆಲ್ಲಾ ಅದೇ ಆಗಿದ್ದುದರಿಂದ ರಾಮನು ಅದನ್ನೇ ಹಿಡಿಯುತ್ತಾನೆ. ಅವನನ್ನು ಅದನ್ನೇ ಕೇಳುತ್ತಾನೆ.

**भगवन्....एषः** —ತಂದೆ ಕಳೆದುಕೊಂಡ ನನಗೆ ಈಗ ಇದೇ (ಶ್ರಾದ್ಧಕಲ್ಪ ವಿಷಯವೇ) ಮುಖ್ಯ ವಿಷಯ. आगमः—ವೇದ (ವೇದದಂತೆ ಮುಖ್ಯ).

**अलं परिहृत्य ....** ಸಂಕೋಚಪಡಬೇಡ. ಏನು ಕೇಳಬೇಕೆಂದಿದ್ದೀಯೋ ಅದನ್ನು ಸ್ಪಷ್ಟವಾಗಿ ಕೇಳು.

ಪುಟ 42

**निर्वपनक्रियाकाले....तर्पयामि** — ಶ್ರಾದ್ಧಾಚರಣೆಯಲ್ಲಿ ಪಿತೃಗಳನ್ನು ನಾನು ಯಾವುದರಿಂದ ಸಂತೋಷಗೊಳಿಸಬೇಕು ?

'**सर्वं श्रद्धया दत्तं श्राद्धम्**' —ಶ್ರದ್ಧೆಯಿಂದ ಕೊಡಲ್ಪಟ್ಟದ್ದೆಲ್ಲವೂ ಶ್ರಾದ್ಧವೇ !

**विरूढेषु दर्भाः**....ಇತ್ಯಾದಿ; ಬೆಳೆದವುಗಳಲ್ಲಿ ದರ್ಭೆ ; ಧಾನ್ಯಗಳಲ್ಲಿ ತಿಲ ; ಶಾಕಗಳಲ್ಲಿ ಕಡಲೆ ಕುಡಿ ; ಮತ್ಸ್ಯಗಳಲ್ಲಿ ಶಫರ ; ಪಕ್ಷಿಗಳಲ್ಲಿ ವಾರ್ಧ್ರಾಣಸ ; ಪಶುಗಳಲ್ಲಿ ಗೋವು, ಖಡ್ಗಮೃಗ ಅಥವಾ...., ಇವು ಮನುಷ್ಯರಿಗೆ ಪ್ರೀತಿಪ್ರದವಾದುವು.

**वार्ध्राणस** —ಕೆಂಪು ಪಾದ, ಕೆಂಪು ತಲೆ, ಕೆಂಪು ಕೊಕ್ಕು, ಕರಿಯ ಮೈ ಪಡೆದ ಒಂದು ಜಾತಿಯ ಪಕ್ಷಿ (ಮಾರ್ಕಂಡೇಯ ಪುರಾಣ) 'ವಾರ್ಧ್ರಾಣಸದ ಮಾಂಸದಿಂದ ಹನ್ನೆರಡು ವರ್ಷದ ತೃಪ್ತಿ'. ಎಂದು ಮನು ಹೇಳಿದ್ದಾನೆ.

**ಶ್ಲೋಕ 9** (ಅನುಷ್ಟುಪ್) — उभयस्य सान्निध्यं अस्ति; यदि तपसि श्रान्ते धनुः वा एतत् साधयिष्यति यदि धनुषि श्रान्ते तपः वा साधयिष्यति ।

ಎರಡು ಪ್ರಕಾರದ ಬಲವೂ ನನ್ನ ಬಳಿ ಇದೆ. ತಪಸ್ಸು ಬಳಲಿದರೆ ಧನುಸ್ಸು ಇದನ್ನು ಸಾಧಿಸುತ್ತದೆ. ಧನುಸ್ಸು ಬಳಲಿದರೆ ತಪಸ್ಸು ಇದನ್ನು ಸಾಧಿಸುತ್ತದೆ.

**उभयस्य** — ತಪೋಬಲ-ಕ್ಷಾತ್ರಬಲ ಎರಡೂ ಇದೆ—"ಶಾಪಾದಪಿ ಶರಾದಪಿ".

**हिमवतः····अभिवर्षन्ति** — ಹಿಮವತ್ಪರ್ವತದ ಸಪ್ತಮ ಶಿಖರದಲ್ಲಿ ಸಾಕ್ಷಾತ್ ಪರಮೇಶ್ವರನ ಶಿರದಿಂದ ಹರಿಯುವ ಗಂಗಾಜಲವನ್ನು ಆಸ್ವಾದಿಸುವ ವೈಢೂರ್ಯದಂತೆ ಶ್ಯಾಮ ವರ್ಣದ ಹಿಂಭಾಗವುಳ್ಳ ವಾಯುವೇಗದಲ್ಲಿ ಚಲಿಸುವ, ಕಾಂಚನಪಾರ್ಶ್ವಗಳೆಂಬ ಮೃಗಗಳಿರುವುವು. ವೈಖಾನಸ ವಾಲಖಿಲ್ಯ ನೈಮಿಶೀಯಾದಿ ಮಹರ್ಷಿಗಳು ನೆನೆದ ಕೂಡಲೇ ಅವರ ಬಳಿಗೆ ಬಂದು ಮಡಿಯುವುವು. ಅವುಗಳಿಂದ ಅವರು ಶ್ರಾದ್ಧಕ್ರಿಯೆಯನ್ನು ನೆರವೇರಿಸುವರು. ವೈಖಾನಸರು ಮತ್ತು ವಾಲಖಿಲ್ಯರು ಋಷಿಗಣಗಳು. ನಿಮಿಶಾರಣ್ಯವಾಸಿಗಳೇ ನೈಮಿಶೀಯರು.

**ಶ್ಲೋಕ 10** (ವಸಂತತಿಲಕಾ) — तैः तर्पिताः पितरः सुतफलं लभन्ते, हि जरां हित्वा दीप्यमानाः खं उपयान्ति, सुरैः तुल्यं विमानवासं समुपयान्ति ; आवर्तिभिः विषयैः बलात् न ध्रियन्ते च ।

ಆ (ಕಾಂಚನಪಾರ್ಶ್ವಮೃಗಗಳ) ಮಾಂಸದಿಂದ ತೃಪ್ತಿಪಡಿಸಲ್ಪಟ್ಟ ಪಿತೃಗಳು ಮಕ್ಕಳನ್ನು ಪಡೆದ ಧನ್ಯತೆಯನ್ನು ಹೊಂದುತ್ತಾರೆ ; ಏಕೆಂದರೆ ವೃದ್ಧಾಪ್ಯವನ್ನು ಕಿತ್ತೊಗೆದು ಪ್ರಕಾಶಿಸುತ್ತಾ ಸ್ವರ್ಗವನ್ನು ಸೇರುತ್ತಾರೆ. ಅಲ್ಲಿ ದೇವತೆಗಳಿಗೆ ಸಮನಾದ ದಿವ್ಯ ವಾಸವನ್ನು ಅನುಭವಿಸುತ್ತಾರೆ. ಭ್ರಮಕಾರಿಗಳಾದ ಜನನ ಮರಣವನ್ನೊಳಗೊಂಡ ಸಂಸಾರಕ್ಕೆ ಕಾರಣವಾದ ವಿಷಯಸುಖಗಳಿಗೆ ವಶರಾಗದವರಾಗುತ್ತಾರೆ.

**ಶ್ಲೋಕ 11** (ವಸಂತತಿಲಕಾ) — (मैथिलि) पुत्रकृतकान् हरिणान्, द्रुमान् च, विन्ध्यं वनं तव सखीः दयिताः लताः च आपृच्छ ; दीप्तैः इव ओषधिवनैः उपरञ्जितेषु तेषु हिमवद्गिरिकाननेषु यास्यामि ।

ಸೀತೆ, ನೀನು ಮಕ್ಕಳೆಂದು ಭಾವಿಸಿರುವ ಜಿಂಕೆಗಳನ್ನೂ, ವೃಕ್ಷಗಳನ್ನೂ ನಿನ್ನ ಜೊತೆಗಿರಲು ಆಹ್ವಾನಿಸು ; ವಿಂಧ್ಯವನವನ್ನೂ ನಿನ್ನ ಪ್ರಿಯ ಲತಾಸಖಿಯರನ್ನೂ ಆಹ್ವಾನಿಸು, ಪ್ರಜ್ವಲಿಸುತ್ತಿವೆಯೋ ಎಂಬಂತೆ ಕಾಣುವ ಓಷಧಿ ವನಗಳಿಂದ ರಂಜಿಸುವ ಹಿಮವತ್ಪರ್ವತದ ಕಾಡುಗಳಲ್ಲಿ ವಾಸಮಾಡಲು ನಾನು ಈಗಲೇ ಹೋಗುವೆ.

ಕಾಂಚನ ಪಾರ್ಶ್ವಮೃಗವನ್ನು ತರುವ ಆಸೆಯಿಂದ ಹಿಮಗಿರಿ ವನಗಳಲ್ಲಿ ವಾಸ ಮಾಡಲು ಹೊರಡಲು ಸಿದ್ಧನಾದ ರಾಮನ ಮಾತಿದು.

**आपृच्छ — आ + √प्रच्छ्** — ಇದು आपृच्छस्व ಎಂದಿರಬೇಕಾಗಿತ್ತು. ಆದರೆ ಇಂತಹ ಅಪಾಣಿನೀಯ ಪ್ರಯೋಗ ಭಾಸನಲ್ಲಿ ಅಪರೂಪವಲ್ಲ. तेषु काननेषु—ಕಾಂಚನ ಪಾರ್ಶ್ವಮೃಗಗಳು ದೊರೆಯುವ ಅರಣ್ಯಗಳಲ್ಲಿ. आसन्नोपधयो नेतुः नक्तमस्नेह-दीपिकाः —ರಘುವಂಶ, ಸರ್ಗ 4. ಶ್ಲೋಕ 75.

ಪುಟ 43

**ಶ್ಲೋಕ 12** (ಅನುಷ್ಟುಪ್)—हिमवान् तान् सौवर्णान् मृगान् मे दर्शयिष्यति वा भद्बाणवेगेन भिन्नः क्रौञ्चत्वं गमिष्यति वा ।

ಹಿಮವಂತನು ಆ ಸ್ವರ್ಣಮೃಗಗಳು ಎಲ್ಲಿವೆಯೆಂಬುದನ್ನು ತೋರಿಸುವನು. ಇಲ್ಲವೇ ನನ್ನ ಬಾಣದ ವೇಗದಿಂದ ಸೀಳಿಹೋಗಿ ಕ್ರೌಂಚಪರ್ವತದ ಅವಸ್ಥೆಯನ್ನು ಪಡೆಯುವನು.

**क्रौञ्चत्वं गमिष्यति** — ಹಿಂದೆ ಕಾರ್ತಿಕೇಯನೂ ಪರಶುರಾಮನೂ ಸ್ಪರ್ಧಿಸಿ ತಮ್ಮ ಬಾಣದಿಂದ ಕ್ರೌಂಚಪರ್ವತವನ್ನು ಸೀಳಿದರೆಂದು ಕಥೆ ಪ್ರಸಿದ್ಧವಾಗಿದೆ. ಆಗ ಕಾರ್ತಿಕೇಯ ಪರಶುರಾಮ ಕ್ರೌಂಚಪರ್ವತವನ್ನು ಸೀಳಿದರು—ಈಗ ದಶರಥರಾಮನಾದ ನಾನು ಹಿಮವತ್ಪರ್ವತವನ್ನು ಸೀಳುವೆನು ಎಂಬ ಅರ್ಥ. ಅಭಿಷೇಕನಾಟಕ ಮತ್ತು ಬಾಲಚರಿತಗಳಲ್ಲೂ ಇದರ ಮಾತಿದೆ.

**असह्यः खलु अस्य अवलेपः** — ಇವನ ಗರ್ವವನ್ನು ನನಗೆ ಸಹಿಸಲಾಗುತ್ತಿಲ್ಲ. ರಾವಣನೂ ಮಹಾ ಪರಾಕ್ರಮಿ. ಈಗ ಛದ್ಮವೇಷದಲ್ಲಿದ್ದರೂ ಅವನ ತೇಜಸ್ಸು ರಾಮನ ಮಾತನ್ನು ಕೇಳಿ ಕೆರಳಿರಬೇಕು.

**अये विद्युत्सम्पात इव** — ಮಿಂಚಿನ ರಾಶಿಯೇ ಇದ್ದಂತಿದೆ. ರಾವಣನು ಮಾಯೆಯಿಂದ ಮೃಗವನ್ನು ಸೃಷ್ಟಿಸಿ ಅಲ್ಲಿ ಬಿಡುವನು.

**इहस्थैव····हिमवान्**— ಹಿಮವಂತನು ನಿನ್ನ ಸೇವೆಯನ್ನು ನೀನಿಲ್ಲಿದ್ದೆಡೆಯೇ ಮಾಡುತ್ತಿದ್ದಾನೆ.

**भगवतो वृद्धिरेषा** — 'ತಮ್ಮ ಪ್ರಭಾವ' ಇದು ಎಂದು ರಾಮನು ಕಪಟ ಸಂನ್ಯಾಸಿಯಲ್ಲಿ ಭಕ್ತಿ ಗೌರವ ತೋರಿಸಿ ಹೇಳುವ ಮಾತು,

**ಶ್ಲೋಕ 13** (ಅನುಷ್ಟುಪ್) — मैथिलि, यदि एषः स्वयं इह आगतः (तर्हि) एतानि तातस्य भाग्यानि। एषः अर्हति पूजायां, लक्ष्मणं ब्रूहि।

ಮೈಥಿಲಿ. ಈ ಕಾಂಚನ ಪಾರ್ಶ್ವಮೃಗವು ತಾನೇ ಇಲ್ಲಿಗೆ ಬಂದಿರುವುದು ತಂದೆಯ ಭಾಗ್ಯ. ಇದು ಪೂಜಾರ್ಹವಾಗಿದೆ. ಪೂಜೆಗೆ ಅದನ್ನು ಬರಮಾಡಿಕೊಳ್ಳಲು ಲಕ್ಷ್ಮಣನಿಗೆ ಹೇಳು.

**आर्यपुत्र····सौमित्रिः** — ಆರ್ಯಪುತ್ರ! ತೀರ್ಥಯಾತ್ರೆಯಿಂದ ಹಿಂದಿರುಗುವ ಕುಲಪತಿಗಳನ್ನು ಇದಿರುಗೊಳ್ಳಲು ಹೋಗೆಂದು ನೀನೇ ಲಕ್ಷ್ಮಣನಿಗೆ ಅಪ್ಪಣೆ ಮಾಡ ಲಿಲ್ಲವೇ ? ಪ್ರತಿಮಾನಾಟಕದ ಸೀತೆಯು ಈ ಪ್ರಸಂಗದಲ್ಲಿ ಅನಿಂದ್ಯಳಾಗುವಂತೆ ಕವಿ ಚಿತ್ರಿಸಿದ್ದಾನೆ. ರಾಮಾಯಣದಲ್ಲಿ ಮಾರೀಚನು ಕಪಟವಾಗಿ ಸೃಷ್ಟಿಸಿದ ರಾಮನ ಆರ್ತಧ್ವನಿಯನ್ನು ಕೇಳಿ ಲಕ್ಷ್ಮಣನನ್ನು ಕಳಿಸಲೆಬ್ಬಿಸಿ, ಅವನು ಎಷ್ಟು ಸಮಾಧಾನ ಪಡಿಸಿದರೂ ಕೇಳದೆ ಅವನನ್ನು ಅವಾಚ್ಯಪದಗಳಿಂದ ಹೊರಕ್ಕೆ ಅಟ್ಟಿದಳೆಂದು ಹೇಳಿದೆ. ಆ ಪಾತ್ರದ ಘನತೆಗೆ ವಾಲ್ಮೀಕಿಯ ರಾಮಾಯಣದಲ್ಲಿನ ಈ ಸಂದರ್ಭ ಸ್ವಲ್ಪ ಕುಂದು ತರುವಂತೆ ಭಾಸವಾಗುತ್ತದೆ. ಆದರೆ ವಾಲ್ಮೀಕಿಯ ದೃಷ್ಟಿ ಸೀತೆಯನ್ನು ಮಾನವ ಸಹಜ ಗುಣಗಳಿಂದ ನೋಡುವುದೂ ಆಗಿದ್ದಿತೆಂಬುದನ್ನು ಮರೆಯಬಾರದು. ಭಾಸನಿಗೆ ಎಲ್ಲ ಪಾತ್ರಗಳನ್ನೂ 'ಆದರ್ಶ'ವೆಂದು ಕಾಣುವ ದೃಷ್ಟಿ. कुलपतिः — ಅಂದರೆ ಇಲ್ಲಿ ಅತ್ರಿ ಮಹರ್ಷಿ ಇರಬಹುದು.

**शुश्रूषस्व भगवन्तम्** — ರಾಮನು ಕಾಂಚನಮೃಗ ಹಿಡಿಯಲು ಹೋಗುವ ಮುಂಚೆ ಸೀತೆಗೆ 'ಪೂಜ್ಯರ ಶುಶ್ರೂಷೆ ಮಾಡು' ಎಂದು ಹೇಳಿ ಹೋಗುತ್ತಾನೆ. ಅಷ್ಟೊಂದು ಭಕ್ತಿ ವಿಶ್ವಾಸ ಪೂಜೆಯನ್ನು ಪಡೆದೂ ರಾವಣ ತನ್ನ ನೀಚ ಕರ್ಮವನ್ನು ಬಿಡಲಿಲ್ಲ.

**ಶ್ಲೋಕ 14** (ಅನುಷ್ಟುಪ್) — अहो बलं, अहो वीर्यं, अहो सत्त्वं, अहो जवः, 'रामः' इति अल्पैः अक्षरैः इदं जगत् स्थाने व्याप्तम्।

ಅಬ್ಬಾ! ಏನು ಬಲ, ಏನು ವೀರ್ಯ, ಏನು ಸತ್ವ, ಏನು ವೇಗ: ಎರಡೇ ಅಕ್ಷರವಿದ್ದ 'ರಾಮ' ಎಂಬ ಪದ ಜಗತ್ತನ್ನೇ ಆವರಿಸಿಕೊಂಡಿರುವುದು ಉಚಿತ ವಾಗಿಯೇ ಇದೆ.

**स्थाने** — ಉಚಿತ. ರಾವಣನೂ ರಾಮನನ್ನು ಹೊಗಳುತ್ತಾನೆ.

ಪುಟ 44

**ಶ್ಲೋಕ 15** (ಅನುಷ್ಟುಪ್) — रामे मायया अपहृते (सति) अमन्त्रोक्ता आहुतिं इव रुदतीं बालां सीतां तपोवनात् हरामि।

ರಾಮನು (ಮೃಗ) ಮಾಯೆಯಿಂದ ದೂರಕ್ಕೆ ಒಯ್ಯಲ್ಪಟ್ಟನಂತರ, ಮಂತ್ರದ ರಕ್ಷಣೆ ಇಲ್ಲದ ಆಹುತಿಯನ್ನೋ ಎಂಬಂತೆ ರಕ್ಷಣೆ ಇಲ್ಲದೆ ಅಳುತ್ತಿರುವ ಸೀತೆಯನ್ನು ತಪೋವನದಿಂದ ಅಪಹರಿಸುವೆ.

**अमन्त्रोक्ताम्** — ಭಾಸನಿಗೆ ಯಜ್ಞಯಾಗಗಳ ಉಪಮಾನ ಹೆಚ್ಚು ಇಷ್ಟವಿದ್ದಂತೆ ಕಾಣುತ್ತದೆ.

**उटजं** — ಪರ್ಣಶಾಲೆಯನ್ನು. ಉಟ = ಎಲೆ.

**ಶ್ಲೋಕ 16** (ಶಾರ್ದೂಲವಿಕ್ರೀಡಿತಂ)—हे विशालनयने, येन युद्धे शक्रादयो सुराः सदानवगणाः निर्जिताः सः रावणः अहं शूर्पणखाविरूपकरणं दृष्ट्वा भ्रातरौ हतौ श्रुत्वा दर्पात् दुर्मति अप्रमेयबलिनं रामं छलैः विलोभ्य त्वां हर्तुमनाः प्राप्तः अस्मि ।

ಎಲೈ ವಿಶಾಲನೇತ್ರೆ. ಯಾರಿಂದ ಇಂದ್ರನೇ ಮೊದಲಾದ ದೇವತೆಗಳೂ ದಾನವ ಗಣಗಳೂ ಸಹ ಯುದ್ಧದಲ್ಲಿ ಪರಾಜಯಗೊಳಿಸಲ್ಪಟ್ಟರೋ. ಅಂತಹ ರಾವಣನಾದ ನಾನು ಶೂರ್ಪಣಖೆಯನ್ನು ವಿರೂಪಗೊಳಿಸಿದುದನ್ನು ಕಂಡು. ಖರದೂಷಣರನ್ನು ಕೊಂದಿದ್ದನ್ನು ಕೇಳಿ, ಗರ್ವದಿಂದ (ನನ್ನನ್ನು ಎದುರಿಸುವ) ಕೆಟ್ಟ ಬುದ್ಧಿ ಪಡೆದ ಅಪಾರ ಬಲಶಾಲಿಯಾದ ರಾಮನನ್ನು ಮೃಗದ ಮಾಯೆಯಿಂದ ಮೋಸಗೊಳಿಸಿ ನಿನ್ನನ್ನು ಕದ್ದೊಯ್ಯಲು ಬಂದಿದ್ದೇನೆ.

**विशालनयने** — विशाले नयने यस्याः सा (तस्याः सम्बुद्धिः)।

**अप्रमेयबलिनम्** — ಇಷ್ಟೇ ಬಲ ಎಂದು ನಿರ್ಧರಿಸಲಾಗದಷ್ಟು ಬಲವುಳ್ಳ.

**दुर्मति** — ರಾವಣನನ್ನು ಎದುರುಹಾಕಿಕೊಳ್ಳಬಾರದೆಂಬುದನ್ನು ಅರಿಯದಿದ್ದುದೇ ರಾಮನ ದುರ್ಮತಿ !

**हर्तुमनाः** — कर्तुकामः ಎಂಬುದಕ್ಕೆ ಕೊಟ್ಟಿರುವ ಟಿಪ್ಪಣಿ ನೋಡಿ.

**ಶ್ಲೋಕ 17** (ಶಾಲಿನೀ) — मया शक्रः भग्नः, वित्तनाथः कम्पितः, सोमः कृष्टः, सूर्यपुत्रः मर्दितः, भोः भीतदेवैः निविष्टं स्वर्गं धिक्, यत्र सीता वर्तते (सा) भूमिः धन्या ।

ನನ್ನಿಂದ ಇಂದ್ರ ಬಡಿದುಹಾಕಲ್ಪಟ್ಟ. ಕುಬೇರ ನಡುಗಿಸಲ್ಪಟ್ಟ. ಚಂದ್ರ ಎಳೆದುಹಾಕಲ್ಪಟ್ಟ. ಯಮ ಜಜ್ಜಲ್ಪಟ್ಟ. ಅಯ್ಯೋ. ಹೆದರಿದ ದೇವತೆಗಳಿಂದ ವಾಸಿಸಲ್ಪಡುತ್ತಿರುವ ಆ ಸ್ವರ್ಗಕ್ಕೆ ಧಿಕ್ಕಾರ. ಸೀತೆ ವಾಸಿಸುವ ಈ ಭೂಮಿಯೇ ಧನ್ಯ.

**वित्तनाथः कम्पितः** — ರಾವಣ ಕುಬೇರನನ್ನು ಹೆದರಿಸಿ ಪುಷ್ಪಕವನ್ನು ಪಡೆದಿದ್ದ.

**भूमिः धन्या** — ಭೂಮಿ ಧನ್ಯವೆಂದು ಹೇಳಲು ಕಾರಣ 'ನಿರ್ಣಯಾತೆ' ಎಂದು ನಿರೀಕ್ಷಿಸುತ್ತೇವೆ. ಆದರೆ ಕವಿ ಮೇಲಿನ ಪಂಕ್ತಿಗಳಿಗೆ ಸಂಬಂಧವಿಲ್ಲದೆ ಇದನ್ನು ಹೇಳಿದಂತಿದೆ.

ಪುಟ 45

**ಶ್ಲೋಕ 18** (ಪ್ರಹರ್ಷಿಣೀ) — रामं वा शरणं उपेहि लक्ष्मणं वा स्वर्गस्थं नरेन्द्रं दशरथं वा, कुपुरुषसंश्रितैः वचोभिः किं वा स्यात् ? मृगशिशवः व्याघ्रं न प्रधर्षयन्ति ॥

ರಾಮನನ್ನೋ, ಲಕ್ಷ್ಮಣನನ್ನೋ, ಸ್ವರ್ಗವಾಸಿ ರಾಜ ದಶರಥನನ್ನೋ? ಯಾವ ಬಳಿಗೆ ಬೇಕಾದರೂ ರಕ್ಷಣೆಗಾಗಿ ಓಡು; ದುರ್ಬಲರಾದವರನ್ನು 'ರಕ್ಷಿಸು ರಕ್ಷಿಸು' ಎಂದು ಕೂಗಿಕೊಂಡರೆ ಏನಾದೀತು? ಜಿಂಕೆಮರಿಗಳು ಹುಲಿಯನ್ನು ಎದುರಿಸಲಾದೀತೆ?

**मृगशिशवः....प्रधर्षयन्ति** — ಜಿಂಕೆಮರಿಗಳು ಹುಲಿಯನ್ನು ಎದುರಿಸಲಾಗದಂತೆ ರಾಮಾದಿಗಳು ತನ್ನನ್ನು ಎದುರಿಸಲಾರರು ಎಂದು ರಾವಣನ ಅಭಿಪ್ರಾಯ.

**ಶ್ಲೋಕ 19** (ಪುಷ್ಪಿತಾಗ್ರಾ) — हे विशालनेत्रे, किं इदं विलपसि, यथा तव आर्यपुत्रं (तथा) मां च विगणय, विपुलबलयुतः समुरगणः अपि एषः रामः योद्धुं मम असमर्थः।

ಎಲೈ ವಿಶಾಲನಯನೆ, ಏಕೆ ಹೀಗೆ ಅಳುತ್ತೀಯೆ? ನನ್ನನ್ನೂ ನಿನ್ನ ಆರ್ಯಪುತ್ರನಂತೆಯೇ ಭಾವಿಸು. ಅಪಾರ ಸೈನ್ಯದಿಂದಲೂ ದೇವಗಣಗಳಿಂದಲೂ ಕೂಡಿ ಬಂದರೂ ಈ ರಾಮನು ನನ್ನೊಡನೆ ಯುದ್ಧಗೈಯಲಾರ.

**ಶ್ಲೋಕ 20** (ಅನುಷ್ಟುಪ್) — वेगात् उत्पतितः यः अहं सूर्यरश्मिभिः न दग्धः 'शप्तः असि' इति अस्याः एभिः परिमितैः अक्षरैः दग्धः (स्यां किम्)।

ವೇಗದಿಂದ ಸೂರ್ಯಲೋಕಕ್ಕೆ ಅಡರಿದ ಯಾವ ನಾನು ಸೂರ್ಯರಶ್ಮಿಯಿಂದಲೂ ದಹಿಸಲ್ಪಡಲಿಲ್ಲವೋ ಅಂತಹ ನಾನು ಇವಳ 'ಶಪಿತನಾಗು' ಎಂಬ ಕೆಲವೇ ಅಕ್ಷರದ ಮಾತಿನಿಂದ ದಗ್ಧನಾದೇನೇನು?

**ಶ್ಲೋಕ 21** (ಅನುಷ್ಟುಪ್) — दशग्रीवः सीतां बलात् एव आदाय गच्छति, यदि रामः क्षात्रधर्मे स्निग्धः (तर्हि) पराक्रमं कुर्यात्।

ಇಕೋ ಈ ರಾವಣನು ಬಲಾತ್ಕಾರದಿಂದ ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿದ್ದಾನೆ. ಒಂದು ವೇಳೆ ರಾಮನಿಗೆ ಕ್ಷತ್ರಿಯಧರ್ಮದಲ್ಲಿ ಅಭಿಮಾನವಿದ್ದರೆ ಪರಾಕ್ರಮ ತೋರಿಸಲಿ.

ಪುಟ 46

**अये स्वपक्ष....जटायुः** — ಅಹಹ, ಕರ್ಕಶವಾದ ಕೊಕ್ಕುಗಳುಳ್ಳ ಜಟಾಯು ತನ್ನ ರೆಕ್ಕೆಗಳ ಹೊಡೆತದ ರಭಸದಿಂದ ಗಾಳಿ ಅರಣ್ಯವನ್ನೆಲ್ಲಾ ಕ್ಷೋಭೆಗೊಳಿಸುತ್ತಾ ನನ್ನನ್ನು ಅಟ್ಟಿಕೊಂಡು ಬರುತ್ತಿರುವನು.

**ಶ್ಲೋಕ 22** (ಅನುಷ್ಟುಪ್) — मद्भुजाकृष्टनिस्त्रिंशकृत्तपक्षक्षतच्युतैः रुधिरैः आर्द्रगात्रं त्वां यमसादनं नयामि।

ನನ್ನ ತೋಳಿನಿಂದ ಹೊರಕ್ಕೆ ಎಳೆಯಲ್ಪಟ್ಟ ಖಡ್ಗದಿಂದ ಕತ್ತರಿಸಲ್ಪಟ್ಟ ರೆಕ್ಕೆಗಳ ಗಾಯದಿಂದ ಹೊರಬಿದ್ದ ರಕ್ತದಿಂದ ನೆಂದ ಶರೀರವುಳ್ಳ ನಿನ್ನನ್ನು ಯಮಲೋಕಕ್ಕೆ ಒಯ್ಯುವೆ.

**ನಿಸ್ತ್ರಿಂಶ** — ಖಡ್ಗ **ಕ್ಷುಣ್ಣ** — ಕತ್ತರಿಸಲ್ಪಟ್ಟ **ಕ್ಷತ** — ಗಾಯ **ರುಧಿರ** — ರಕ್ತ **ಆರ್ದ್ರಗಾತ್ರ** — ತೊಯ್ದು (ಒದ್ದೆಯಾದ) ಶರೀರ **ಯಮಸಾದನ** — ಯಮನ ಮನೆ.

ಈ ಶ್ಲೋಕದ ಶೈಲಿ ವೀರರಸಕ್ಕೆ ಉಚಿತವಾಗಿದೆ. ಶಬ್ದದಿಂದಲೇ ಅರ್ಥ ಹೊರ ಹೊಮ್ಮುತ್ತಿದೆ. ಜಟಾಯು ರಾವಣನನ್ನು ಎದುರಿಸಿದ ಪ್ರಸಂಗವನ್ನು ಕವಿ ಸಂಕ್ಷೇಪ ವಾಗಿ ಮುಗಿಸಿದ್ದಾನೆ.

'ಸೀತಾಪಹರಣ'ವೆಂಬ ಐದನೆಯ ಅಂಕವನ್ನು ಡಾ॥ ಎ. ಆರ್. ಕೃಷ್ಣಶಾಸ್ತ್ರಿಗಳು 'ಸೀತಾ-ಉದ್ಧರಣ'ವೆಂದು ಕರೆದಿರುವುದು ಉಚಿತವಾಗಿದೆ. ಈ ಅಂಕದಲ್ಲಿ ಮಾಡಿರುವ ವಸ್ತುವ್ಯತ್ಯಾಸದಿಂದ ಸೀತಾದೇವಿಯ ಗುಣವು ಪೂರ್ತಿಯಾಗಿ ಮಾರ್ಪಟ್ಟುಹೋಗಿದೆ. ಸೀತೆಯು ಲಕ್ಷ್ಮಣನನ್ನು ಸಂಬೋಧಿಸಿ ಆಡಿದ ನಿಷ್ಠುರ ಮಾತುಗಳಿಗೆ ಇಲ್ಲಿ ಅವಕಾಶ ವಿಲ್ಲ. 'ಸುವರ್ಣಮೃಗ ವೃತ್ತಾಂತ'ಕ್ಕೆ ಕವಿ ತಂದಿರುವ ಬದಲಾವಣೆಯು ರಾಮನ ಪಿತೃಭಕ್ತಿಯನ್ನೂ, ಸೀತೆಯ ಆದರ್ಶ ಸತೀತ್ವವನ್ನೂ ಮೆರೆಸಿದೆ.

ಪುಟ 47

## ಅಂಕ ೬

ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿದ್ದ ರಾವಣನನ್ನು ಮಾರ್ಗ ದಲ್ಲಿಯೇ ಜಟಾಯುವು ಎದುರಿಸಿ ಯುದ್ಧಮಾಡಿ ಮಡಿಯುವುದು. ಸೀತೆಯನ್ನು ರಾವಣನು ಅಪಹರಿಸಿಕೊಂಡು ಹೋದ ವಿಷಯವನ್ನು ತಿಳಿದ ಭರತನು ರಾಜಮಂಡಲ ವನ್ನೂ ಅಪಾರ ಸೈನ್ಯವನ್ನೂ ಕೂಡಿಸಿ ರಾಮನ ಸಹಾಯಕ್ಕಾಗಿ ಅರಣ್ಯಕ್ಕೆ ತೆರಳುವುದು —ಈ ಅಂಕದ ಮುಖ್ಯ ಸಂಗತಿ.

**ಸ್ಥಳ** — (ವಿಷ್ಕಂಭಕ—ಪಂಚವಟೀ).

**ಮುಖ್ಯ ದೃಶ್ಯ** — (ಭರತನ ರಾಜಭವನ).

**ಕಾಲ** — ವಿಷ್ಕಂಭಕ—ಹಿಂದಿನ ಅಂಕದ ಪ್ರಸಂಗದ ನಂತರವೇ. ಮುಖ್ಯ ದೃಶ್ಯ—ಸುಮಾರು ಮೂರು ತಿಂಗಳ ನಂತರ.

**ಪಾತ್ರಗಳು** — ಜಟಾಯು ಮತ್ತು ರಾವಣ—ಇವರ ಯುದ್ಧವನ್ನು ವರ್ಣಿ ಸುವ ವಿಷ್ಕಂಭಕದಲ್ಲಿ ಕವಿ ಇಬ್ಬರು ತಾಪಸರನ್ನು ತಂದಿದ್ದಾನೆ.

**ಶ್ಲೋಕ 1** (ವಂಶಸ್ಥ) — इयं हि सीता नीलोत्पलदामवर्चसा मृणालशङ्खोज्ज्वलदंष्ट्रहासिना निशाविचारिणा निशाचरेण परिभूय मृगी इव नीयते।

ಕನ್ನೈದಿಲೆಯ ಮಾಲೆಯಂತೆ ಕಪ್ಪಾದ ದೇಹಕಾಂತಿಯುಳ್ಳ, ಕಮಲದ ನಾಳದಂತೆ ಶುಭ್ರವೂ ಉಜ್ಜ್ವಲವೂ ಆದ ಕೋರೆದಾಡೆಗಳನ್ನು ನಗುವಿನಲ್ಲಿ ತೋರಿಸುತ್ತಿರುವ ಮಧ್ಯರಾತ್ರಿಯಲ್ಲಿ ಸಂಚರಿಸುವ ಕಳ್ಳನಂತಿರುವ ರಾಕ್ಷಸನಿಂದ ಈ ಸೀತೆಯು ಜಿಂಕೆಯೋ ಎಂಬಂತೆ ಬಲಾತ್ಕಾರದಿಂದ ಕದ್ದೊಯ್ಯಲ್ಪಡುತ್ತಿದ್ದಾಳೆ.

**नीलोत्पलदामवर्चसा** — नीलं च तत् उत्पलं च नीलोत्पलं, तेषां दाम, नीलोत्पलदामवत् वर्चः यस्य, तेन — नीलोत्पलदामवर्चसा।

**मृणाल····हासिना** — मृणालवत् शुभ्रा उज्ज्वला च दंष्ट्रा यस्मिन् कर्मणि तथा हसितुं शीलं यस्य तेन। ಇಲ್ಲಿ सिंहेन मृगीव ಎಂದಿದ್ದರೆ ಹೆಚ್ಚು ಅರ್ಥವತ್ತಾಗಿರುತ್ತಿತ್ತು.

**ಶ್ಲೋಕ 2** (ವಂಶಸ್ಥಂ) — विचेष्टमाना भुजङ्गमाङ्गना इव विधूयमाना पुष्पिता लता इव पापेन दशाननेन प्रसह्य सा तपोवनात् सिद्धिः इव अपनीयते।

ವಿಲವಿಲನೆ ಒದ್ದಾಡುತ್ತಲಿರುವ ನಾಗಿನಿಯೋ ಎಂಬಂತೆ, ಬಲವಾಗಿ ಕೊಡವಲ್ಪಟ್ಟ ಕುಸುಮಿತ ಲತೆಯೋ ಎಂಬಂತೆ ಆ ಸೀತೆಯು ನೀಚ ರಾವಣನಿಂದ ಬಲಾತ್ಕಾರವಾಗಿ ತಪೋವನದ ಸಿದ್ಧಿಯೇ ಅಪಹರಿಸಲ್ಪಡುತ್ತಿದೆಯೋ ಎಂಬಂತೆ ಕದ್ದೊಯ್ಯಲ್ಪಡುತ್ತಿರುವಳು

**भुजङ्गमाङ्गना** — ನಾಗಸ್ತ್ರೀ.

**अये वचनसमकाल....जटायुः** — ಅಹಹ : ನಾನು ಹೀಗೆ ಹೇಳುತ್ತಿರುವಾಗಲೇ ಜಟಾಯುವು 'ದಶರಥನ' ಆನೃಣ್ಯ ಸಲ್ಲಿಸಲು ನಾನಿಲ್ಲಿರುವಾಗ 'ಎಲವೋ ಎಲ್ಲಿ ಹೋಗುವೆ ? ನಿಲ್ಲು' ಎಂದು ರಾವಣನನ್ನು ಸಂಬೋಧಿಸುತ್ತಾ ಆಕಾಶಕ್ಕೆ ಹಾರಿದನು.

**आनृण्यं कर्तुं** — ಋಣ ತೀರಿಸುವುದಕ್ಕೋಸ್ಕರ—ಪ್ರತ್ಯುಪಕಾರ ಮಾಡುವುದಕ್ಕೋಸ್ಕರ. — न ऋणः = अनृणः — अनृणस्य भावः — आनृण्यम्। **उद्वृत्तनयनः** —उद्भ्रान्तचक्षुः ಗಾಬರಿಗೊಂಡ ನೋಟವುಳ್ಳವನಾಗಿ. **क्रव्यादीश्वरः** — क्रव्यं = ಮಾಂಸ—ಅದನ್ನು ತಿನ್ನುವವರು—ಅವುಗಳಿಗೆ ಒಡೆಯ. ಇಲ್ಲಿ ಗೃಧ್ರರಾಜ ಜಟಾಯು.

क्रव्यं (मांसं) अत्तुं शीलं येषां ते = क्रव्यादिनः तस्य.

**ಶ್ಲೋಕ 3** (ಶಾರ್ದೂಲವಿಕ್ರೀಡಿತ) — अचलः (सन्) पक्षाभ्यां (रावणं) परिभूय वीर्यविषयं द्वन्द्वं प्रतिव्यूहते, तुण्डाभ्यां सुनिपृष्टतीक्ष्णं संवेष्टनं चेष्टते।

आयसकण्टकैः इव तीक्ष्णैः नखैः (रावणस्य) वक्षसः भीमान्तरं वज्राग्रैः विषमात् शिलात् दार्यमाणः इव पाट्यते ।

ಧೀರನಾದ ಈ ಜಟಾಯುವು ಸ್ವಲ್ಪವೂ ಚಲಿಸದೆ ತನ್ನ ರೆಕ್ಕೆಗಳಿಂದ ರಾವಣನನ್ನು ಚೆನ್ನಾಗಿ ಬಡಿದುಹಾಕಿ ವೀರೋಚಿತವಾದ ದ್ವಂದ್ವಯುದ್ಧವನ್ನು ಮಾಡುತ್ತಿದ್ದಾನೆ. ತನ್ನ ಚೂಪಾದ ಕೊಕ್ಕಿನ ತುದಿಗಳಿಂದ ವೇಗವಾಗಿ ಹಾಗೂ ಬಲವಾಗಿ ಕುಕ್ಕುತ್ತಿದ್ದಾನೆ. ವಜ್ರಾಯುಧದ ತುದಿಯಿಂದ ಪರ್ವತಗಳ ಶಿಲೆಯನ್ನು ಕೊರೆದು ಚಕ್ಕೆ ಎತ್ತುವಂತೆ ಕಬ್ಬಿಣದ ಉಳಿಯಂತಿರುವ ತನ್ನ ಚೂಪಾದ ಉಗುರುಗಳಿಂದ ರಾವಣನ ಎದೆಯ ವಿಸ್ತಾರವಾದ ಒಳಭಾಗವನ್ನು ಕೊರೆಯುತ್ತಿದ್ದಾನೆ.

परिभूय — परिहृत्य — ಬಡಿದುಹಾಕಿ. वीर्यविषयं — ವೀರೋಚಿತವಾಗಿ. प्रतिव्याहते — ಪ್ರತಿಯುದ್ಧಮಾಡುತ್ತಾನೆ.

संवेष्टनं चेष्टते — संवरणं तच्चेष्टते — ग्रसितुं प्रयतते [ಎಂ. ಆರ್. ಕಾಳೆ]. (ಕುಕ್ಕಿ ಕುಕ್ಕಿ ಹಾಕಲು ಯತ್ನಿಸುತ್ತಿದ್ದಾನೆ.)

'सम्यग् वेष्टनयुक्तं यथा भवति तथा, चेष्टते' = ಬಲವಾಗಿ ಮುತ್ತಿಗೆ ಹಾಕುತ್ತಿದ್ದಾನೆ (ಟಿ. ಗಣಪತಿಶಾಸ್ತ್ರೀ).

भीमान्तरं — भीमो विस्तारः

हृंत संरम्भेण····हतः — ಅಯ್ಯೋ ರೋಷಾವಿಷ್ಟನಾದ ರಾವಣನು ಕತ್ತಿಯಿಂದ ಬಲ ಹೆಗಲನ್ನು ಕತ್ತರಿಸಿ ಜಟಾಯುವನ್ನು ಕೊಂದಿಟ್ಟನು.

ಪುಟ 48

ಶ್ಲೋಕ 4 (ವಸಂತತಿಲಕ) — क्रीडामयूरं इव शत्रुं अचिन्तयित्वा निशाचरपतेः दीप्तं तेजः अवधूय नागेन्द्रभग्नवनवृक्षः इव अवसन्नः ।

ಜಟಾಯುವು ಶತ್ರುವನ್ನು ಆಟದ ನವಿಲಿನಂತೆ ಕಡೆಗಣಿಸಿ ತನ್ನ ಪರಾಕ್ರಮಕ್ಕೆ ತಕ್ಕನಾದ ಸಮಸ್ತ ಪ್ರಯತ್ನವನ್ನೂ ಮಾಡಿ ರಾಕ್ಷಸ ರಾಜನ ಪ್ರಜ್ವಲಮಾನ ತೇಜಸ್ಸನ್ನೂ ಭಂಗಗೊಳಿಸಿ ಕೊನೆಗೆ ಮತ್ತಗಜದಿಂದ ಉರುಳಿಸಲ್ಪಟ್ಟ ವೃಕ್ಷದಂತೆ ಮರಣಹೊಂದಿ ನೆಲಕ್ಕೆ ಬಿದ್ದನು.

अवसन्नः — ನಾಶವಾದನು (ಮರಣಹೊಂದಿದನು).

ವಿಷ್ಕಂಭಕ — ಈ ವಿಷ್ಕಂಭಕದಲ್ಲಿ ಇಬ್ಬರು ತಾಪಸರು ಜಟಾಯು–ರಾವಣರ ದ್ವಂದ್ವಯುದ್ಧವನ್ನೂ ಜಟಾಯುವಿನ ಮರಣಸಂಗತಿಯನ್ನೂ ಸಂಕ್ಷೇಪವಾಗಿ ತಿಳಿಸಿ ಈ ವೃತ್ತಾಂತವನ್ನು ರಾಮನಿಗೆ ಹೇಳಲು ತೆರಳಿದರು ಎಂಬ ಕಥಾಭಾಗವಿದೆ. ಮಧ್ಯಮಪಾತ್ರಗಳಾದ ತಾಪಸರು ಇಬ್ಬರೂ ಇಲ್ಲಿ ಸಂಸ್ಕೃತದಲ್ಲೇ ಸಂಭಾಷಣೆ ಮಾಡುವುದರಿಂದ ಇದು ಶುದ್ಧ ವಿಷ್ಕಂಭಕ.

**ವಿಜಯಾ** — ಪ್ರತಿಹಾರಿಗೆ ಇದೇ ಹೆಸರು (ಇಂ)ರುವ ಬೇರೆ ನಾಟಕಗಳಲ್ಲೂ ಕಂಡು ಬರುತ್ತಿದೆ.

**ಶ್ಲೋಕ 5** (ಅನುಷ್ಟುಪ್) — हृदयस्थितशोकाग्निशोषिताननं अधुना आगत सुमन्त्रं दृष्ट्वा एव मे मनः आकुलं आसीत् ।

ಹೃದಯದಲ್ಲಿ ಅಡಗಿದ ದುಃಖಾಗ್ನಿಯಿಂದ ಬಾಡಿದ ಮುಖದಿಂದ ಇದೀಗ ಬಂದ ಸುಮಂತ್ರನನ್ನು ನೋಡಿದ ಕೂಡಲೇ ನನ್ನ ಮನಸ್ಸು ದುಗುಡಗೊಂಡಿತು.

ಪುಟ 49

**ಶ್ಲೋಕ 6** (ವಸಂತತಿಲಕಂ) — प्रख्यातसद्गुणगणः प्रतिपक्षकालः तिग्मांशुवंशतिलकः त्रिदशेन्द्रकल्पः आज्ञावशात् अखिलभूपरिरक्षणस्थः श्रीमान् उदारकलभेभसमानयानः (भरतः) ।

ಪ್ರಸಿದ್ಧ ಸದ್ಗುಣಗಳ ಸಮೂಹವುಳ್ಳ, ಶತ್ರುಗಳ ಯಮನೂ, ಸೂರ್ಯವಂಶಕ್ಕೆ ತಿಲಕನೂ, ಇಂದ್ರನ ಸದೃಶನೂ, (ರಾಮನ) ಆಜ್ಞೆಯಿಂದ ಅಖಿಲ ಭೂಮಂಡಲವನ್ನು ರಕ್ಷಿಸುತ್ತಿರುವವನೂ, ಸರ್ವಮಂಗಳಲಕ್ಷಣನೂ, ಯೌವನ ತುಂಬಿದ ಗಜದ ನಡಿಗೆಯುಳ್ಳವನೂ ಆಗಿದ್ದಾನೆ ಈ ಭರತ ಕುಮಾರ.

**प्रतिपक्षकालः** — प्रतिपक्ष—ಶತ್ರು. ಅವರುಗಳಿಗೆ कालः — ಯಮ. तिग्मांशुतिलकः — तिग्मांशुः — ಸೂರ್ಯ (ಚಂಡಕಿರಣ) ಆ ಕುಲಕ್ಕೆ तिलकः — ಮಂಡನ, ಭೂಷಣ. त्रिदश — ದೇವತೆ. त्रिदशेन्द्र — ದೇವೇಂದ್ರ.

**उदार....यानः** — त्रिशद्वर्षः हस्ती तेन समानं यानः गतिः यस्य । (ಎಂ. ಆರ್. ಕಾಳೆ).

प्रशस्तत्रिंशद्वर्षकुञ्जरतुल्यगमनः (ಗಣಪತಿಶಾಸ್ತ್ರಿ).

**ಶ್ಲೋಕ 7** (ವಸಂತತಿಲಕಂ) — मयि लब्धप्रसादशपथे सन्निवृत्ते अयं अत्रभवान् सुमन्त्रः आर्यनिरीक्षणार्थं पूर्वं गत्वा प्रजानयनबुद्धिमनोभिरामं दृष्ट्वा इह आगतः किम् ?

ಅಣ್ಣನ (ಪಾದುಕಾರೂಪ) ಪ್ರಸಾದವನ್ನು (ಹದಿನಾಲ್ಕು ವರ್ಷಗಳ ನಂತರ ಹಿಂತಿರುಗಿ ಬಂದು ರಾಜ್ಯವನ್ನು ಮತ್ತೆ ಪಡೆಯುವೆನೆಂಬ) ಪ್ರತಿಜ್ಞೆಯನ್ನೂ ಪಡೆದು ನಾನು ಹಿಂತಿರುಗುತ್ತಿರಲಿಕ್ಕಾಗಿ ಈ ಪೂಜ್ಯನಾದ ಸುಮಂತ್ರನು ಆರ್ಯನ ದರ್ಶನಾರ್ಥವಾಗಿ (ಹದಿನಾಲ್ಕು ವರ್ಷ ಕಳೆಯುವ) ಮೊದಲೇ ಹೋಗಿ ಪ್ರಜೆಗಳ ನಯನ, ಬುದ್ಧಿ ಹಾಗೂ ಮನಸ್ಸುಗಳಿಗೆ ರಮಣೀಯನಾದ ರಾಮನನ್ನು ಸಂದರ್ಶಿಸಿ ಇಲ್ಲಿಗೆ ಆಗಮಿಸಿದ್ದಾನೆಯೋ ?

**प्रसाद** — ಪಾದುಕಾ ಪ್ರದಾನ ರೂಪ (ಪ್ರಸಾದ), ಅನುಗ್ರಹ.

**शपथः** — ಹದಿನಾಲ್ಕು ವರ್ಷಗಳ ನಂತರ ರಾಜ್ಯವನ್ನು ಸ್ವೀಕರಿಸುತ್ತೇನೆಂದು ಕೊಟ್ಟ ಮಾತು.

**अभिरामः** — ರಮಣೀಯನಾದ.

**ಶ್ಲೋಕ 8** (ಪುಷ್ಪಿತಾಗ್ರ) — मया नरपतिनिधनं अनुभूतं, मया एव नृपतिसुतव्यसनं दृष्टं, सः मैथिलीप्रणाशः च श्रुतः, मे आयुषा गुण बहु अपराद्धं इव !

ರಾಜನ ಮರಣವನ್ನು ಅನುಭವಿಸಿದೆ : ರಾಜಕುಮಾರನ ವ್ಯಸನವನ್ನೂ ಕಂಡೆ : ಈಗ ಸೀತಾಪಹರಣದ ವೃತ್ತಾಂತವನ್ನೂ ಕೇಳಿದೆ : ನಾನು ಬಹುಕಾಲ ಬದುಕಿದ ಗುಣವೇ ದೊಡ್ಡ ಅಪರಾಧವೆನಿಸಿದೆ.

**इह** — ಇಲ್ಲಿ. "ಈಗ" ಎಂದು ಅರ್ಥಮಾಡಿದರೆ ಹೆಚ್ಚು ಸಮಂಜಸ.

**अन्वास्यमानः चिरजीवदोषैः** — (ಅಂಕ 3, ಶ್ಲೋಕ 15) ಎಂಬ ಮಾತಿನಲ್ಲಿಯೂ ಸುಮಂತ್ರನು ಇದೇ ಭಾವವನ್ನು ವ್ಯಕ್ತಪಡಿಸಿದ್ದಾನೆ.

ಪುಟ 50

**तात अपि . . . . सौभ्रात्रम् ?** — ಅಪ್ಪಾ, ಲೋಕವಿಖ್ಯಾತ ಪಿತೃಭಕ್ತ (ಅಂದರೆ ರಾಮನನ್ನು) ಯನ್ನು ಕಂಡೆಯಾ? ಅರುಂಧತೀ ಚಾರಿತ್ರ್ಯದ ಪ್ರತಿರೂಪವನ್ನು ನೋಡಿದೆಯಾ? ನಿಷ್ಕಾರಣವಾಗಿ ವನವಾಸ ಕೈಗೊಂಡ ಸೌಭ್ರಾತ್ರ (ಲಕ್ಷ್ಮಣನನ್ನು) ಕಂಡೆಯಾ ?

**भर्तृदारकः खलु आर्यं पृच्छति** — ರಾಜಕುಮಾರನು ಪೂಜ್ಯರನ್ನು ಪ್ರಶ್ನೆಮಾಡುತ್ತಿದ್ದಾನೆ. ಸುಮಂತ್ರನು ದುಗುಡದಿಂದ ವಿಮನಸ್ಕನಾಗಿ ಪ್ರಶ್ನೆಗೆ ಉತ್ತರ ಹೇಳದೇ ನಿಲ್ಲಲು ಪ್ರತೀಹಾರೀ ಅವನ ಗಮನವನ್ನು ಸೆಳೆಯುತ್ತಾಳೆ.

**संतापात् भ्रष्टहृदयः** — ದುಃಖದಿಂದ ಶೂನ್ಯಮನಸ್ಕನಾಗಿದ್ದಾನೆ.

**अपि . . . . तत्रभवान्** — ಪೂಜ್ಯನೆ, ದಾರಿಯ ಮಧ್ಯದಿಂದಲೇ ಹಿಂದಿರುಗಿ ಬಂದುಬಿಟ್ಟೆಯಾ ?

(ರಾಮನನ್ನು ಕಾಣಲು ಅಲ್ಲಿಯವರೆಗೆ ಹೋಗಲಿಲ್ಲವೆ ?)

**किन्तु खलु आत्मानं न दर्शयन्ति ?** — ಹಾಗಾದರೆ ಕೋಪದಿಂದಲಾಗಲೀ ಅಥವಾ ಲಜ್ಜೆಯಿಂದಾಗಲೀ ಅವರು ನಿನ್ನನ್ನು ನೋಡಲು ಇಷ್ಟಪಡಲಿಲ್ಲವೇ ?

**ಶ್ಲೋಕ 9** .(ಅನುಷ್ಟುಪ್) — विनीतानां क्रोधः कुतः ? कृतचेतसां लज्जा वा (कुतः) मया तु तत् तपोवनं तैः विहीनं शून्यं दृष्टम् ।

ವಿನೀತರಿಗೆ ಕೋಪವೆಲ್ಲಿಯದು ? ಧನ್ಯಚೇತನರಿಗೆ ಲಜ್ಜೆಯಲ್ಲಿಯದು ? ಆದರೆ ಅವರಾರೂ ಇಲ್ಲದೆ ಶೂನ್ಯವಾದ ಆ ತಪೋವನವನ್ನು ನಾನು ಕಂಡೆ.

**वनौकसां** — ಕಪಿಗಳ. **वनौका:** ಎಂದರೆ ವನದಲ್ಲಿ ವಾಸಮಾಡುವ ಯಾರಾದರೂ ಆಗಬಹುದು. वनं ओक: (वासस्थानं) येषां ते तेषां ಇಲ್ಲಿ 'ಕಪಿಗಳ' ಎಂಬ ಅರ್ಥ.

**हन्त, अविज्ञात····प्रतिवसन्ति** — ಅಯ್ಯೋ, ಮನುಷ್ಯರಲ್ಲಿ ಅಸಾಧಾರಣ ಗಣ್ಯವ್ಯಕ್ತಿಗಳಾರು. ಅವರನ್ನು ಹೇಗೆ ಕಾಣಬೇಕು ? ಈ ತಾರತಮ್ಯವೊಂದೂ ಕಪಿಗಳಿಗೆ ತಿಳಿಯಂದಲ್ಲಾ !

**कुमार····अवगच्छति** — ತಿರ್ಯಗ್ಜಂತುಗಳಾದರೂ ಮಾಡಿದ ಉಪಕಾರ ವನ್ನು ನೆನೆಯುತ್ತವೆ.

**ಶ್ಲೋಕ 10** (ಅನುಷ್ಟುಪ್) — ज्येष्ठेन भ्रात्रा वालिना राज्यात् भ्रंशित. हृतदार: सुग्रीव: शैले वसन् तुल्यदु:खेन (रामेण मोक्षित:).

ಜ್ಯೇಷ್ಠಭ್ರಾತೃವಾದ ವಾಲಿಯಿಂದ ರಾಜ್ಯದಿಂದ ಹೊರದೂಡಲ್ಪಟ್ಟು ಸುಗ್ರೀವನು ಪತ್ನಿಯನ್ನು ಕಳೆದುಕೊಂಡು ಬೆಟ್ಟದಲ್ಲಿ ವಾಸಿಸುತ್ತಿರಲು ಸಮಾನದುಃಖ ದಿಂದ ಕೂಡಿದ್ದ ರಾಮನಿಂದ ರಕ್ಷಿಸಲ್ಪಟ್ಟನು.

**तुल्यदु:खेन** — ಸುಗ್ರೀವನ ದುಃಖಕ್ಕೆ ಸಮಾನವಾದ ಪತ್ನಿಯ ಅಪಹರಣ ವೆಂಬ ದುಃಖದಿಂದ ಕೂಡಿದ. ರಾಮಾಯಣದಲ್ಲಿನ ವಿಸ್ತಾರ ಕಥಾಭಾಗವನ್ನು ಕವಿ ಕೌಶಲದಿಂದ ಸಂಕ್ಷೇಪಗೊಳಿಸಿದ್ದಾನೆ.

**हन्त सर्वमुक्तमेव मया....अभिप्रेता** — ಮನಸ್ಸಿನಲ್ಲಿ ಅಯ್ಯೋ ನಾನೆಲ್ಲ ವನ್ನೂ ತಿಳಿಸಿಯೇಬಿಟ್ಟೆನಲ್ಲಾ. (ಕೇಳಿಸುವಂತೆ) ಕುಮಾರ ! ಮತ್ತೇನೂ ಇಲ್ಲ. 'ರಾಜ್ಯಚ್ಯುತಿ ಇಬ್ಬರಿಗೂ ಸಮಾನ' ಎಂಬ ಅರ್ಥದಲ್ಲಿ ನಾನು ಹಾಗೆ ಹೇಳಿದೆ.

**गृह्यते** — ಮುಚ್ಚಿಡುತ್ತಿದ್ದಿ.

ಉದ್ವೇಗಕ್ಕೂ ಕುತೂಹಲವನ್ನು ಹುಟ್ಟಿಸುವ ಸಂಭಾಷಣೆ ಹಿಡಿದು ಸುಮಂತ್ರನು ಮಾತನಾಡುತ್ತಾನೆ. ಕೆದಕಿ ಕೆದಕಿ ಭರತ ಪ್ರಶ್ನಿಸುತ್ತಾನೆ. ಭರತನಿಗೆ ದುಃಖದ ಸಂಗತಿ ಸ್ವಲ್ಪ ಸ್ವಲ್ಪ ಅರಿವಾಗುತ್ತದೆ. (ಪ್ರತಿಜ್ಞಾಯೌಗಂಧರಾಯಣದಲ್ಲಿ ದುಃಖದ ಪ್ರಸಂಗವನ್ನು ವಾತ್ಸಲ್ಯ ತುಂಬಿದ ಹೃದಯಕ್ಕೆ ಹೇಗೆ ತಿಳಿಸಬೇಕೆಂಬುದನ್ನೇ ಒಂದು ಶ್ಲೋಕದಲ್ಲಿ ಹೇಳಿಸಿದ್ದಾನೆ. ಅಂಕ 1. ಶ್ಲೋಕ 13).

ಪುಟ 51

**ಶ್ಲೋಕ 11** (ಅನುಷ್ಟುಪ್) — मुनिजनरक्षार्थं महता रभसा वैरं (रामेण) कृतम् । ततः रावणेन मायां उपाश्रित्य सीता हृता ।।

ತಪಸ್ವಿಜನ ರಕ್ಷಣೆಯ ಉದ್ದೇಶದಿಂದ ಬಲಿಷ್ಠ ರಾಕ್ಷಸನೊಡನೆ ರಾಮನು ವೈರ ಕಟ್ಟಿಕೊಂಡನು. ಆ ಕಾರಣದಿಂದ ಸ್ವರ್ಣಮೃಗ ಮಾಯೆಯ ಮುಖಾಂತರ ರಾವಣನು ಸೀತೆಯನ್ನು ಕದ್ದೊಯ್ದನು.

**ಶ್ಲೋಕ 12** (ವಸಂತತಿಲಕಾ)—पित्रा च बान्धवजनेन च विप्रयुक्तः, वनप्रदेशे महत् दुःखं समनुभूय पुनः भार्यावियोगं उपलभ्य मम आर्यः सः प्रभया वियुक्तः जीमूतचन्द्र इव (अस्ति)।

ತಂದೆಯನ್ನು ಕಳೆದುಕೊಂಡು, ಬಂಧುಬಾಂಧವರಿಂದ ದೂರನಾಗಿ, ಅರಣ್ಯ ಪ್ರದೇಶದಲ್ಲಿ ಅಪಾರ ಕ್ಲೇಶಗಳನ್ನನುಭವಿಸಿ ಈಗ ಪತ್ನಿಯನ್ನೂ ಕಳೆದುಕೊಂಡು ಮೋಡ ಮುಚ್ಚಿದ ಚಂದ್ರನು ಪ್ರಭೆಯನ್ನು ಕಳೆದುಕೊಂಡು ಆಕಾಶದಲ್ಲಿರುವಂತೆ ನಮ್ಮ ಅಣ್ಣನು ವನದಲ್ಲಿರಬೇಕಾಯಿತಲ್ಲಾ.

**कैकेयीं चतुःशालकमिदम्** — ಇದು ರಾಣಿಯರಿರುವ ಪಡಸಾಲೆ, ತೊಟ್ಟಿ.

**केन तत् वचनेन . . . . भरतः** — 'ಭರತ ಇನ್ನು ಯಾವ ಪ್ರಸ್ತಾಪವನ್ನೆತ್ತಿ, ಮತ್ತೆ ನನ್ನನ್ನು ನಿಂದಿಸುವನೋ' ...... ಕೈಕೇಯಿಗೆ ಹೆದರಿಕೆ.

**जात, अपि . . . . शब्दयितव्या ?** — ಮಗು, ಕೌಸಲ್ಯ, ಸುಮಿತ್ರೆಯರನ್ನೂ ಬರಮಾಡಿಕೊಳ್ಳೋಣವೇನು ? ಮುಂದಿನ ಪ್ರಿಯವಾರ್ತೆ ತಿಳಿಸುತ್ತೇನೆ — ಎಂದು ಭರತನು ಹೇಳಿದ. ಅದರಿಂದ ಪ್ರಿಯವಾರ್ತೆಯಾದರೆ ಕೌಸಲ್ಯೆ-ಸುಮಿತ್ರೆಯರೂ ಬರಲಿ ಎಂಬ ಸದ್ಭಾವದಿಂದ ಕೈಕೇಯಿ ಕೇಳುತ್ತಾಳೆ.

ಪುಟ 52

**ಶ್ಲೋಕ 13** (ಅನುಷ್ಟುಪ್) — यः त्वन्नियोगात् स्वराज्यं परित्यज्य वनं गतः तस्य भार्या सीता हृता। ते मनोरथः पर्याप्तः किम् ?

ಯಾರು ನಿನ್ನ ಆಜ್ಞೆಯಂತೆ ತನ್ನ ರಾಜ್ಯವನ್ನು ಪರಿತ್ಯಜಿಸಿ ವನಕ್ಕೆ ತೆರಳಿದನೋ ಅವನ ಪತ್ನಿ ಸೀತೆಯು (ರಾವಣನಿಂದ) ಅಪಹೃತಳಾದಳು. ಈಗ ನಿನ್ನ ಇಷ್ಟ ಪೂರ್ಣಗೊಂಡಿತೆ ?

**स्वराज्यं** — ರಾಜ್ಯ ರಾಮನಿಗೇ ಸೇರಿದ್ದು ಎಂದು ಭರತನ ನಿರ್ಧಾರ.

**ते मनोरथः पर्याप्तः** — ನಿನ್ನ ಅಭಿಲಾಷೆ ಈಡೇರಿತೆ ? ಎಂತಹ ಚುಚ್ಚುವ ಮಾತು : ವ್ಯಂಗ್ಯ !

ಪುಟ 53

**ಶ್ಲೋಕ 14** (ಅನುಷ್ಟುಪ್) — हन्त भोः अत्रभवतीं वधूं प्राप्य सत्त्वयुक्तानां मनस्विनां इक्ष्वाकूणां वधूप्रधर्षणं प्राप्तम्।

ಅಯ್ಯೋ! ಎಂತಹ ದುಃಖ! ಸತ್ವಶಾಲಿಗಳೂ ಪ್ರಶಸ್ತ ಮನಸ್ಕರೂ ಆದ ಇಕ್ಷ್ವಾಕುಗಳಿಗೆ ನಿನ್ನನ್ನು ಸೊಸೆಯಾಗಿ ತಂದುಕೊಂಡ ಕಾರಣ ಸೊಸೆಯನ್ನು ಬೇರೆಯವರು ಅಪಹರಿಸಿದ ಅಪಮಾನ ಬಂತು.

**शाप्ता अत्रभवती वधू**—ನೀನು ಸೊಸೆಯಾಗಿ ಬಂದು ಪ್ರಾಪ್ತವಾದ ರಾಜ್ಯವನ್ನು ರಾಮನಿಗೆ ತಪ್ಪಿಸಿದೆ. ಅವನನ್ನು ವನಕ್ಕೆ ಹೋಗುವಂತೆ ಮಾಡಿದೆ. ಅಲ್ಲಿ ಅರಕ್ಷಳಾದ ಸೀತೆಯನ್ನು ರಾವಣನು ಅಪಹರಿಸಿದ. ಹೀಗೆ ನಿನ್ನಿಂದಲೇ ಎಲ್ಲ ಅನರ್ಥ ಎಂದು ಭರತನ ಅಭಿಪ್ರಾಯ.

**भवतु इदानीं कालः कथयितुम्** —'ವಿಷಯವನ್ನು ಯಥಾರ್ಥ ತಿಳಿಸಲು ಇದು ಸಕಾಲ.' ಹಿಂದೆ 'देशे काले निवेदयामि' ಎಂದು ಹೇಳಿದ್ದಳಷ್ಟೆ. ಪ್ರಶಸ್ತವಾದ ತನ್ನ ಯೋಜನೆಯನ್ನು ಭರತನಿಗೂ ಲೋಕಕ್ಕೂ ತಿಳಿಸಲು ಕೈಕೇಯಿ ಸಮಯ ಕಾಯುತ್ತಿದ್ದಳು.

**जात, त्वं जानासि महाराजस्य शापम् ?** —ಮಗೂ, ಮಹಾರಾಜನಿಗೆ ಇದ್ದ (ಮುನಿ) ಶಾಪದ ಅರಿವು ನಿನಗಿದೆಯೇ ? ಈಗ ದಶರಥನಿಗೆ ಒದಗಿದ ಮುನಿಶಾಪದ ಪ್ರಸಂಗವನ್ನು ತಿಳಿಸಲು ಸುಮಂತ್ರನಿಗೆ ತಿಳಿಸುತ್ತಾಳೆ.

**पुरा····क्षिप्तः**—ಹಿಂದೆ ಒಂದು ಸಲ ಬೇಟೆಗೆ ತೆರಳಿದ್ದ ಮಹಾರಾಜನಿಂದ, ಅಂಧಮಹರ್ಷಿಯೊಬ್ಬನಿಗೆ ತಾನೇ ಕಣ್ಣಾಗಿದ್ದ ಮುನಿಕುಮಾರನು ಸರಸ್ಸಿನಲ್ಲಿ ಕಮಂಡಲುವಿನಿಂದ ನೀರು ತುಂಬುತ್ತಿರಲು ಆ ಶಬ್ದವು ಕಾಡಾನೆಯ ಬೃಂಹಿತ ಶಬ್ದದಂತೆ ಕೇಳಿಸಲು ಅಲ್ಲಿ ವನಗಜವಿದೆಯೆಂಬ ಶಂಕೆ ಮೂಡಿ ಶಬ್ದವೇಧಿ ಬಾಣವನ್ನು ಬಿಡಲು ಆ ಋಷಿಕುಮಾರನು ಕೊಲ್ಲಲ್ಪಟ್ಟನು.

**मृगयागतेन**—ಬೇಟೆಗೆ ಹೋಗಿದ್ದ; **शब्दवेधी**—ಕಾಣಿಸದಿದ್ದರೂ ಶಬ್ದದಿಂದ ತಿಳಿದು ಕತ್ತರಿಸಬಲ್ಲ ಬಾಣ (ಆ ಶಕ್ತಿಯುಳ್ಳ ವ್ಯಕ್ತಿ).

**विपन्नचक्षुषः**—ಕಣ್ಣು ಕಳೆದುಕೊಂಡಿದ್ದ (ಅಂಧನಾದ).

**शान्तं पापं**—ಬಿಡಿತು ಬಿಡಿತು: ಏನಾದರೂ ಆಗಬಾರದ ವಿಚಾರವನ್ನು ಕೇಳಿದಾಗ ಹೇಳುವ ಪದವೃಂದ.

**ಶ್ಲೋಕ 15** (ಅನುಷ್ಟುಪ್)—रुदितस्य अन्ते तेन सत्यभाषिणा मुनिना उक्तम्. भोः 'यथा अहं एवं त्वं अपि पुत्रशोकात् विपत्स्यसे' इति ।

ಅತ್ತೂ ಅತ್ತೂ ಕೊನೆಯಲ್ಲಿ ಸತ್ಯಭಾಷಿಯಾದ ಆ ಮುನಿಯಿಂದ—'ಎಲವೋ ನನ್ನಂತೆಯೇ ನೀನೂ ಕೂಡ ಪುತ್ರಶೋಕದಿಂದ ಸಾಯುವೆ'—ಎಂದು ಹೇಳಲ್ಪಟ್ಟಿತು.

**जात एतस्मिन्निमित्तं . . . . वनं प्रेषितः** — ಮಗು ಈ ಕಾರಣದಿಂದ ನನ್ನನ್ನೇ ಅಪರಾಧಿನಿಯನ್ನಾಗಿ ಮಾಡಿಕೊಂಡರೂ ಪರವಾಗಿಲ್ಲವೆಂದು—'ಪ್ರಿಯುಸಂತ'ನಾದ ರಾಮನನ್ನು ಕಾಡಿಗೆ ಕಳುಹಿಸಿಕೊಟ್ಟೆ. ರಾಜ್ಯದ ಲೋಭದಿಂದಲ್ಲ.

**अपरिहरणीयो महर्षिशापः** — ಮುನಿಶಾಪವನ್ನು ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ಅದು 'ಪುತ್ರವಿರಹ'ದಿಂದಲೇ ಕೊನೆಯಾಗಬೇಕಾಗಿತ್ತು. ಕೈಕೇಯಿಗೆ ಈ ಶಾಪ ಪ್ರಿಯಪುತ್ರ ರಾಮನ ಮರಣದಿಂದ ಫಲಗೊಂಡೀತೆಂಬ ಭಯ ಹಿಡಿಯಿತು. ಅವಳಿಗೆ ಅವನ ಹಿತದಲ್ಲಿ ಆಸಕ್ತಿ ಇದ್ದು—ರಾಮನ 'ವಿಪ್ರವಾಸ'ದಿಂದ ಪೂರೈಸಿದರೆ ಸಾಕು ಎಂಬ ಭಾವನೆಯಿತ್ತು. ಅದರಿಂದ ಅವಳು ರಾಮನನ್ನು ವನಕ್ಕೆ ಕಳಿಸುವ ಉಪಾಯ ಮಾಡಿದಳು.

**अथ तुल्ये . . . . न प्रेषितः** — 'ಪುತ್ರವಿಪ್ರವಾಸ'ವೆಂಬುದು ನನಗೂ ರಾಮನಿಗೂ ಸಮಾನವಾಗಿದ್ದಿತಲ್ಲಾ, ನನ್ನನ್ನೇಕೆ ನೀನು ವನಕ್ಕೆ ಕಳಿಸಲಿಲ್ಲ—ಭರತನು ಪಟ್ಟಬಿಡುವುದಿಲ್ಲ. ಅವಳನ್ನು ಖಂಡಿಸಿ, ಕೆದಕಿ ಪ್ರಶ್ನೆಮಾಡುತ್ತಾನೆ.

**जात मातुलकुले· · · ·विप्रवासः** — ಮಗು ! ಸೋದರಮಾವನ ಮನೆಯಲ್ಲೇ ದೀರ್ಘಕಾಲ ವಾಸಮಾಡುತ್ತಿದ್ದ ನಿನಗೆ 'ವಿಪ್ರವಾಸ' ಸ್ವತಃ ಸಿದ್ಧವಾಗಿಯೇ ಉಂಟಾಗಿದ್ದಿತು. ಅದು ರಾಜನಿಗಾಗಲೇ ಒಗ್ಗಿಯೂಹೋಗಿತ್ತು.

**अथ चतुर्दश वर्षाणि** — ಹಾಗಾದರೆ ಹದಿನಾಲ್ಕು ವರ್ಷಗಳು ಎಂದು ಏಕೆ ಅಪೇಕ್ಷಿಸಿದೆ ?

**जात· · · ·उक्तम्** — ಮಗು, ಹದಿನಾಲ್ಕು ದಿವಸಗಳೆಂದು ಹೇಳಬೇಕೆಂದೇ ಇದ್ದೆ. ಆದರೆ ಮನಸ್ಸು ಅಸ್ವಸ್ಥವಾಗಿದ್ದುದರಿಂದ ಬಾಯಿತಪ್ಪಿ ಹದಿನಾಲ್ಕು ವರ್ಷಗಳೆಂದುಬಿಟ್ಟೆ. ಕೈಕೇಯಿಗೆ ರಾಮನನ್ನು ರಕ್ಷಿಸಬೇಕೆಂಬ ನಿಶ್ಚಯ, ಪತಿಯನ್ನೂ ರಕ್ಷಿಸಬೇಕೆಂಬ ಆಸೆ ; ಆದರೆ ಮುನಿಶಾಪದ ಕಥಾಪ್ರಸಂಗದಲ್ಲಿನ ಮುನಿಸುತನ ಮರಣ, ಮುನಿಯ ಮರಣ ಮನಸ್ಸಿಗೆ ಬಂದು ಮನಸ್ಸು ಪರ್ಯಾಕುಲಗೊಂಡಿತು. ಏನೋ ಹೇಳಲು ಹೋಗಿ ಆ ಕಾಲದಲ್ಲಿ ಏನೋ ಮಾತು ಬಾಯಿಂದ ಬಂದಿತು. ಇದು ವಿಧಿವಿಲಾಸ. ದಶರಥನಿಗೆ ಒದಗಿದ ಮುನಿಶಾಪದಂತೆ ರಾಮನ ಹದಿನಾಲ್ಕು ವರ್ಷ ವನವಾಸಕ್ಕೆ ಆ ವಿಧಿಯೇ ಕಾರಣ.

ಪುಟ 54

**अस्ति पाण्डित्यं विचारयितुम्** — ನಿನಗೆ ವಿಚಾರಕ್ಷಮತೆ ಉಂಟು.

**हन्त त्रैलोक्य· · · ·अनपराद्धा अत्रभवती** — ಹೌದು, ನಿಜ : ಇವರು ತ್ರೈಲೋಕ್ಯಸಾಕ್ಷಿಗಳಾಗಿರುವರು. ಎಂತಹ ಧನ್ಯತೆ—ನೀನು ಏನೂ ಅಪರಾಧಿನಿಯೇ ಅಲ್ಲವಲ್ಲಾ. ತ್ರೈಲೋಕ್ಯಸಾಕ್ಷಿಗಳ ಪ್ರಮಾಣ ಭರತನಲ್ಲಿ ಅಚಲ ನಂಬಿಕೆ ತಂದು ಮುಂದೆ

ಯಾವ ಪ್ರಶ್ನೆಯನ್ನೂ ಕೇಳದೆ ಒಪ್ಪಿ ಅವಳ ಕ್ಷಮಾಯಾಚನೆ ಮಾಡುವನು. ಭರತನ ಬಾಯಿಂದ ಬರುವ ಈ ಮಾತುಗಳು ಹಿತಕರವಾಗಿವೆ. ಕೈಕೇಯಿಯು ಅಪರಾಧದಿಂದ ಮುಕ್ತಳಾಗಿ ಅವಳ ಔದಾರ್ಯ ರಾಮವಾತ್ಸಲ್ಯ ಘನತೆ ಎಲ್ಲವೂ ಸಂಪೂರ್ಣವಾಗಿ ಪ್ರಕಾಶಗೊಳ್ಳುತ್ತವೆ. ಈ ಪ್ರಸಂಗ ಭಾಸನ ಅದ್ಭುತ ಸೃಷ್ಟಿಗಳಲ್ಲೊಂದು.

**भवितव्यम्** — ಕ್ಷಮಿಸತಕ್ಕದ್ದು.

**अथवाहं····उद्योजयामि** — 'ಇಂದೇ ಅಣ್ಣನ ಸಹಾಯಕ್ಕಾಗಿ ಸಕಲ ರಾಜವೃಂದವನ್ನು ಯುದ್ಧಕ್ಕೆ ಅಣಿಮಾಡುತ್ತೇನೆ.' ಭರತನಲ್ಲಿ ಈಗ ಹೊಸ ತೇಜಸ್ಸು, ಹುರುಪು ಹುಟ್ಟಿದೆ.

**ಶ್ಲೋಕ 16** (ವಂಶಸ್ಥ) — समुद्रस्य इमां वेलां मत्तगजान्धकारं सैन्यौघनिवेशनञ्च करोमि ; तरङ्गैः बलैः रावणेन सह समुद्रं तुल्यं ग्लानिं नयामि ।

ಸಮುದ್ರತೀರವನ್ನು ನನ್ನ ಮದಿಸಿದ ಆನೆಗಳ ಹಿಂಡುಗಳಿಂದ ಕಪ್ಪಾಗುವಂತೆಯೂ ಸೈನ್ಯಗಳ ಪ್ರವಾಹದಿಂದ ತುಂಬುವಂತೆಯೂ ಮಾಡುತ್ತೇನೆ. ದಾಟುವ ನನ್ನ ಸೈನ್ಯಗಳಿಂದ ರಾವಣನನ್ನು ಹೇಗೋ ಹಾಗೆ ಸಮುದ್ರವನ್ನೂ ವ್ಯಾಕುಲಗೊಳ್ಳುವಂತೆ ಮಾಡುತ್ತೇನೆ. **मत्तगजान्धकारां** — ಆನೆಗಳ ಕಪ್ಪು ಬಣ್ಣದಿಂದ ಸಮುದ್ರತೀರವೆಲ್ಲವೂ ಕಪ್ಪಾಗುವಂತೆ. **ओघ** ಪ್ರವಾಹ.

ಈ ಅಂಕದಲ್ಲಿ ಮೂರನೆಯ ಅಂಕದಲ್ಲಿ ಪ್ರಾರಂಭವಾದ ಭರತನ ಕೋಪವನ್ನು ತುದಿಗೇರಿಸಿ ಯಥಾರ್ಥ ಜ್ಞಾನವಾದಮೇಲೆ ಅದು ಅವನನ್ನು ಪ್ರಶಾಂತ ವಿನೀತನನ್ನಾಗಿ ಮಾಡಿತೆಂದು ಹೇಳಲಾಗಿದೆ. ಹಾಗೆಯೇ ದೋಷಾರೋಪಗಳಿಗೆ ಸಿಕ್ಕಿ ತೊಳಲುತ್ತಿದ್ದ ಕೈಕೇಯಿಯ ಪ್ರಶಸ್ತ ಭಾವನೆಯನ್ನು ಪ್ರಕಾಶಗೊಳಿಸಲಾಗಿದೆ. ಕವಿ-ಕಾವ್ಯ ದೃಷ್ಟಿಯಿಂದ ಮುಖ್ಯವಾಗಿ ಇದು ಕೈಕೇಯೀ–ಉದ್ಧರಣಾಂಕ. ತನ್ನ ದೃಷ್ಟಿಯಿಂದ ಪ್ರಧಾನವಾದ ಪಾತ್ರಗಳ ಔದಾರ್ಯ ಔನ್ನತ್ಯಗಳನ್ನು ಮೆರೆಸುವಲ್ಲಿ ಉಳಿದ ಕಥಾಭಾಗಗಳನ್ನು ಸಂಕ್ಷೇಪಗೊಳಿಸಿರುವ ಕವಿಯ ಕೌಶಲ ಶ್ಲಾಘ್ಯವಾಗಿದೆ.

ಎಲ್ಲಕ್ಕೂ ಮಿಗಿಲಾಗಿ ಕೈಕೇಯಿಯನ್ನು ದೋಷವಿಮುಕ್ತಳನ್ನಾಗಿಸಲು 'ಮುನಿಕುಮಾರ' ಪ್ರಸಂಗವನ್ನು ಉಪಯೋಗಿಸಿಕೊಂಡಿರುವ ಸಂವಿಧಾನ ಅದ್ಭುತವಾಗಿದೆ.

ಪುಟ 55

## ಅಂಕ ೭

**ಸ್ಥಳ** – ಜನಸ್ಥಾನದ ತಪೋವನ.

**ಸಮಯ** — ಪ್ರಾತಃಕಾಲ : ರಾಮನು ರಾವಣನನ್ನು ಸಂಹರಿಸಿ ಸೀತಾ ಸಮೇತನಾಗಿ ಹಿಂದಿರುಗುವ ದಿನ.

**विज्ञापयति** — आज्ञापयति ಎಂದು ಇದ್ದಿದ್ದರೆ ಹೆಚ್ಚು ಸಮಂಜಸವಾಗಿತ್ತು. विशेषेण बोधयति ಅಂದರೆ आज्ञापयति ಎಂದು ಅರ್ಥವೆಂದು ಗಣಪತಿಶಾಸ್ತ್ರಿಗಳ ವ್ಯಾಖ್ಯೆ.

**एष खलु····रामः** — ತನ್ನ ಪತ್ನಿಯನ್ನು ಅಪಹರಿಸಿಕೊಂಡು ಹೋಗಿದ್ದ ಮತ್ತು ಮೂರು ಲೋಕಗಳಿಗೂ ಭಯಂಕರನಾಗಿದ್ದ ರಾವಣನನ್ನು ಸಂಹರಿಸಿ, ರಾಕ್ಷಸ ಸಮೂಹಕ್ಕೆ ವಿರುದ್ಧವಾದ (ಒಳ್ಳೆಯ) ಚಾರಿತ್ರ್ಯದಿಂದ ಕೂಡಿದ ಸದ್ಗುಣಪರಿಪೂರ್ಣನಾದ ವಿಭೀಷಣನನ್ನು (ಲಂಕೆಯಲ್ಲಿ ರಾಜನನ್ನಾಗಿ) ಅಭಿಷೇಕ ಮಾಡಿ, ದೇವರ್ಷಿ, ಸಿದ್ಧರುಗಳಿಂದಲೂ ಪ್ರಮಾಣೀಕರಿಸಲ್ಪಟ್ಟ ವಿಮಲಚಾರಿತ್ರ್ಯವುಳ್ಳ, ಪೂಜ್ಯಳಾದ ಸೀತಾದೇವಿಯನ್ನು ಜೊತೆಯಲ್ಲಿ ಕರೆದುಕೊಂಡು ಕರಡಿ ಹಾಗೂ ಕಪಿ ಸೈನ್ಯಾಧಿಪತಿಗಳೊಂದಿಗೆ ಶರತ್ಕಾಲದ ನಿರ್ಮಲಾಕಾಶದಲ್ಲಿ ಪ್ರಕಾಶಗೊಳಿಸುವ ಚಂದ್ರನಂತೆ ಮನೋಹರನಾಗಿ ಶ್ರೀರಾಮಚಂದ್ರನು ಪುಷ್ಪಕ ವಿಮಾನದಲ್ಲಿ ಇದೊ ಈಗ ಆಗಮಿಸುತ್ತಿದ್ದಾನೆ.

**शरद्विमलचन्द्रः····रामः** — ಶರದೃತುವಿನಲ್ಲಿ ಮೋಡಗಳೆಲ್ಲವೂ ಹೋಗಿ ಆಕಾಶವು ನಿರ್ಮಲವಾಗಿದ್ದು ಚಂದ್ರನು ರಮಣೀಯನಾಗಿರುತ್ತಾನೆ. ಹಾಗೆಯೇ ಈಗ ಶ್ರೀರಾಮನ ಸಂಕಷ್ಟಗಳೆಲ್ಲವೂ ಹೋಗಿ ಅವನ ಮನಸ್ಸು ಪ್ರಸನ್ನವಾಗಿದೆ. ಮುಖವೂ ಮನೋಹರವಾಗಿದೆ.

शरदः विमलं यद्गगनं तत्र चन्द्रः तद्वत् अभिरामः। ತಾಪಸನ ಈ ವಾಕ್ಯದಲ್ಲಿರುವ ಅನುಪ್ರಾಸಾದಿ ಶಬ್ದಾಲಂಕಾರಗಳು ದುಗುಡ ಕಳೆದು ಪ್ರಸನ್ನತೆ ಮೂಡಿರುವುದನ್ನು ಮನೋಜ್ಞವಾಗಿ ಧ್ವನಿಸುತ್ತವೆ.

**तेषां भक्षणनिमित्तं कुलपतिः प्रमाणं** — (ವಿಭೀಷಣನ ಪರಿವಾರದ) ರಾಕ್ಷಸರ ಆಹಾರದ ಬಗೆಗೆ ಕುಲಪತಿಗಳೇ ನಿರ್ಣಾಯಕರು.

**प्रमाणं** — ನಿತ್ಯಲಿಂಗವಚನ ಪದ (Neutral Singular). देव: प्रमाणं, वेदा: प्रमाणं, देवी प्रमाणं ಇತ್ಯಾದಿ. **ते खलु खादन्ति** — ಅವರು (ಮನುಷ್ಯರನ್ನು) ತಿಂದುಬಿಡುತ್ತಾರಲ್ಲವೇ ! ಇದರಿಂದ ನಂದಿಲಕನಿಗೆ ಅವರ ಹತ್ತಿರ ಸುಳಿಯುವುದಕ್ಕೆ ಅಂಜಿಕೆಯಾಗಿತ್ತು.

**विभीषणविधेयाः खलु राक्षसाः**—ಇವರು ಈಗ ವಿಭೀಷಣ ವಿಧೇಯರಷ್ಟೆ. ಅವನು ಒಳ್ಳೆಯವನು. ಆದುದರಿಂದ ಇವರೂ ಒಳ್ಳೆಯವರೇ.

**नमो राक्षससज्जनाय**—नम : ಎಂದು ಬಂದಿರುವುದರಿಂದ, सज्जनाय ಎಂಬುದು ಚತುರ್ಥೀ ವಿಭಕ್ತಿಯಲ್ಲಿದೆ. ("नम : स्वस्तिस्वाहास्वधाअलंवषड्योगाच्च । ಪಾಣಿನಿ).

**ಶ್ಲೋಕ 1** (ಮಾಲಿನೀ)—हे नरवर जय। (यदि) तव द्वितीय: अरि: स्यात् तर्हि (स: अपि) जेय:। एकातपत्रा भूमि: तव विधेया भवतु इति अनेकै: प्रसन्नै: मुनिभि: स्तूयमान: मानवेन्द्र: विमानात् क्षितितलं अवतीर्ण:।

ಎಲೈ ನರಶ್ರೇಷ್ಠನೇ, ನಿನಗೆ ಜಯವಾಗಲಿ. ನಿನಗೆ ಇನ್ನು ಯಾವ ಶತ್ರುವೊದಗಿದರೂ ಅವನೂ ನಿನ್ನಿಂದ ಜಯಿಸಲ್ಪಡಲಿ; ಏಕಚಕ್ರಾಧಿಪತ್ಯಕ್ಕೆ ಬಂದ ಭೂಮಿಯು ನಿನ್ನ ಅಧೀನವಾಗಲಿ. ಪ್ರಸನ್ನರಾದ ಅನೇಕ ಮಹರ್ಷಿಗಳಿಂದ ಈ ರೀತಿ ಸ್ತೋತ್ರ ಮಾಡಲ್ಪಡುತ್ತಿರಲು ಮನುಜಶ್ರೇಷ್ಠನಾದ (ಶ್ರೀರಾಮನು) ಪುಷ್ಪಕ ವಿಮಾನದಿಂದ ಭೂಮಿಗೆ ಇಳಿದನು.

**आतपत्रा — आतपात् त्रायत इति आतपत्रं,**—एकं आतपत्रं यस्या उपरि सा एकातपत्रा (ಒಂದೇ ಶ್ವೇತಚ್ಛತ್ರವುಳ್ಳ) भूमि: ಎಂಬುದಕ್ಕೆ ವಿಶೇಷಣ. 'ಸಕಲ ಸಾಮ್ರಾಜ್ಯಕ್ಕೂ ಏಕಾಧಿಪತಿಯಾಗು,' ಎಂಬ ಅರ್ಥ.

**मिश्रविष्कम्भकः**— ಇದರಲ್ಲಿ ತಾಪಸನು (ಮಧ್ಯಪಾತ್ರ) ಸಂಸ್ಕೃತದಲ್ಲಿಯೂ, ನಂದಿಲಕನು (ನೀಚಪಾತ್ರ) ಪ್ರಾಕೃತದಲ್ಲಿಯೂ ಸಂಭಾಷಿಸುವುದರಿಂದ ಇದು ಮಿಶ್ರ ವಿಷ್ಕಂಭಕ. ಈ ಮಿಶ್ರವಿಷ್ಕಂಭಕದಲ್ಲಿ ಕವಿಯು ಸಮಗ್ರ ಯುದ್ಧಕಾಂಡದ ಕಥೆಯನ್ನು ಸಂಕ್ಷೇಪಗೊಳಿಸಿ ವಿಜಯಿಯಾದ ರಾಮನು ಪತ್ನಿ, ಸಹೋದರ ಮತ್ತು ಸಮಸ್ತ ಮಿತ್ರ ಪರಿವಾರದೊಂದಿಗೆ ಜನಸ್ಥಾನಕ್ಕೆ ವಿಮಾನದಲ್ಲಿ ಹಿಂದಿರುಗುವನೆಂದೂ, ಕುಲಪತಿಯ ಮುಂದಾಳುತ್ವದಲ್ಲಿ ತಪೋವನದ ಋಷಿಗಳೆಲ್ಲರೂ ಅವನಿಗೆ ಭವ್ಯ ಸ್ವಾಗತ ಕೊಟ್ಟರೆಂದೂ ಸೂಚಿಸಿದ್ದಾನೆ. ಇಲ್ಲಿಂದ ಮುಂದಿನ ಮುಖ್ಯ ದೃಶ್ಯ ರಾಮನ ಮಾತುಗಳಿಂದಲೇ ಪ್ರಾರಂಭವಾಗುತ್ತದೆ.

**देव....सीता** — ಈ ಪದವೃಂದದಿಂದಲೂ ಮುಂದೆ ರಾಮನೇ ಹೇಳುವ विशुद्धां ಎಂಬ ಪದದಿಂದಲೂ—ಸೀತೆಯು ಅಗ್ನಿಪರೀಕ್ಷೆ ಮೂಲಕ ಪರಿಶುದ್ಧಳಾದ ವಿಚಾರವನ್ನು ಕವಿಯು ಕೌಶಲದಿಂದ ಸೂಚಿಸಿರುತ್ತಾನೆ.

ಪುಟ 56

**ಶ್ಲೋಕ 2** (ಮಾಲಿನೀ) — समुचितबलवीर्यं रावणं नाशयित्वा, जगति गुणसमग्रां विशुद्धां सीतां प्राप्य, गुरूणां वचनं अपि अन्तशः पूरयित्वा भूयः मुनिजनवनवासं प्राप्तवान् अस्मि ।

ಅಪಾರ ಸತ್ವ ವೀರ್ಯಯುತನಾಗಿದ್ದ ರಾವಣನನ್ನು ಸಂಹರಿಸಿ, ಜಗತ್ತಿನಲ್ಲಿ ಗುಣನಿಧಿಯೆನಿಸಿದ ಸೀತೆಯನ್ನು ಅಗ್ನಿಪರಿಶುದ್ಧಳನ್ನಾಗಿ ಪಡೆದು, ಗುರುಜನರ (ತಂದೆಯ) ಮಾತನ್ನು ಸಂಪೂರ್ಣವಾಗಿ ನೆರವೇರಿಸಿ ಋಷಿಜನರ ವಾಸಸ್ಥಾನವಾದ ತಪೋವನಕ್ಕೆ ಮರಳಿ ಬಂದಿದ್ದೇನೆ.

**विशुद्धां** — अग्निप्रवेशपरिशोधितां (ಗಣಪತಿಶಾಸ್ತ್ರೀ).

**गुरूणां वचनं** — दशरथस्य आज्ञां (ಗಣಪತಿಶಾಸ್ತ್ರೀ). ಆದರೆ ತಂದೆಯಾದ ದಶರಥನ, ಕೈಕೇಯಿಯ ಅಷ್ಟೇ ಅಲ್ಲದೆ ಋಷಿಗಳ ಮಾತನ್ನು ಎಂದು ಅರ್ಥ ಮಾಡಿದರೆ ಹೆಚ್ಚು ಸಮಂಜಸ. ಋಷಿಗಳಿಗೂ ರಾಕ್ಷಸರ ಬಾಧೆಯನ್ನು ತಪ್ಪಿಸುತ್ತೇನೆಂದು ರಾಮನು ಮಾತು ಕೊಟ್ಟಿದ್ದನಷ್ಟೆ.

**अन्तशः** — साकल्यं (ಸಂಪೂರ್ಣವಾಗಿ) (ಕಾಳೆ). **अन्ते** — ಕೊನೆಗೆ (ಗಣಪತಿ ಶಾಸ್ತ್ರೀ).

**तापसीनां ···· प्रविष्टा** — ತಪಸ್ವಿನಿಯರಿಗೆ ವಂದಿಸಲು ಆಶ್ರಮವನ್ನು ಪ್ರವೇಶಿಸಿದ ರಾಮನನ್ನು ಮುನಿಗಳು ಅಭಿನಂದಿಸುತ್ತಿರಲು ಸೀತೆಯು ಮುನಿ ಪತ್ನಿಯರನ್ನು ಅಭಿವಂದಿಸಲು ತೆರಳಿದಳು. ಎಂತಹ ಒಳ್ಳೆಯ ನಡತೆ !

**ಶ್ಲೋಕ 3** (ಉಪಜಾತಿ) — यथावय: तपस्विदारैः 'सखी' इति, 'सीता' इति, 'जानकी' इति, 'स्नुषा' इति स्निग्धतरं सम्भाष्यमाणा जनकेन्द्रपुत्री मन्दं समुपैति ।

ತಮ್ಮ ತಮ್ಮ ವಯಸ್ಸಿಗೆ ಅನುರೂಪವಾಗಿ ಮುನಿಪತ್ನಿಯರಿಂದ ಸಖಿ, ಸೀತೆ, ಜಾನಕಿ, ಮಗು (ಸೊಸೆ) ಎಂಬುದಾಗಿ (ಆದರೆ ಎಲ್ಲರಿಂದಲೂ ಒಂದೇ ವಿಧವಾಗಿ) ಪ್ರೀತಿಯಿಂದ ಸಂಭಾಷಿಸಲ್ಪಡುತ್ತಲಿರುವಳಾಗಿ ಜನಕ ಚಕ್ರವರ್ತಿಯ ಪುತ್ರಿಯು ಮೆಲ್ಲಗೆ ಇಲ್ಲಿಗೆ ಬರುತ್ತಲಿದ್ದಾಳೆ.

**यथावयः** — वयसः अनतिक्रमेण (ಅವ್ಯಯೀಭಾವ ಸಮಾಸ) — ವಯಸ್ಸು ಬೇರೆ ಬೇರೆ — ಪ್ರೀತಿ ಮಾತ್ರ ಒಂದೇ ಎಂಬ ಭಾವ.

**जनकेन्द्रपुत्री** — ಜನಕ ಮಹಾರಾಜನ ಮಗಳೇ ಆದರೂ ಋಷಿಪತ್ನಿಯರನ್ನು ಅವಳು ಕಂಡು ವಂದಿಸುವ ಸೌಶೀಲ್ಯ ಮೆರೆಸಿದಳು. ಋಷಿಪತ್ನಿಯರು ಅಪಾರ ಸ್ನೇಹ, ವಾತ್ಸಲ್ಯ, ಮಮತೆಗಳಿಂದ ಅವಳನ್ನು ಕಂಡರು. ಇದು ಉತ್ಕೃಷ್ಟ ಸಂಸ್ಕೃತಿ.

**कुटुम्बिनः** — पतिः (कुटुम्बं अस्य अस्ति इति) न शक्यं त्वां एकाकिनीं प्रेक्षितुम् — ನಿನ್ನನ್ನು ಏಕಾಕಿನಿಯನ್ನಾಗಿ ನೋಡುವುದು ಸಾಧ್ಯವಿಲ್ಲ. ಅಂದರೆ ಪತಿಯ ಜೊತೆಯಲ್ಲಿಯೇ ನೀನು ಸದಾ ಇರುವುದೇ ನಮಗೆ 'ಪ್ರೀತಿಕರ' ಎಂಬ ಭಾವ.

हम् — प्रतिभाति । ಹಾಗೇ ಆಗಲಿ: 'हम्' इत्यङ्गीकारे — ಈಗಲೂ ಪತಿಯ ಜೊತೆ ಇಲ್ಲದೆ ಇದ್ದದ್ದು ನಿಜವೇ ಎಂಬ ಸಂಶಯದ ಮಾತು ಇಲ್ಲಿದೆ.

**अप्यत्र जानन्ते पुत्रकृतका वृक्षाः ?** — ನೀನು ಮಕ್ಕಳಂತೆ ಭಾವಿಸಿ, ಸಾಕುತ್ತಿದ್ದ ಗಿಡಗಳನ್ನು ನೀನು ಗುರುತುಹಿಡಿಯಬಲ್ಲೆಯಾ ? पुत्रकृतका-पुत्रवत् परिपालितत्वात् पुत्रा इव स्थिताः ।

**अवलोकितपत्रका····संवृत्ताः** — ಆಗ ಇವುಗಳ ಎಲೆಯನ್ನು ಕತ್ತನ್ನು ಬಗ್ಗಿಸಿ ನೋಡಬೇಕಾಗಿತ್ತು ; ಈಗ ಕತ್ತನ್ನು ಎತ್ತಿ ನೋಡುವಂತಾಗಿದೆ. ಅಂದರೆ ಆಗ ಚಿಕ್ಕದಾಗಿದ್ದವು, ಈಗ ಎತ್ತರಕ್ಕೆ ಬೆಳೆದು ನಿಂತಿವೆ. अव — ಕೆಳಗೆ, उत् — ಮೇಲೆ (ಉಪಸರ್ಗಗಳು).

**निम्नस्थलोत्पादको हि कालः** — ನಿಜ, ಹಳ್ಳ-ದಿಣ್ಣೆಗಳನ್ನು ತರುವುದೇ ಅಲ್ಲವೇ 'ಕಾಲ'ದ ಗುಣ. ಹಳ್ಳವಿದ್ದಲ್ಲಿ ದಿಣ್ಣೆಯಾಗುತ್ತದೆ. ದಿಣ್ಣೆಯಿದ್ದಲ್ಲಿ ಹಳ್ಳವಾಗುತ್ತದೆ.

(कालक्रमेण जगतः परिवर्तमाना चक्रारपङ्क्तिरिव गच्छति भाग्यपङ्क्तिः— ಸ್ವಪ್ನವಾಸವದತ್ತಾ, ಅಂಕ 1, ಶ್ಲೋಕ 4 ಮತ್ತು, पुरा यत्र स्रोतः ಇತ್ಯಾದಿ ಭವಭೂತಿಯ ಉತ್ತರ ರಾಮಚರಿತೆ, ಅಂಕ 3, ಶ್ಲೋಕ 27.

**अभ्युपलभ्यते····मृगयूथमासीत्** — ಈ ಹಳೆಲಿ ಬಾಳೆ ಗಿಡದ ಕೆಳಗಿದ್ದ ಜಿಂಕೆಯ ಹಿಂಡು ಬಿಳಿಯ ಬಟ್ಟೆ ಧರಿಸಿ ಬಂದಿದ್ದ ಭರತನನ್ನು ಕಂಡು ಹೆದರಿ ಓಡಿದ್ದು ಇಲ್ಲಿಯೇ—ಇದು ನಿನಗೆ ನೆನಪಿದೆಯೇ ?

**शुक्लवाससं** — ಬಿಳಿಯ ಬಟ್ಟೆ ಧರಿಸಿದ, परित्रस्त ಬೆದರಿದ.

**मृगयूथम्** — ಜಿಂಕೆಹಿಂಡು — ಇದನ್ನು ಕವಿ ಭರತ ಬಂದಾಗಲೇ ವರ್ಣಿಸಿದ್ದಿದ್ದರೆ ಇನ್ನೂ ಹೆಚ್ಚು ಮನೋಜ್ಞವಾಗಿರುತ್ತಿತ್ತು. ಭರತ ಇಲ್ಲಿಗೆ ಬಂದಿದ್ದನೇ ? — ಮುನಿಗಳ ನಾರುಮಡಿ ಕಾಷಾಯ ವರ್ಣದ್ದು. ಅಂತಹ ಬಿಳಿಯ ವಸ್ತ್ರದ ಪರಿಚಯ ಜಿಂಕೆಗಳಿಗೆ ಇರಲಿಲ್ಲ. ಈ ಸನ್ನಿವೇಶದ ಛಾಯೆ ಕಾಳಿದಾಸನ ಶಾಕುಂತಲದಲ್ಲಿ—ಶಕುಂತಲೆಯು ದುಷ್ಯಂತನಿಗೆ ತನ್ನ ಹಿಂದಿನ ಪರಿಚಯ ಮಾಡಿಸುತ್ತಾ ಆಶ್ರಮದ ಜಿಂಕೆಯ ವಿಚಾರವನ್ನು ನೆನಪಿಗೆ ತರಲು ಯತ್ನಮಾಡಿದ ಸಂದರ್ಭದಲ್ಲಿ ಸ್ಪಷ್ಟವಾಗಿ ಮೂಡಿದೆ.

**महाकच्छः** — ಜಲಪ್ರದೇಶದ ತೀರ. निवपनक्रिया — ಶ್ರಾದ್ಧಕರ್ಮ

**हम् अर्यपुत्र . . . . भणितुम्** — ಆರ್ಯಪುತ್ರ, ಅಬ್ಬ, ಆ ಮಾತನ್ನೇ ಆಡಬೇಡ. ಸೀತೆಗೆ ಹಿಂದಿನ ವಿಷಯಗಳನ್ನು ಈಗ ನೆನೆಯುವುದೂ ಭಯಗೊಳ್ಳುವಂತೆ ಮಾಡುತ್ತದೆ.

ಪುಟ 57

**अतिक्रान्तः खल्वेष कालः** — ಏಕೆ ಇಷ್ಟು ಭಯ ? ಈ ಹೆದರಿಕೆಯ ಕಾಲ ಕಳೆದುಹೋಗಿದೆಯಲ್ಲ.

ನಾಟಕದ ಈ ದೃಶ್ಯದ ಛಾಯೆಯನ್ನು ರಘುವಂಶದ 13ನೇ ಸರ್ಗದಲ್ಲಿ ಅದರಲ್ಲೂ 22ನೇ ಶ್ಲೋಕದಿಂದ ಹಿಡಿದು ಮುಂದಿನ ಶ್ಲೋಕಗಳಲ್ಲಿ ಕಾಣಬಹುದು.

**ಶ್ಲೋಕ 4** (ವಸಂತತಿಲಕಾ) — अये लोध्रसमानगोरः रेणुः (कुतो नु) समुत्पतति ? पवनावधूतः (एषः रेणुः) दिशः सम्प्रावृणोति च ; पटहस्वनधीरनादैः सम्मूर्छितः शङ्खध्वनिः इदं वनं नगरीकरोति ।

ಏನಿದು ! ಲೋಧ್ರಕುಸುಮಕ್ಕೆ ಸದೃಶವಾದ ಈ ಧೂಳು ಎಲ್ಲಿಂದ ಮೇಲೇಳುತ್ತದೆ ? ಗಾಳಿಯಿಂದ ತೂರಲ್ಪಟ್ಟು (ಈ ಧೂಳು) ದಿಕ್ಕುಗಳನ್ನು ಸಂಪೂರ್ಣವಾಗಿ ಮುಚ್ಚುತ್ತಿದೆ. ಗಂಭೀರ ನಾದದೊಂದಿಗೆ ಕೂಡಿ ವೃದ್ಧಿಗೊಂಡ ಶಂಖಧ್ವನಿಯು ಈ ಕಾಡನ್ನು ನಗರವನ್ನಾಗಿಸುತ್ತಿದೆ.

ವನಪ್ರದೇಶದಲ್ಲೂ ಧೂಳು ಗದ್ದಲವೆದ್ದದ್ದು ರಾಮನಿಗೆ ಆಶ್ಚರ್ಯವನ್ನು ತಂದಿತು. ಭರತನು ಸೈನ್ಯದೊಂದಿಗೆ ಬರುತ್ತಿದ್ದಾನೆ ಎಂಬುದಕ್ಕೆ ಸೂಚನೆ.

**सम्मूर्छितः** — ವೃದ್ಧಿಗೊಂಡ ; धीरनादैः ವೀರರ ಶಬ್ದ (ಗಣಪತಿಶಾಸ್ತ್ರೀ).

**ಶ್ಲೋಕ 5** (ಅನುಷ್ಟುಪ್) — भ्रातृवत्सलः अयं भरतः त्वद्दर्शनसमुत्सुकः मातृभिः सह महता सैन्येन च सह सम्प्राप्तः ।

ನಿನ್ನ ದರ್ಶನಕುತೂಹಲಿಯಾಗಿ ಭ್ರಾತೃವತ್ಸಲನಾದ ಈ ಭರತನು ಮಾತೆಯರೊಡನೆ ದೊಡ್ಡ ಸೈನ್ಯದೊಂದಿಗೆ ಆಗಮಿಸಿದ್ದಾನೆ.

**श्वश्रूजन** — ಅತ್ತೆಯರು. विशालीक्रियतां ते चक्षुः ನಿನ್ನ ಕಣ್ಣನ್ನು ಅರಳಿಸು. (ಕಣ್ತುಂಬ ನೋಡಲು ಸಿದ್ಧಳಾಗು). ಇಂತಹ ಪದಪುಂಜ ಭಾಸನ ಕೃತಿಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. (ಅಂಕ 4ರಲ್ಲಿ ನೋಡಿ).

**एष्टव्य काले भरतः आगतः** — ಬಯಸತಕ್ಕ ಕಾಲಕ್ಕೇ ಭರತ ಬಂದಿದ್ದಾನೆ. √इष् + तव्य.

**ಶ್ಲೋಕ 6** (ವಸಂತತಿಲಕಾ) — **शरदि मेघैः विमुक्तं अमलं सोमं इव अद्य प्रवृद्धविषयैः तैः तैः विषमैः विमुक्तं आर्यासहायं गुरुं विदृक्षुः तुष्टहृदयः अहं स्वजनानुबद्धः प्राप्तः अस्मि।**

ಶರತ್ಕಾಲದಲ್ಲಿ ಮೇಘದಿಂದ ವಿಮುಕ್ತನಾಗುವ ನಿರ್ಮಲಚಂದ್ರನಂತೆ, ಕಷ್ಟ ಪರಂಪರೆಗಳನ್ನು ಕಳೆದುಕೊಂಡು ಅತ್ತಿಗೆಯೊಡನೆ ಇರುವ ಅಣ್ಣನನ್ನು ಕಾಣುವ ಇಚ್ಛೆಯಿಂದ ಸಂತುಷ್ಟಹೃದಯನಾಗಿ ಬಂಧುಜನರೊಂದಿಗೆ ಬಂದಿದ್ದೇನೆ.

**तैस्तैः प्रवृद्धविषयैर्विषमैः** — ನಾನಾವಿಧವಾದ ಮಹಾಸಂಕಟ ಪರಂಪರೆಗಳಿಂದ. ರಾಜ್ಯತ್ಯಾಗ, ವನವಾಸ, ಮುಖ್ಯವಾಗಿ ಪತ್ನಿಯ ಅಪಹರಣ ಇತ್ಯಾದಿ ಮಹಾ ಸಂಕಟಗಳು.

**प्रवृद्धः विषयः** (प्रदेशः) **प्रवृद्धं व्यापकत्वं येषां तैः** (ಪರಂಜಪೆ)

**विदृक्षुः** — ನೋಡಲು ಇಚ್ಛೆಯುಳ್ಳವನಾಗಿ. **द्रष्टुं इच्छुः** (ಇಚ್ಛಾರ್ಥಕ ಅಥವಾ ಸನ್ನಂತರೂಪ).

**दिष्ट्या वर्धामहे····प्रेक्ष्य** — ಪ್ರತಿಜ್ಞೆಯನ್ನು ಪೂರೈಸಿ, ಪತ್ನಿಯೊಡನೆ ಕುಶಲನಾಗಿರುವ ನಿನ್ನನ್ನು ಕಂಡು ಹರ್ಷಪಡುವುದು ನಮ್ಮ ಭಾಗ್ಯ.

ಪುಟ 58

**ಶ್ಲೋಕ 7** (ವಸಂತತಿಲಕಾ) — (ಅಂಕ. 4, ಶ್ಲೋ. 16ನ್ನು ನೋಡಿ).

ಹೀಗೆ ಅವೇ ಶ್ಲೋಕಗಳು, ಶ್ಲೋಕಭಾಗಗಳು, ಪದಗಳು, ಪದಪುಂಜಗಳು ಮತ್ತೆ ಮತ್ತೆ ಒಂದೇ ನಾಟಕದಲ್ಲಿ ಅಥವಾ ಅವನ ಬೇರೆ ನಾಟಕಗಳಲ್ಲಿ ಬರುವುದು ಭಾಸನಾಟಕ-ಚಕ್ರದ ವೈಶಿಷ್ಟ್ಯ.

**आर्यपुत्रेण चिरसञ्चारी भव** — ನನ್ನ ಪತಿಯೊಂದಿಗೆ ಸದಾ ಸಹಕರಿಸಿ ಬಾಳುವವನಾಗು. ಸೀತೆಯು ಭರತನಿಗೆ ಮಾಡುವ ಈ ಆಶೀರ್ವಾದ ಉಚಿತವಾಗಿದೆ. ರಾಮನು ಅಯೋಧ್ಯೆಯಲ್ಲಿ ಇನ್ನೂ ರಾಜ್ಯಭಾರಮಾಡಬೇಕಷ್ಟೆ !

**आर्य प्रतिगृह्यतां राज्यभारः** — ಪೂಜ್ಯನೇ ರಾಜ್ಯಭಾರವು ನಿನ್ನಿಂದ ಸ್ವೀಕರಿಸಲ್ಪಡಲಿ. ಭರತನ ಅಪೇಕ್ಷೆಯಿದು. ಆದರೂ ಮಾತೆ ಕೈಕೇಯಿಯ ಆಶಯವನ್ನು ತಿಳಿಯದೆ ರಾಮ ಒಪ್ಪುವುದಿಲ್ಲ. ಆದರಿಂದಲೇ '**कथमिव**' ಎಂದು ಕೇಳುತ್ತಾನೆ. ಆಗ ಕೈಕೇಯಿಯೇ ಮುಂದೆ ಬಂದು '**चिराभिलषितः खल्वेष मनोरथः**' ಎಂದು ಆರನೆಯ ಅಂಕದಲ್ಲಿ ಅವಳು ಪ್ರಕಾಶಗೊಳಿಸಿದ ಉದಾತ್ತ ಗುರಿಯನ್ನು ಸಮರ್ಥಿಸುತ್ತಾಳೆ.

[illegible] व्यमनैः क्लिष्टं (परन्तु)
[illegible] स्वरते।

ನಾನಾ ಸಂಕಟಗಳಿಂದ ಪೀಡಿತನಾದರೂ ಗುಣ ತೇಜಸ್ಸುಗಳಲ್ಲಿ ಸ್ವಲ್ಪವೂ ಕುಂದದ ರಾವಣಾರಿಯಾದ ಅಣ್ಣನನ್ನು ಕಾಣಲು ನನ್ನ ಮನಸ್ಸು ಹಾತೊರೆಯುತ್ತಿದೆ.

ವಿವಿಧ ವ್ಯಸನಕ್ಲಿಷ್ಟನಾಗಿದ್ದರೂ ಗುಣದಿಂದಲಾಗಲೀ ತೇಜಸ್ಸಿನಿಂದಲಾಗಲೀ ರಾಮನು ಕುಂದಿಲ್ಲ. ಇದು ಮಹಾತ್ಮರ ಲಕ್ಷಣ. 'ರಾವಣಾಂತಕರಂ' ಎಂದು ಹೇಳಿರುವುದರಿಂದ ಅವನ ಪರಾಕ್ರಮ ಅನ್ಯಾದೃಶವಾಗಿದೆ ಎಂಬುದನ್ನು ತಿಳಿಸಿದಂತಾಯಿತು.

ಶತ್ರುಘ್ನನ ಪಾತ್ರ ವಾಲ್ಮೀಕಿರಾಮಾಯಣದಲ್ಲಾಗಲೀ, ಈ ನಾಟಕದಲ್ಲಾಗಲೀ ಮಹತ್ವದ್ದಲ್ಲ. ಅವನಿಗೆ ಸ್ವಲ್ಪವಾದರೂ ಅವಕಾಶ ಕೊಡಬೇಕೆಂದೇ ಕವಿ ಇಲ್ಲಿ ಮಾತನ್ನಾಡಿಸಿರುವಂತಿದೆ.

ಪುಟ 59

**ಶ್ಲೋಕ 9** (ವಸಂತತಿಲಕಾ) — **तव प्रसादात् मुनिभिः स्वयं आहृतेन नानानदीनदगतेन तीर्थोदकेन सलिलासिक्तं अरविन्दं इव प्रथमाभिषिक्तं ते मुखं मुनिगणाः द्रष्टुं इच्छन्ति ॥**

ನಿನ್ನ ಅನುಗ್ರಹದಿಂದ ಋಷಿಗಳಿಂದಲೇ ತರಲ್ಪಟ್ಟ ನಾನಾ ನದೀ ನದಗಳ ಪವಿತ್ರ ಜಲದಿಂದ ಇದೇ ತಾನೆ ಇಲ್ಲೇ ಅಭಿಷಿಕ್ತವಾದ ನಿನ್ನ ಮುಖವು ನೀರಿನಿಂದ ಸಿಂಪಡಿಸಲ್ಪಟ್ಟ ತಾವರೆಯಂತೆ ಇರುವುದನ್ನು ಈ ಋಷಿ ಸಮೂಹಗಳು ನೋಡಬಯಸುತ್ತಿವೆ.

ಮಹರ್ಷಿಗಳಾದ ವಸಿಷ್ಠ ವಾಮದೇವರ ನೇತೃತ್ವದಲ್ಲಿ ಋಷಿಗಳ ಗುಂಪುಗಳೇ ಶ್ರೀರಾಮನ ಅಭಿಷೇಕವನ್ನು ನೋಡಲು ಕಾದಿವೆ. ನದ ಸಣ್ಣನದಿ.

**गच्छ जात, अभिलष अभिषेकम्** — ನಡೆ ಮಗು ಅಭಿಷೇಕವನ್ನು ಒಪ್ಪಿಕೋ. ಈ ಮಾತನ್ನು ಕೈಕೇಯಿಯ ಬಾಯಿಂದ ಆಡಿಸಿರುವುದು ಅರ್ಥಗರ್ಭಿತವಾಗಿದೆ.

**भो, भो जनस्थान····भवन्तः** — ರಾವಣನು ರಾಮನಿಗೆ ಪರಾಕ್ರಮವಿದ್ದರೆ ನನ್ನೊಡನೆ ಯುದ್ಧಮಾಡಿ ಸೀತೆಯನ್ನು ಬಿಡಿಸಿಕೊಂಡು ಹೋಗಲಿ ಎಂದು ಸವಾಲು ಹಾಕಿದುದು ಜನಸ್ಥಾನ ನಿವಾಸಿಗಳ ಸಮಕ್ಷಮದಲ್ಲಿ ಆದುದರಿಂದಲೇ ಅವರನ್ನು ಸಂಬೋಧಿಸಿ ರಾಮ ರಾವಣನನ್ನು ಸಂಹರಿಸಿ ಸವಾಲನ್ನು ಎದುರಿಸಿದ್ದಾನೆ ಎಂದು ಸ್ಪಷ್ಟಪಡಿಸಿರುವುದು.

**ಶ್ಲೋಕ 10** (ವಸಂತತಿಲಕಂ) — सूर्यः शौर्यमयैः मयूखैः अप्रतिमं अन्धकारं इव, रामः रिपुप्रभवं अप्रतिमं तमोघं शौर्यमयैः मयूखैः हत्वा सकलाशुभवर्जनीय। सीतां अवाप्य सर्वजनाभिरामः सन् महीं जयति ॥

ಸೂರ್ಯನು ಸಾಂದ್ರವಾದ ಕಗ್ಗತ್ತಲನ್ನು ತನ್ನ ಪ್ರಖರ ಕಿರಣಗಳಿಂದ ನಾಶಗೊಳಿಸುವಂತೆ ಶ್ರೀರಾಮನು ಶತ್ರುವಿನಿಂದ ಉಂಟಾಗಿದ್ದ ಅತುಲವಾದ (ಸಂಕಟಗಳ) ಕಗ್ಗತ್ತಲಿನ

ರಾಶಿಯನ್ನು ತನ್ನ ಶೌರ್ಯವೆಂಬ ಕಿರಣಗಳಿಂದ ನಾಶಗೊಳಿಸಿ ಸಕಲ ಅಮಂಗಳಕ್ಕೂ ದೂರಳಾದ (ಮಂಗಳೈಕಮಯಿಯಾದ) ಸೀತೆಯನ್ನು ಪಡೆದು ಸರ್ವಜನಹೃದಯಾನಂದಜನಾಗಿ ಭೂಮಿಯನ್ನು ಬೆಳಗುತ್ತಿದ್ದಾನೆ. (ಉಪಮಾಲಂಕಾರ).

**ಮಯೂಖೈಃ** ಕಿರಣಗಳಿಂದ. **ತಮೌಘಂ — ತಮ + ಓಘಂ** ಸೀತಾಪಹರಣದಿಂದ ರಾಮ ಮತ್ತು ಇಕ್ಷ್ವಾಕು ಕುಲಕ್ಕೆ ರಾವಣ ಮಾಡಿದ ಅಪಮಾನವೇ 'ತಮೋರಾಶಿ'.

ಪುಟ 60

**ತತಃ ಪ್ರವಿಶತಿ . . . . ಸಪರಿವಾರಃ** — ಕೈಕೇಯಿಯ ಅನುಜ್ಞೆ ಪಡೆದು ಋಷಿಗಳ ಅಪೇಕ್ಷೆಯಂತೆ ಅಭಿಷೇಕ ಪಡೆಯಲು ಹೋದವನು ರಾಮ ಮಾತ್ರ. ತೆರೆಯ ಹಿಂದೆ ಅಭಿಷೇಕ ನಡೆಯುತ್ತದೆ. ಜಯಜಯಕಾರಗಳಿಂದ ಇದು ಸೂಚಿತವಾಗಿದೆ. ಕೈಕೇಯಿಯ ಆನಂದಕ್ಕೆ ಕೊನೆಯಿಲ್ಲ. ರಾಮನನ್ನು ಪ್ರಜೆಗಳು ಹೊಗಳಿ ಜಯಕಾರ ಮಾಡಿದರೆ ಅದು 'ತನ್ನ ಮಗನ' ಅಭ್ಯುದಯವೆಂದು ಭಾವಿಸುವಳು. ತಪೋವನದಲ್ಲಿಯೂ ಶ್ರೀರಾಮನ ಅಭಿಷೇಕ ನಡೆಯುವಂತೆ ಮಾಡಿರುವುದು ಹೊಸ ವಿಷಯ. ವಾಲ್ಮೀಕಿ ರಾಮಾಯಣದಲ್ಲಿಲ್ಲ. ಪರಿಚಿತರಾಗಿದ್ದ ಮುನಿಗಳ ಮನಸ್ಸಿಗೆ ಹರ್ಷ ದೊರೆಯಲೆಂಬ ಉದ್ದೇಶದಿಂದ ಋಷ್ಯಾಶ್ರಮದಲ್ಲಿ ಅವನ ಪಟ್ಟಾಭಿಷೇಕವು ನಡೆಯುವಂತೆ ಕವಿ ಕಲ್ಪಿಸಿದ್ದಾನೆ ಎಂದು ಗಣಪತಿಶಾಸ್ತ್ರಿಗಳು ವ್ಯಾಖ್ಯೆ ಮಾಡಿದ್ದಾರೆ.

ತ್ಯಾಗ ಭೋಗಗಳೆರಡಕ್ಕೂ ಆದರ್ಶವೆನಿಸುವ ರಾಮರಾಜ್ಯವನ್ನು ತಪಸ್ವಿವೃತ್ತಿಗೂ ಗೃಹಸ್ಥಧರ್ಮಕ್ಕೂ ಇರುವ ಸಾಮರಸ್ಯವನ್ನೂ ಅದರಿಂದಲೇ ಸುಖೋತ್ಕರ್ಷವೆಂಬುದನ್ನೂ ಭಾಸನು ಹೀಗೆ ಧ್ವನಿಪೂರ್ಣವಾಗಿ ಅಭಿವ್ಯಕ್ತಿಗೊಳಿಸಿದ್ದಾನೆಂದು ಕೆಲವು ವಿಮರ್ಶಕರ ಮತ.

**ಶ್ಲೋಕ 11** (ವಸಂತತಿಲಕಂ) — (भो : तात) त्वं स्वर्गे अपि तुष्टिं उपगच्छ, दैन्यं विमुञ्च, यत् कर्म त्वया मयि अभिलषितं तत् एतत् (निवृत्तम्); सत्कृतभारवाही भुवि राजा अस्मि किल, धर्मेण लोकपरिरक्षणं (मया) अभ्युपेतम् ।

(ತಂದೆಯೇ ನೀನು) ಸ್ವರ್ಗದಲ್ಲಿಯೇ ಸಂತೃಪ್ತಿಯನ್ನು ಪಡೆ ; ಸಂಕಟವನ್ನು ತೊರೆ ; ನೀನ ನನಗೆ ಯಾವ (ಮಂಗಳಾಭಿಷೇಕ) ಕರ್ಮವನ್ನು ಮಾಡಬಯಸಿದ್ದೆಯೋ ಅದೇ ಈಗ ನೆರವೇರಿರುವುದು. ಇಕ್ಷ್ವಾಕುವಂಶದ ಶ್ರೇಷ್ಠ ರಾಜರು ಹೊರುತ್ತಿದ್ದ ರಾಜ್ಯಭಾರವನ್ನು ಹೊತ್ತು ಈಗ ನಾನು ರಾಜನಾಗಿದ್ದೇನೆ. ಲೋಕಸಂರಕ್ಷಣೆಯ ಭಾರವನ್ನು ಧರ್ಮಬದ್ಧವಾಗಿ ಅಂಗೀಕರಿಸಿದ್ದೇನೆ.

**ಸ್ವರ್ಗೇऽಪಿ ತುಷ್ಟಿಂ ಉಪಗಚ್ಛ** — ಸ್ವರ್ಗವು ಸಂತೃಪ್ತಿಯ ನೆಲೆಮನೆ. ಅಲ್ಲಿ ಅಪೇಕ್ಷಿಸಬೇಕಾದ ಹೊಸತೃಪ್ತಿ ಎಂಬುದು ಯಾವುದೂ ಇರದು. ಅಂತಹ ಸ್ವರ್ಗದಲ್ಲಿಯೇ ನೀನು ಇದ್ದು ಈ ತೃಪ್ತಿಯನ್ನು ಪಡೆ. ಅಥವಾ — ನೀನು ಯಾವ

ತೃಪ್ತಿಯನ್ನು ಭೂಮಿಯಲ್ಲಿ ಪಡೆಯಲಿಟ್ಟಿದೆಯೋ. ಅದನ್ನು ಈಗ ಸ್ವರ್ಗದಲ್ಲಿ ಯಾದರೂ ಪಡೆ.

**सत्कृतभारवाही** — ಭೂಮಿಯಲ್ಲಿ ಸತ್ಕೃತವಾದ (ಪುರಸ್ಕೃತ ಗೌರವ ಪಡೆದ) ರಾಜ್ಯಭಾರವನ್ನು ಹೊತ್ತು. भुवि संत्कृतो भारः (राज्यतन्त्ररूपः). तं वहतीति ಅಥವಾ 'ಹಿಂದೆ ಸತ್ಕೃತರಾದವರು ಹೊತ್ತಿದ್ದ ಭಾರವನ್ನು ಹೊತ್ತು.'

सत् (कृत्य) कृतं येषां तेषां ಅಥವಾ ಶಿಷ್ಟರಕ್ಷಣೆಯ ಭಾರವನ್ನು ಹೊತ್ತ.— ಎಂ. ಆರ್. ಕಾಳೆ.

**धर्मेण····मभ्युपेतम्** — ಪಿತೃವಾಕ್ಯವನ್ನು ಪರಿಪಾಲಿಸಿ ಧರ್ಮದಿಂದ ರಾಜ್ಯ ಭಾರವನ್ನು ಈಗ ವಹಿಸಿಕೊಂಡಿರುವುದು ರಾಮನಿಗೆ ಸಮಾಧಾನ, ತೃಪ್ತಿ.

**ಶ್ಲೋಕ 12** (ಮಾಲಿನೀ) — तीर्थतोयाभिषिक्तं, विकसितकृतमौलिं धार्यमाणातपत्रं अधिगतनृपशब्दं, अधिगतलीलं नवशशिनं इव जनौघैः वन्द्यमानं आर्यं गुरुं पश्यतः मे न तृप्तिः।

ಪವಿತ್ರಜಲದಿಂದ ಅಭಿಷಿಕ್ತನಾದ, ಉಜ್ವಲಕಿರೀಟದಿಂದ ಶೋಭಿಸುವಂತೆ ಮಾಡಲ್ಪಟ್ಟ ಶಿರಸ್ಸುಳ್ಳ, ಮೇಲ್ಭಾಗದಲ್ಲಿ ಶ್ವೇತಛತ್ರ ಹಿಡಿಯಲ್ಪಟ್ಟಿರುವ, ರಾಜನೆಂದು ಅಂಕಿತಗೊಂಡಿರುವ, ಪ್ರಸನ್ನನಾಗಿರುವ, ಪ್ರತಿಪತ್ ಚಂದ್ರನಂತೆ ಜನಸಮೂಹದಿಂದ ವಂದಿಸಲ್ಪಡುತ್ತಲಿರುವ ಪೂಜ್ಯನಾದ ಅಣ್ಣನನ್ನು ಎಷ್ಟು ನೋಡಿದರೂ ನನಗೆ ತೃಪ್ತಿ ಯಾಗದು.

**अधिगतनृपशब्दं** — अधिगतः नृपशब्दः येन, तम्

**विकसितकृतमौलिं** — विकसितः (उज्वलः) कृतः मौलिः येन तम्

**नवशशिनमिव जनौघैर्वन्द्यमानम्** — ಇದೇ ಭಾವವನ್ನು ಕಾಳಿದಾಸನು ರಘುವಂಶದಲ್ಲಿ ತಂದಿದ್ದಾನೆ. ನೋಡಿ :

नेत्रैः पपुः तृप्तिमनाप्नुवद्भिः नवोदयं नाथमिवौषधीनाम् ॥

(ರ. ವಂ; ಸರ್ಗ 2; ಶ್ಲೋಕ 73)

**ಶ್ಲೋಕ 13** (ಅನುಷ್ಟುಪ್) — आर्याभिषकेण नष्टकलमषं एतत् मे कुलं सोमस्य उदये जगत् इव पुनः प्रकाशतां याति।

(ಆರ್ಯನಾದ) ಅಣ್ಣನ ಅಭಿಷೇಕದಿಂದ ಈ ನನ್ನ ವಂಶವು ನಿರ್ಮಲಗೊಂಡು ಚಂದ್ರನ ಉದಯದಿಂದ ಜಗತ್ತು ಪ್ರಕಾಶಗೊಳ್ಳುವಂತೆ ಮತ್ತೆ ಪ್ರಕಾಶ ಗೊಳ್ಳುತ್ತಿದೆ.

[illegible] — ಮೊದಲನೆಯ ಅಂಕದಲ್ಲಿ ರೋಷದಿಂದ ಬಿಲ್ಲೆತ್ತಿಕೊಂಡು ಬಂದು ಹೌಹಾರಿದ ಲಕ್ಷ್ಮಣನಿಗೆ ಸಮಾಧಾನ ತರಲು ಈ ಮಾತನ್ನು ಹೇಳಿದಂತಿದೆ.

[illegible] — 'ಸಹಾಯಕರ ಅನುಗ್ರಹದಿಂದ ನನ್ನ ಈ ಅಭ್ಯುದಯ ಎಂದು ತಿಳಿಸು. ವಿಭೀಷಣ, ಸುಗ್ರೀವ, ಆಂಜನೇಯ ಮೊದಲಾಗಿ ರಾಕ್ಷಸರೂ ಕಪಿಗಳೂ ಅಭಿಷಿಕ್ತನಾದ ರಾಮನಿಗೆ ಅಭಿನಂದನೆಗಳನ್ನು ಕಂಚುಕಿಯ ಮುಖಾಂತರ ಕಳುಹಿಸುತ್ತಾರೆ. ರಾಮನು ಅವರು ಮಾಡಿದ ಸಹಾಯವನ್ನು ಕೃತಜ್ಞತೆಯಿಂದ ಸ್ಮರಿಸಿಕೊಂಡು ವಿನಯಪೂರ್ಣ ಉತ್ತರವನ್ನು ಕಳಿಸುತ್ತಾನೆ.

[illegible] . . . [illegible] — ನಾನು ಕೃತಕೃತ್ಯೆಯಾದೆ. ಇನ್ನು ರಾಮನ ಅಭಿಷೇಕವನ್ನು ಅಯೋಧ್ಯೆಯಲ್ಲಿ ನೋಡಲು ತವಕಗೊಂಡಿದ್ದೇನೆ. ಕೈಕೇಯಿಗೆ ರಾಮನ ಈ ಅಭ್ಯುದಯವನ್ನು ಮತ್ತೊಮ್ಮೆ ಕಾಣುವ ಬಯಕೆ. ನಾಟಕ ಮುಗಿಯುವ ಮುನ್ನ ಕವಿ ಅವಳ ಉದಾತ್ತವಾದ ಅಭಿಲಾಷೆಯನ್ನು ಮತ್ತೆ ಜ್ಞಾಪಿಸುವಂತಿದೆ.

ಪುಟ 61

[illegible] . . . . [illegible] — ಏನಿದು ಬೆಳಕು! ವನವೆಲ್ಲ ಸೂರ್ಯನಂತೆ ಹೊಳೆಯುತ್ತಿದೆ. ಓ ಗೊತ್ತಾಯಿತು ; ರಾವಣನ ಪುಷ್ಪಕ ಆಕಾಶದಲ್ಲಿ ಆಗಮಿಸಿತು.

[illegible] — ನೆನೆದಾಗ ಬರಬೇಕೆಂಬುದೇ ಇದರ ಸಂಕೇತ ಧರ್ಮ. ಹಿಂದೆ ರಾವಣನು ಸೀತೆಯನ್ನು ಅಪಹರಿಸಿ ಹೋಗಲು ಬಂದಾಗ ಇದ್ದ ಕರಾಳ ಛಾಯೆ ಈಗ ಇಲ್ಲ ; ಈಗ ಎಲ್ಲ ಪ್ರಕಾಶ, ಹೊಳಪು. ಕವಿ ಇಲ್ಲಿ ಈ ವ್ಯತ್ಯಾಸವನ್ನು ಧ್ವನಿತಗೊಳಿಸುವಂತೆ ಕಾಣುತ್ತದೆ

ಶ್ಲೋಕ 14 (ಇಂದ್ರವಜ್ರಾ)—राम: अद्य एव सम्बन्धिमित्रैः अनुगम्यमानः अयोध्यां पुरीं यास्यामि। (लक्ष्मणः) अद्यैव (उदयस्थं) त्वां नागराः सनक्षत्रं [illegible] [illegible] इव पश्यन्तु च।

(ರಾಮ) ಸಂಬಂಧಿ ಮಿತ್ರರೊಂದಿಗೆ ಕೂಡಿ ಈಗಲೇ ಅಯೋಧ್ಯಾನಗರಿಗೆ ತೆರಳುವೆನು. (ಲಕ್ಷ್ಮಣ) ನಕ್ಷತ್ರಗಳೊಂದಿಗೆ ಉದಯಪರ್ವತಾರೂಢನಾಗಿರುವ ಚಂದ್ರನಂತೆ ಸಿಂಹಾಸನಾರೂಢನಾಗಿರುವ ನಿನ್ನನ್ನು ಇಂದೇ ಪೌರರು ನೋಡಲಿ. (ಉಪಮಾಲಂಕಾರ)

[illegible] — (ಚಂದ್ರನ ಪರವಾಗಿ) ಉದಯಗಿರಿಯಲ್ಲಿರುವ, (ರಾಮನ ಪರವಾಗಿ) ಸಿಂಹಾಸನಾರೂಢನಾಗಿರುವ.

**ಶ್ಲೋಕ 15** (ಅನುಷ್ಟುಪ್) — यथा जानक्या बन्धुभिः च समगतः रामः तथा लक्ष्म्या समायुक्तः नः राजा भूमिं प्रशास्तु ।।

ಯಾವರೀತಿ ಜಾನಕಿಯೊಡನೆಯೂ ಬಂಧುಗಳೊಡನೆಯೂ ಕೂಡಿಕೊಂಡ ರಾಮನು ಪ್ರಜೆಗಳನ್ನು ಆಳಿದನೋ ಅದೇ ರೀತಿ ಲಕ್ಷ್ಮಿಯೊಂದಿಗೆ ಕೂಡಿದ ನಮ್ಮ ರಾಜನು ಭೂಮಿಯನ್ನು ಆಳಲಿ. (ಉಪಮಾಲಂಕಾರ).

**भरतवाक्यम्** — ನಾಟಕದ ಕೊನೆಯಲ್ಲಿ ಬರುವ ಶುಭಾಶಂಸನ ವಾಕ್ಯ. भरतस्य (नरस्य) अनुकर्तुः वाक्यम् ನಾಟ್ಯಶಾಸ್ತ್ರ ಪ್ರಣೇತೃವಾದ ಭರತಮಹರ್ಷಿಗೆ ಗೌರವ ಸೂಚಿಸಲು ಇದನ್ನು ಭರತವಾಕ್ಯವೆಂದು ಕರೆಯಲಾಗಿದೆಯೆಂದೂ ಕೆಲವರ ಅಭಿಪ್ರಾಯ. ಭಾಸನ ನಾಟಕಗಳು ಸಣ್ಣ ಪುಟ್ಟ ವ್ಯತ್ಯಾಸಗಳೊಡನೆ — 'राजासिंह : प्रशास्तु नः' ಎಂದು ಪರಿಸಮಾಪ್ತಿಗೊಳ್ಳುತ್ತವೆ.

'ಏಳನೆಯ ಅಂಕ ನಾಟಕದ ಕೊನೆಯ ಅಂಕ. ಮೊದಲ ಅಂಕದ ಆದಿಯಲ್ಲಿ ಕಂಡುಬಂದ ಸಂಭ್ರಮದಂತೆಯೇ ಇಲ್ಲಿಯೂ ಸಂಭ್ರಮ. ಆಗ ಕಾರ್ಗತ್ತಲಿನ ಮುನ್ನಿನ ಸಂಧ್ಯಾಕಾಲವಾದರೆ ಈಗ ದಿವ್ಯ ಬೆಳಕಿನ ಮುನ್ನಿನ ಉಷಃಕಾಲ. ಆಗ ದಶರಥನನ್ನು ಗ್ರಾಸಮಾಡಿಕೊಳ್ಳಲು ಮೃತ್ಯುದೇವತೆ ಕಾದು ಕುಳಿತಿರುವ ಅರಮನೆಗೆ ಬದಲಾಗಿ, ಕಷ್ಟಪರಂಪರೆಗಳನ್ನು ಕಳೆದುಕೊಂಡು ನಿಶ್ಚಿಂತನಾದ ಸೀತಾರಾಮನನ್ನೊಳಗೊಂಡ ಪವಿತ್ರ ಋಷ್ಯಾಶ್ರಮ.' (ಎ. ಆರ್. ಕೃಷ್ಣಶಾಸ್ತ್ರಿ) ಅಪೂರ್ವ ಪ್ರೇಮದ ಸಂಸಾರ ; ಎಲ್ಲವೂ ಮಂಗಳಾಂತ.

# श्लोकानुक्रमणी

# ಸುಭಾಷಿತಗಳು

अतः परं न भ्रातुः परिवादं श्रोतुमिच्छामि ।
अनुचरति शशाङ्कं राहुदोषेऽपि तारा ।
अलमुपहतासु स्त्रीबुद्धिषु स्वमार्जवमुपनिक्षेप्तुम् ।
अल्पं तुल्यशीलानि द्वन्द्वानि सृज्यन्ते ।
अहो बलवान् मृत्युरेतामपि रक्षामतिक्रान्तः ।
ईदृग्विधाः पुरुषविशेषाः ईदृशीमापदं प्राप्नुवन्तीति विधिरनतिक्रमणीयः ।
एवं नृपतिहीनाः हि विलयं यान्ति वै प्रजाः ।
कष्टं वनं स्त्रीजनसौकुमार्यं समं लताभिः कठिनीकरोति ।
का नाम माता पुत्रस्यापराधं न मर्षयति ।
कुतः क्रोधो विनीतानां लज्जा वा कृतचेतसाम् ।
गुण इव बह्वपराद्धमायुषा मे ।
छायां परिहृत्य शरीरं न लङ्घयामि ।
त्यजति न च करेणुः पङ्कलग्नं गजेन्द्रम् ।
तिर्यग्योनयोपि उपकृतमवगच्छन्ति ।
न न्याय्यं परदोषमभिधातुम् ।
नायोध्या तं विनायोध्या सायोध्या यत्र राघवः ।
निम्नस्थलोत्पादको हि कालः ।
निर्दोषदृश्याहि भवन्ति नार्यो यज्ञे विवाहे व्यसने वने च ।
पतति च वनवृक्षे याति भूमिं लता च ।
पिपासार्तोऽनुधावामि क्षीणतोयां नदीमिव ।
बहुदोषाण्यरण्यानि ।
बहुवृत्तान्तानि राजकुलानि नाम ।
भर्तृनाथा हि नार्यः ।
राज्यं नाम मुहूर्तमपि नोपेक्षणीयम् ।
राम इत्यक्षरैरल्पैः स्थाने व्याप्तमिदं जगत् ।
वार्षलस्तु प्रणामः स्यात् अमन्त्रार्चितदैवतः ।
शरीरेऽरिः प्रहरति हृदये स्वजनस्तथा ।
सर्वशोभनीयं सुरूपं नाम ।
सर्वोऽपि मृदुः परिभूयते ।
सुलभापराधः परिजनो नाम ।
स्वः पुत्रः कुरुते पितुर्यदि वचः कस्तत्र विस्मयः ।
हस्तस्पर्शो हि मातॄणामजलस्य जलाञ्जलिः ॥

# ಛಂದೋವಿಜ್ಞಾನ

ಸಂಸ್ಕೃತ ಪದ್ಯ ಅಥವಾ ಶ್ಲೋಕದಲ್ಲಿ ನಾಲ್ಕು ಪಾದಗಳಿರುತ್ತವೆ. ವೃತ್ತ ಅಥವಾ ಛಂದಸ್ಸನ್ನು ನಿರ್ಧರಿಸಲು ಎಂಟು ಗಣಗಳನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಗಣವೆಂದರೆ ಒಂದಾದ ಮೇಲೆ ಒಂದರಂತೆ ಬರುವ ಮೂರು ಸ್ವರಗಳ ಸಮುದಾಯ. ಒಂದೊಂದು ಗಣದಲ್ಲಿಯೂ ಮೂರು ಮೂರು ಅಕ್ಷರಗಳಿರುತ್ತವೆ. ಅವುಗಳ ಹೆಸರು ಮತ್ತು ಲಕ್ಷಣವನ್ನು ಈ ಶ್ಲೋಕದಲ್ಲಿ ಸ್ಪಷ್ಟಪಡಿಸಲಾಗಿದೆ.

आदिमध्यावसानेषु यरता यान्ति लाघवम् ।
भजसा गौरवं यान्ति मनौ तु गुरुलाघवे ।।

य–गण, र–गण, त–गण ಗಳಲ್ಲಿ ಕ್ರಮವಾಗಿ ಮೊದಲನೆಯ ಎರಡನೆಯ ಹಾಗೂ ಮೂರನೆಯ ಅಕ್ಷರಗಳು ಲಘು; ಉಳಿದ ಎರಡು ಅಕ್ಷರಗಳು ಗುರುಗಳು. भ–गण, ज–गण ಮತ್ತು स–गण ಗಳಲ್ಲಿ ಕ್ರಮವಾಗಿ ಮೊದಲನೆಯ ಎರಡನೆಯ ಹಾಗೂ ಕೊನೆಯ ಅಕ್ಷರಗಳು ಗುರು; ಉಳಿದ ಎರಡೂ ಲಘು; म–गण ಮತ್ತು न–गण ಗಳಲ್ಲಿ ಮೊದಲನೆಯದು ಮೂರೂ ಗುರು, ಎರಡನೆಯದು ಮೂರೂ ಲಘು. ಇಲ್ಲಿ ಹ್ರಸ್ವ ಸ್ವರಗಳನ್ನೂ ಲಘುವೆಂದೂ, ಎಲ್ಲ ದೀರ್ಘಸ್ವರಗಳನ್ನೂ ಗುರುವೆಂದೂ ಭಾವಿಸಲಾಗಿದೆ. ಅಲ್ಲದೆ ಸಂಯುಕ್ತಾಕ್ಷರದ, ಅನುಸ್ವಾರದ ಅಥವಾ ವಿಸರ್ಗದ ಹಿಂದಿರುವ ಹ್ರಸ್ವವನ್ನೂ ಅಥವಾ ಪಾದದ ಕೊನೆಯ ಹ್ರಸ್ವವನ್ನೂ ಗುರುವೆಂದೇ ಭಾವಿಸಲಾಗಿದೆ.

सानुस्वारश्च दीर्घश्च विसर्गी च गुरुर्भवेत् ।
वर्णः संयोगपूर्वश्च तथा पादान्तगोऽपि वा ।।

'U' ಗುರುತು ಲಘುವನ್ನೂ (ಲ) '—' ಗುರುತು ಗುರುವನ್ನೂ (ಗು) ಸೂಚಿಸುತ್ತವೆ ಎಂದು ಭಾವಿಸಿ ಎಂಟು ಗಣಗಳನ್ನು ಈ ರೀತಿ ಸ್ಪಷ್ಟಪಡಿಸಬಹುದು,

(1) य गण U – –
(2) र गण – U –
(3) त गण – – U
(4) भ गण – U U
(5) ज गण U – U
(6) स गण U U –
(7) म गण – – –
(8) न गण U U U

ಶ್ಲೋಕ ಅಥವಾ ಪದ್ಯವು 'ವೃತ್ತ' ವಾಗಿರಬಹುದು. ಅಥವಾ 'ಜಾತಿ' ಯಾಗಿರಬಹುದು. ವೃತ್ತದ ನಿರ್ಧಾರಕ್ಕೆ ಮೇಲೆ ಸೂಚಿಸಿರುವ ಗಣವೇ ಆಧಾರ. ಇದಕ್ಕೆ 'ವರ್ಣಛಂದಸ್ಸು' ಎಂದು ಹೆಸರು. 'ಜಾತಿಯ' ನಿರ್ಧಾರ ಪ್ರತಿ ಪಾದದಲ್ಲಿ ಬರುವ 'ಮಾತ್ರೆ'ಯ ಆಧಾರದ ಮೇಲೆ. ಇದಕ್ಕೆ 'ಮಾತ್ರಾಛಂದಸ್ಸು' ಎಂದು ಹೆಸರು. ಮಾತ್ರೆ ಎಂದರೆ ಕಣ್ಣುಮುಚ್ಚಿ ತೆಗೆಯುವುದರೊಳಗೆ ಆಗುವ ಕಾಲದಲ್ಲಿ ಉಚ್ಚರಿಸಲ್ಪಡುವ ಧ್ವನಿಯ ಕಾಲಾವಧಿ. 'ಆರ್ಯಾ' ಎನ್ನುವುದು ಜಾತಿಗೆ ಉದಾಹರಣೆಯಾದರೆ

'ವಸಂತತಿಲಕಾ' ವೃತ್ತಕ್ಕೆ ಉದಾಹರಣೆ. ನಾಲ್ಕು ಪಾದಗಳೂ (ಗಣಗಳಿಂದ) ಒಂದೇ ವಿಧವಾಗಿದ್ದರೆ ಅದಕ್ಕೆ 'ಸಮವೃತ್ತ' ಎಂದು ಹೆಸರು. ಮೊದಲನೆ ಮತ್ತು ಮೂರನೆಯ ಪಾದಗಳು ಪರಸ್ಪರ ಒಂದೇ ವಿಧವಾಗಿದ್ದು, ಹಾಗೆಯೇ ಎರಡನೆಯ ಮತ್ತು ನಾಲ್ಕನೆಯ ಪಾದಗಳು ಪರಸ್ಪರ ಒಂದೇ ವಿಧವಾಗಿದ್ದರೆ ಅದಕ್ಕೆ "ಅರ್ಧ-ಸಮವೃತ್ತ" ಎಂದು ಹೆಸರು. ನಾಲ್ಕು ಪಾದಗಳೂ ಪರಸ್ಪರ ವಿಭಿನ್ನವಾಗಿದ್ದರೆ ಅದಕ್ಕೆ "ವಿಷಮವೃತ್ತ" ಎಂದು ಹೆಸರು. "ವಿಷಮವೃತ್ತ" ದಲ್ಲಿರುವ ಪದ್ಯಗಳು ಅಪರೂಪ.

ಪ್ರತಿಮಾನಾಟಕದಲ್ಲಿ ಒಟ್ಟು 158 ಪದ್ಯ (ಶ್ಲೋಕ) ಗಳಿವೆ. ಅಂಕ I – 31; ಅಂಕ II – 21; ಅಂಕ III – 25; ಅಂಕ IV – 28; ಅಂಕ V – 22; ಅಂಕ VI – 16 ಅಂಕ VII – 15.

ಇವುಗಳಲ್ಲಿ 75 ಶ್ಲೋಕಗಳು ಅನುಷ್ಟುಪ್‌ನಲ್ಲಿಯೂ, 33 ವಸಂತತಿಲಕಾ ವೃತ್ತದಲ್ಲಿಯೂ ಇದ್ದು ಉಳಿದವು ವಿವಿಧ ವೃತ್ತಗಳಲ್ಲಿರುತ್ತವೆ. ಅವುಗಳ ವಿವರಗಳನ್ನು ಇಲ್ಲಿ ಕೊಡಲಾಗಿದೆ.

**अनुष्टुप्–** पञ्चम लघु सर्वत्र सप्तमं द्विचतुर्थयो:।
8 × 4 गुरु षष्ठं च पादानां चतुर्णां स्यादनुष्टुभि ॥

**इन्द्रवज्रा–** स्यादिन्द्रवज्रा यदि तौ जगौ ग:
11 × 4 (त त ज + गु गु)

**उपजाति** ಇಂದ್ರವಜ್ರಾ ಮತ್ತು ಉಪೇಂದ್ರವಜ್ರಾ ವೃತ್ತಗಳ ಬೆರಕೆ ಮೇಲೆ 'ಇಂದ್ರವಜ್ರಾ' ವೃತ್ತದ ಲಕ್ಷಣ ಹೇಳಿದೆ. 'ಉಪೇಂದ್ರವಜ್ರಾ ವೃತ್ತದ ಲಕ್ಷಣವಿದು:

**उपेन्द्रवज्रा** — उपेन्द्रवज्रा जतजास्ततो गौ (ज त ज + गु गु)

**शालिनी** — मात्तौ गौ चेच्छालिनी वेदलोकै:
11 × 4 (म त त + गु गु)

**वंशस्थ** — जतौ तु वंशस्थमुदीरितं जरौ (ज त ज र) 12 × 4

**पुष्पिताग्रा** — ಒಂದನೆ ಮತ್ತು ಮೂರನೆಯ ಪಾದಗಳಲ್ಲಿ 12 ಅಕ್ಷರಗಳೂ (न न र य) ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ 13 ಅಕ್ಷರಗಳೂ ಇರುತ್ತವೆ (न ज ज र + गु)
अयुजि नयुगरेफतो यकारो युजि च नजौ जरगश्च पुष्पिताग्रा।

**प्रहर्षिणी** —त्र्याशाभिर्मनजरगाः प्रहर्षिणीयम् ।
13 × 4 (म न ज र + गु)

**वसन्ततिलका** — उक्ता वसंन्ततिलका तभजा जगौ गः
14 × 4 (त भ ज ज + गु गु)

**मालिनी** — ननमयययुतेयं मालिनी भोगिलोकैः
15 × 4 (न न म य य)

**शिखरिणी** — रसै रुद्रैश्छिन्ना यमनसभलागः शिखरिणी ।
17 × 4 (य म न स भ + ल + गु)

**हरिणी** — नसमरसलागः षड्वेदैर्हयैर्हरिणी मता ।
17 × 4 (न स म र स + ल + गु)

**शार्दूलविक्रीडितम्** — सूर्याश्वैर्यदि मः सजौ सततगाः
19 × 4 शार्दूलविक्रीडितम् । (म स ज स त त + गु)

**सुवदना** — ज्ञेया सप्ताश्वषड्भिर्मरभनययुता म्लौ गः
20 × 4 सुवदना । (म र भ न य म + ल + गु)

**स्रग्धरा** — म्रभ्नैर्यानां त्रयेण त्रिमुनि यतियुता
21 × 4 स्रग्धरा कीर्तितेयम् । (म र भ न य य य)

**आर्या**—यस्याः पादे प्रथमे द्वादशमात्रास्तथा तृतीयेऽपि ।
अष्टादश द्वितीये चतुर्थके पञ्चदश सार्या ।।

ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ 12 ಮಾತ್ರೆಗಳೂ ಎರಡನೆಯ ಪಾದದಲ್ಲಿ 18 ಮಾತ್ರೆಗಳೂ ಮತ್ತು ನಾಲ್ಕನೆಯ ಪಾದದಲ್ಲಿ 15 ಮಾತ್ರೆಗಳೂ ಉಳ್ಳದ್ದು.

# नाटकादिलक्षणम्

नाटकम् – वीरशृङ्गारयोरेकः प्रधानं यत्र वर्ण्यते ।
प्रख्यातनायकोपेतं नाटकं तदुदाहृतम् ।।

पूर्वरङ्गः – यन्नाट्यवस्तुनः पूर्वं रङ्गविघ्नोपशान्तये ।
कुशीलवाः प्रकुर्वन्ति पूर्वरङ्गः स उच्यते ।।

नान्दी – आशीर्वचनसंयुक्ता नित्यं यस्मात् प्रयुज्यते ।
देवद्विजनृपादीनां तस्मान्नान्दीति संज्ञिता ।।

सूत्रधारः – आसूत्रयन् गुणान् नेतुः कवेरपि च वस्तुनः ।
रङ्गप्रसाधनप्रौढः सूत्रधार इहोदितः ।।

नेपथ्यम – कुशीलवकुटुम्बस्य स्थलं नेपथ्यमुच्यते ।

प्रस्तावना स्थापना वा – सूत्रधारो नटीं ब्रूते मारिषं वा विदूषकम् ।
स्वकार्यं प्रस्तुताक्षेपि चित्रोक्त्या यत्तदामुखम् ।।

शुद्धमिश्र-विष्कम्भौ – वृत्तवर्तिष्यमाणानां कथांशानां निदर्शकः ।
संक्षेपार्थस्तु विष्कम्भो मध्यपात्रप्रयोजितः ।।
एकानेकगतः शुद्धः संकीर्णो नीचमध्ययोः ।।

प्रवेशकः – तद्वदेवानुदात्तोक्त्या नीचपात्रप्रयोजितः । प्रवेशः ।।

प्रकाशस्वगते – सर्वश्राव्यं प्रकाशं स्यादश्राव्यं स्वगतं मतम् ।

अपवारितम् – रहस्यं कथ्यतेऽन्यस्य परावृत्यापवारितम् ।

आकाशभाषितम् – किं ब्रवीष्येवमित्यादि विना पात्रं ब्रवीति यत् ।
श्रुत्वेवानुक्तमप्येकस्तत् स्यादाकाशभाषितम् ।।

करुणः – इष्टनाशादनिष्टाप्तेः शोकात्मा करुणः ।

वीरः – विभावैरनुभावैश्च स्वोचितैर्व्यभिचारिभिः ।
नीतः सदस्यरस्यत्वमुत्साहो वीर उच्यते ।।

काञ्चुकीयः – ये नित्यं सत्यसम्पन्नाः कामदोषविवर्जिताः
ज्ञानविज्ञानकुशलाः काञ्चुकीयास्तु ते स्मृताः ।।

शुभम् ।

# ಗ್ರಂಥಋಣ

(1) प्रतिमानाटकम् ... ಮಹಾಮಹೋಪಾಧ್ಯಾಯ ಪಂಡಿತ ಟಿ. ಗಣಪತಿಶಾಸ್ತ್ರಿಗಳಿಂದ ಆದ ಸಂಸ್ಕರಣ. ಅವರದೇ ಆದ ವ್ಯಾಖ್ಯಾನದಿಂದ ಕೂಡಿರುವುದು (ಅನಂತಶಯನ, 1924).

(2) प्रतिमानाटकम् ... ಶಿವರಾಮ ಮಹದೇವ ಪರಂಜಪೆಯವರಿಂದ ಸಂಪಾದಿತವಾದುದು. ಓರಿಯಂಟಲ್ ಬುಕ್ ಏಜೆನ್ಸಿ, ಪೂನ, 1930.

(3) प्रतिमानाटकम् ... ಎಂ. ಆರ್. ಕಾಳೆಯವರಿಂದ ಸಂಪಾದಿತವಾದುದು (ಅವರದೇ ವ್ಯಾಖ್ಯೆಯಿಂದ ಕೂಡಿರುವುದು.)

(4) ಕರ್ಣಾಟ ಪ್ರತಿಮಾನಾಟಕಮ್ ಆಸ್ಥಾನ ಮಹಾವಿದ್ವಾನ್ ಮೈಸೂರು ಸೀತಾರಾಮಶಾಸ್ತ್ರಿ (ಅನುವಾದ), ಶಾರದಾ ಮಂದಿರ, ರಾಮಯ್ಯರ್ ರಸ್ತೆ, ಮೈಸೂರು, 1962.

(5) ಕನ್ನಡ ಪ್ರತಿಮಾನಾಟಕ ... ಡಾ. ಕೆ. ಕೃಷ್ಣಮೂರ್ತಿ (ಅನುವಾದ), ಶ್ರೀ ಲಕ್ಷ್ಮೀ ಬುಕ್ ಹೌಸ್, ಕೃಷ್ಣಮೂರ್ತಿಪುರಂ, ಮೈಸೂರು, 1965 (ನಾಲ್ಕನೆಯ ಮುದ್ರಣ).

(6) ಸಂಸ್ಕೃತ ನಾಟಕ ... ಪ್ರೊ. ಎ. ಆರ್. ಕೃಷ್ಣಶಾಸ್ತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1937.

(7) ಭಾಸ ಕವಿ ... ಪ್ರೊ. ಎ. ಆರ್. ಕೃಷ್ಣಶಾಸ್ತ್ರಿ, ಶಾರದಾ ಮಂದಿರ, ಮೈಸೂರು, 1947 (ನಾಲ್ಕನೆಯ ಮುದ್ರಣ).

(8) ಭಾಸ ಮಹಾಕವಿ ... ಪ್ರೊ. ಸಿ.ಕೆ. ವೆಂಕಟರಾಮಯ್ಯ, ಬೆಂಗಳೂರು 1937.

(9) ಭಾಸ ... ಹೆಚ್. ಎಲ್. ಹರಿಯಪ್ಪ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು 1958.

(10) Bhasa ... A. D. Pusalkar.

(11) Plays Ascribed to Bhasa A. P. S. Ayyar.

(12) Some Problems of Indian Literature M. Winternitz. University of Calcutta, 1935.

(13) Sanskrit Literature. Talks broadcast over A. I. R. Selected and Edited by Dr. V. Raghavan, Publications Division, Delhi 6. 1961. — Bhasa I—B.C. Chhabra. Bhasa II—K. R. Deshpande.

**1994–95ನೇ ಸಾಲಿನ ಪದವಿ ತರಗತಿಗಳಿಗೆ ನಿಗದಿಪಡಿಸಿರುವ**
**ಕನ್ನಡ ಮತ್ತು ಸಂಸ್ಕೃತ ಪಠ್ಯ ಪುಸ್ತಕಗಳು (ಪ್ರಸಾರಾಂಗದ ಪ್ರಕಟಣೆಗಳು)**

---

**ಪ್ರಾಚೀನ ಕಾವ್ಯ ವರ್ಗ-4**
(ಮೊದಲನೆಯ ಬಿ.ಎ., ಬಿ.ಎಸ್‌ಸಿ., ಬಿ.ಕಾಂ)

**ಆಯ್ದ ಕಥನ ಕವನಗಳು**
(ಮೊದಲನೆಯ ಬಿ.ಎ. ಐಚ್ಛಿಕ)

**ಸಮಕಾಲೀನ ಕನ್ನಡ ಕವಿತೆ ಭಾಗ-4**
(ಎರಡನೆಯ ಬಿ.ಎ., ಬಿ.ಎಸ್‌ಸಿ., ಬಿ.ಕಾಂ.)

**ವಿಚಾರ ಸಾಹಿತ್ಯ ಭಾಗ-3**
(ಎರಡನೆಯ ಬಿ.ಎ., ಬಿ.ಎಸ್‌ಸಿ.)

**ವಾಣಿಜ್ಯ ಕನ್ನಡ ಪರಿಚಯ**
(ಎರಡನೆಯ ಬಿ.ಕಾಂ.)

**ಸಂಗ್ರಹ ಷಟ್ಪದಿ**
**ಶರಣ ಕಥಾ ಮಂಜರಿ**
**ಕೀರ್ತನ ಸಾಹಿತ್ಯ**
(ಎರಡನೆಯ ಬಿ.ಎ. ಐಚ್ಛಿಕ)

**ಹಳೆಯ ಗದ್ಯ ಸಾಹಿತ್ಯ ಭಾಗ-3**
(ಮೂರನೆಯ ಬಿ.ಎ. ಐಚ್ಛಿಕ)

**ವಚನ ಕಮ್ಮಟ**
(ಮೂರನೆಯ ಬಿ.ಎ. ಐಚ್ಛಿಕ)

**ಕೇಶಿರಾಜ ವಿರಚಿತ ಶಬ್ದಮಣಿ ದರ್ಪಣಂ (ಸಂಗ್ರಹ)**
(ಮೂರನೆಯ ಬಿ.ಎ. ಐಚ್ಛಿಕ)

**ಭಾಸನ ಪ್ರತಿಮಾ ನಾಟಕಂ**

**ಕಾಳಿದಾಸನ ರಘುವಂಶ**